ಕಾದಂಬರಿ ಪ್ರಕಾಶನ ೧

# ಬೆಂಗಳೂರಿಗೊಂದು ಟಿಕೀಟು

ಕಾದಂಬರಿ



ಬಸವರಾಜ ಕಟ್ಟೀಮನಿ



ಕಾದಂಬರಿ ಪ್ರಕಾಶನ

ಧಾರವಾಡ-೧



ಒಂದು ಕಪ್, ಇನ್ನೊಂದು ಕಪ್, ಮತ್ತೊಂದು ಕಪ್....

ಹಾಗೇ ಕುಡಿಯುತ್ತಲೇ ಇದ್ದೆ.

ಮೂರು ಕಪ್ ಕುಡಿದರೂ ಸಾಕೆನಿಸಲಿಲ್ಲ.

ಎಷ್ಟು ಕುಡಿದರೂ ತೃಪ್ತಿಯಾಗುವಂತಿರಲಿಲ್ಲ ಒಂದೇ ಒಂದು ವರ್ಷದಲ್ಲಿ ನಾನೊಬ್ಬ ಭಾರೀ ಕುಡುಕನೆಂಬ ಖ್ಯಾತಿ ಪಡೆದಿದ್ದೆ.

ಅದೂ ಒಂದು ಹೆಮ್ಮೆಯ ವಿಷಯವೇ ಅಲ್ಲವೆ ? ಜಂಬ ಕೊಚ್ಚಿಕೊಳ್ಳಲು ಇನ್ನೇನೂ ಇಲ್ಲದಿರುವಾಗ ಸೆರೆ ಕುಡಿಯುವ ಶೌರ್ಯವನ್ನಾದರೂ ಹೇಳಿಕೊಳ್ಳಬಹುದಲ್ಲ ?

ಪಾನಪ್ರತಿಬಂಧಕ ಕಾನೂನು ಬಂದು ಹತ್ತು ಹನ್ನೆರಡು ವರ್ಷ ಆಗಿರಬಹುದು. ಜಿಲ್ಲೆಯ ಮುಖ್ಯಸ್ಥಳವಾದ ಈ ನಗರದಲ್ಲೂ ಹೆಸರಿಗೆ ಮಾತ್ರ ಕಾಯದೆಯೇನೊ ಇದೆ. ತಿಂಗಳಿಗೆ ಎಂಟು ಹತ್ತು ಜನ ಕುಡುಕರನ್ನೂ ಬಂಧಿಸುತ್ತಾರೆ ಪೋಲೀಸರು. ಯಾವಾಗಲೋ ಒಮ್ಮೆ, ಸೆರೆ ಮಾರುವ ಜನರನ್ನು ಹಿಡಿದು ಲಾಕಪ್ಪಿಗೆ ಹಾಕುತ್ತಾರೆ. ಪೋಲೀಸ್ ಮಂತ್ರಿ ನಗರಕ್ಕೆ ಭೆಟ್ಟಿ ಕೊಡುವುದಿದ್ದರೆ ಇದ್ದುದಿದ್ದಂತೆಯೇ ಈ ಬಂಧನಗಳಿಗೆ ಸುಗ್ಗಿ ಬರುತ್ತದೆ. ತಮ್ಮ ಪೋಲೀಸ್‌ಖಾತೆ ಎಷ್ಟು ಚೆನ್ನಾಗಿ ಕೆಲಸ ಮಾಡುತ್ತಿದೆಯಪ್ಪ ! ಎಂದುಕೊಂಡು ಮಂತ್ರಿ ಹಿರಿಹಿರಿ ಹಿಗ್ಗುತ್ತಾರೆ. ಅವರು ಅತ್ತ ಹೋಗುವುದೇ ತಡ, ಇತ್ತ ಬಂಧಿತರೆಲ್ಲಾ ಬಿಡುಗಡೆ ಹೊಂದುತ್ತಾರೆ. ಕಳ್ಳ ಭಟ್ಟಿ ಸೆರೆ ಮಾರುವವರಿಗೂ ಸ್ವಾತಂತ್ರ್ಯ, ಕುಡಿಯುವವರಿಗೂ ಸ್ವಾತಂತ್ರ್ಯ, ಇವರಿಂದ ಮಾಮೂಲು ಎಬ್ಬಿಸಲು ಪೋಲೀಸರಿಗೂ ಸ್ವಾತಂತ್ರ್ಯ. ದಿನವೂ ಎರಡು ಮೂರು ಸೀಸೆಗಳಷ್ಟು ಸೆರೆ ಕುಡಿಯುವ ನನ್ನಂಥ ಒಂದನೆಯ ನಂಬರಿನ ಕುಡುಕರು ಸಾವಿರಾರು ಜನರಿರಬಹುದು ನಗರದಲ್ಲಿ. ಪೋಲೀಸರ ಎದುರಿಗೇ ನಾವು ಹಾಯ್ದು

ಹೋದರೂ ಅವರು ಪಿಟ್ಟೆನ್ನುವುದಿಲ್ಲ. ನಮ್ಮ ದುರಭ್ಯಾಸದಿಂದ ಅವರಿಗೆ ಲಾಭವೇ ಇದೆಯೆಂದಾಗ ಅವರೇಕೆ ಅಡ್ಡಿಮಾಡಿಯಾರು ?

ನನಗೆ ಸೆರೆ ಮಾರುವ ಮರಿಯನಿದ್ದಾನಲ್ಲ! ತಪ್ಪಿದೆ... ಈಗ ಆತ ಮರಿಯನಲ್ಲ, ಮರಿಯಪ್ಪ, ಮರಿಯಪ್ಪ ಸೆಟ್ಟಿ, ಮರಿಯಣ್ಣ....ಪಾನಪ್ರತಿ ಬಂಧ ಕಾನೂನು ಬರುವ ಮೊದಲು ಅವಲಕ್ಕಿ ಕಾರಖಾನೆಯಲ್ಲಿ ಕೂಲಿಯಾಗಿ ದುಡಿದು ಹೊಟ್ಟೆ ಹೊರೆಯುತ್ತಿದ್ದ ಮರಿಯ. ದಿನಕ್ಕೆ ಒಂದು ರೂಪಾಯಿ ಕೂಲಿ. ಹೆಂಡತಿ ಮುಸುರೆ ತಿಕ್ಕುವ ಕೆಲಸ ಮಾಡಿ ಅಷ್ಟಿಷ್ಟು ಗಳಿಸುತ್ತಿದ್ದಳು. ಉಡಲು ಸೀರೆಯಿರಲಿಲ್ಲವಂತೆ. ಹಾಗೆಂದು ಅವಳೇ ಹೇಳುತ್ತಾಳೆ ಆಗಾಗ. ಈಗ ಲಾದರೋ ಹತ್ತಿಪ್ಪತ್ತು ಸೀರೆಗಳು, ರೇಶಿಮೆಯ ರವಕೆಗಳು ಮೈತುಂಬಾ ಬಂಗಾರ. ಮೊದಲು ನಾಲ್ಕು ರೂಪಾಯಿಯ ಬಾಡಿಗೆಮನೆಯಲ್ಲಿದ್ದ ಮರಿಯ ಇಂದು ದೊಡ್ಡದೊಂದು ಮನೆಯನ್ನೇ ಕಟ್ಟಿಸಿ ಅದನ್ನು ಬಾಡಿಗೆಗೆ ಕೊಟ್ಟು ತಾನು ಮಾತ್ರ ಸ್ಟೇಶನ್‌ರೋಡಿನ ಸಂದಿಯಲ್ಲಿರುವ ಈ ದರಿದ್ರ ಮನೆಯಲ್ಲಿಯೇ ವಾಸವಾಗಿದ್ದಾನೆ. ಈ ಮನೆಯ ಆಚೆ ಈಚೆ ಕಡುಬಡವರೇ ನೆಲಸಿದ್ದಾರೆ. ಇವರಿಗಾಗಿ ನಗರಸಭೆಯವರು ಕಟ್ಟಿಸಿದ ಸಾರ್ವಜನಿಕ ಕಕ್ಕಸದ ಹಿಂಭಾಗದಲ್ಲಿ ಮರಿಯನ ಮನೆಯಿದೆ. ಮೇಲ್ತರಗತಿಯ ಜನರು ಈ ಓಣಿಯಲ್ಲಿ ಅಡಿಯಿರಿಸುವುದೇ ಅಪರೂಪ. ಯಾವಾಗಲೂ ಹೊಲಸು ನಾರುವ ಆ ಕಕ್ಕಸದ ಹತ್ತಿರವಂತೂ ಅಂಥವರು ಎಂದೂ ಸುಳಿಯಲಾರರು. ಮರಿಯ ಒಲು ಘಾಟಿ; ಕಳ್ಳ ಸೆರೆಯ ಕಳ್ಳವ್ಯಾಪಾರಕ್ಕೆ ಇಂಥ ಸ್ಥಳವೇ ಸರಿಯಾದುದೆಂದು ಕಂಡುಕೊಂಡು ಅತ್ಯಂತ ಅಗ್ಗದ ಬೆಲೆಗೆ ಆ ಮನೆ ಖರೀದಿಮಾಡಿ ಅಲ್ಲಿ ನೆಲಸಿದ್ದಾನೆ.

ಮರಿಯನಿಗೆ ಸೆರೆ ಸರಬರಾಜು ಮಾಡುವವರು ಯಾರು ? ಸಮೀಪದಲ್ಲಿಯೇ ಅವನದೊಂದು ಕಳ್ಳಭಟ್ಟಿಯೂ ಇದೆಯೆಂದು ಕೇಳಿದೇನೆ. ಆದರೆ ಈ ಬಗೆಗೆ ನಾನು ಹೆಚ್ಚು ಚಿಕಿತ್ಸೆ ಮಾಡಲು ಹೋಗಿಲ್ಲ. ಅದನ್ನೆಲ್ಲ ತೆಗೆದುಕೊಂಡು ಮಾಡುವುದಾದರೂ ಏನು ? ನನಗೆ ಬೇಕಾದುದು ಸೆರೆ. ಅದು ಮರಿಯನಲ್ಲಿ ದೊರೆಯುತ್ತದೆ. ದಿನವೂ ಎರಡು ಸೀಸೆಗಳಷ್ಟು ಸೆರೆ ಕುಡಿದರೂ ಆತ ಬೇಡವೆನ್ನುವುದಿಲ್ಲ. ಕುಡಿದ ಸೆರೆಗೆ ಹಣ ಕೊಡಬೇಕಾದ ಅಗತ್ಯವೇನೂ ಇಲ್ಲವೆಂದಾಗ ನಾನಾದರೂ ಯಾಕೆ ಬಿಡಲಿ ? ಪ್ರತಿ ತಿಂಗಳೂ ನಾನು ಕುಡಿದ ಸೆರೆಯ ಲೆಕ್ಕವನ್ನು ಯಾರೋ ಮುಟ್ಟಿಸುತ್ತಾರಂತೆ. ಆ ಬಗೆಗೂ ನಾನು ವಿಶೇಷವಾಗಿ ಯೋಚನೆ ಮಾಡಿಲ್ಲ, ಯೋಚನೆ ಮಾಡುವುದಕ್ಕಾದರೂ ಬುದ್ಧಿ ಸರಿಯಾ

ಗಿರಬೇಕಲ್ಲವೆ ? ನನ್ನ ಬುದ್ಧಿ ನನ್ನ ಸ್ವಾಧೀನದಲ್ಲಿರುವುದೇ ಅಪರೂಪ. ಒಂದು ವರ್ಷವಾಯಿತು, ಪಶುವಿಗೂ ನನಗೂ ಹೆಚ್ಚಿನ ವ್ಯತ್ಯಾಸವೇನೂ ಉಳಿದಂತಿಲ್ಲ. ಹಸಿವಾದರೆ ಹೋಟಲಿಗೆ ಹೋಗಿ ಊಟ ಮಾಡುತ್ತೇನೆ, ತಿಂಡಿ ತಿನ್ನುತ್ತೇನೆ, ಚಹಾ ಕುಡಿಯುತ್ತೇನೆ. ಹೋಟಲಿನ ಲೆಕ್ಕವನ್ನೂ ಯಾರೋ ಮುಟ್ಟಿಸುತ್ತಾರಂತೆ. ಸಮೀಪದಲ್ಲಿಯೆ ನನ್ನ ಕೋಣೆಯಿದೆ. ಅದರ ಬಾಡಿಗೆಯನ್ನೂ ಯಾರೋ ಕೊಡುತ್ತಾರಂತೆ. ಕೋಣೆಯ ಎದುರಿನಲ್ಲಿರುವ ಬೀಡಿಯಂಗಡಿಯ ಹುಸೇನ ನಾನು ಬೇಡಿದಷ್ಟು ಸಿಗರೇಟು ಕೊಡುತ್ತಾನೆ ಅದರ ಹಣವನ್ನೂ ವಾರವಾರ ಯಾರೋ ಕೊಡುತ್ತಾರಂತೆ ಇದೆಲ್ಲ ಅಲ್ಲದೆ ಪ್ರತಿವಾರವೂ ನನ್ನ ಇತರ ಖರ್ಚುಗಳಿಗಾಗಿ ಹತ್ತುರೂಪಾಯಿಗಳದೊಂದು ನೋಟನ್ನು ಹೋಟಲಿನವರು ಕೊಡುತ್ತಾರೆ. ಆ ಹಣವೂ ನನ್ನ ಗುಪ್ತ ಹಿತಚಿಂತಕರೊಬ್ಬರಿಂದ ಬರುತ್ತದೆಯಂತೆ.

ಹಿತಚಿಂತಕರೋ ? ಹಿತಶತ್ರುಗಳೋ ?

ಯಾರಿಗೆ ಗೊತ್ತು !

ಆ ವಿಚಾರವಾಗಿಯೂ ನಾನು ತಲೆ ಕೆಡಿಸಿಕೊಳ್ಳುವುದಿಲ್ಲ. ತಲೆ ಸರಿಯಾಗಿದ್ದರೆ ತಾನೆ, ಕೆಡಿಸಿಕೊಳ್ಳುವ ಮಾತು !

ಎಂದಿನಂತೆ ಆ ಸಾಯಂಕಾಲವೂ ಮರಿಯನಲ್ಲಿ ಸೆರೆ ಕುಡಿದು ಒಂದು ಸೀಸೆಯನ್ನೂ ತುಂಬಿಕೊಂಡು ಕೋಣೆಗೆ ನಡೆದೆ. ನಾಲ್ಕು ಕಪ್ ಕುಡಿದಿದ್ದರೂ ನನಗೇನು ಪ್ರಜ್ಞೆ ತಪ್ಪಿರಲಿಲ್ಲ. ನಿರ್ಲಕ್ಷ್ಯದಿಂದ ಹೆಜ್ಜೆ ಹಾಕುತ್ತ ಕೋಣೆಯ ಕಡೆ ನಡೆದಿದ್ದಂತೆ ಸ್ಟೇಶನ್ ರಸ್ತೆಯ ಆಚೆಕಡೆಯಿಂದ ಕೈಯಲ್ಲೊಂದು ಚೀಲ ಹಿಡಿದುಕೊಂಡು ಬರುತ್ತಿದ್ದ ಲೀಲಾವತಿ ಭೆಟ್ಟಿಯಾದಳು.

ಬಹಳ ದಿನಗಳಿಂದ, ಅದೇಕೆ, ಒಂದು ವರ್ಷದಿಂದ ನಾನು ಲೀಲಾವತಿಯನ್ನು ನೋಡಿರಲಿಲ್ಲ. ಅವಳು ನನ್ನ ಹಳಯ ಗೆಳತಿ ನಗರದ ಹೈಸ್ಕೂಲಿನಲ್ಲಿ ನಾಲ್ಕೈದು ವರ್ಷ ಇಬ್ಬರೂ ಒಟ್ಟಿಗೇ ಓದಿದ್ದೆವು. ಅವಳು ಎಸ್. ಎಸ್ ಸಿ. ಪಾಸುಮಾಡಿ ಅದೇ ಊರಿನ ಬ್ಯಾಂಕಿನಲ್ಲಿ ಕೆಲಸಕ್ಕೆ ಸೇರಿದ್ದಳು. ನಾನು ಮಾತ್ರ ಆ ಪರೀಕ್ಷೆಯಲ್ಲಿ ಲಾಗ ಒಗೆದು ನನ್ನ ಹುಟ್ಟೂರಾದ ಮುೂಸೂರಿಗೆ ಹೋಗಿ ಸಹಕಾರಿ ಸಂಘದ ಕಾರ್ಯದರ್ಶಿಯ ನೌಕರಿ ದೊರಕಿಸಿದ್ದೆ.

ಲೀಲಾವತಿ ಕೆಲಸಕ್ಕಿದ್ದ ಬ್ಯಾಂಕಿನಿಂದ ಹಣ ತೆಗೆಸುವುದಕ್ಕಾಗಿ ನಾನು ಆಗಾಗ ಬಂದಾಗಲೆಲ್ಲ ಅವಳ ಭೇಟಿಯಾಗುತ್ತಿತ್ತು. ನಗರದಲ್ಲಿ ನಾನು ವಸತಿ

ಮಾಡಿದಾಗ ಎಂದಾದರೊಮ್ಮೆ ಅವಳು ನನ್ನೊಡನೆ ಸಿನಿಮಾ ನೋಡಲೂ ಬರುತ್ತಿದ್ದುದಿತ್ತು. ಲೀಲಾವತಿಗೂ ಸುಮಾರಾಗಿ ನನ್ನಷ್ಟೇ ವಯಸ್ಸು. ನೋಡುವುದಕ್ಕೆ ತಕ್ಕಮಟ್ಟಿಗೆ ಲಕ್ಷಣವಾಗಿಯೇ ಇದ್ದಳು. ಆದರೂ ಹೊಗಳುವಂಥ ಸೌಂದರ್ಯವೇನೂ ಇರಲಿಲ್ಲ.

ನನ್ನ ಬಾಯಿಯಿಂದ ಸೆರೆಯ ವಾಸನೆ ಹೊಡೆಯುತ್ತಿದ್ದ ಅಂಥ ಸಮಯದಲ್ಲಿ ಲೀಲಾವತಿಯಂಥ ಸಭ್ಯ ತರುಣಿಯನ್ನು ಮಾತನಾಡಿಸಲು ನನಗೆ ಇಷ್ಟವಿರಲಿಲ್ಲ. ಅವಳನ್ನು ನೋಡಿಯೂ ನೋಡದಂತೆ, ಮುಖ ತಿರುಗಿಸಿಕೊಂಡು ಜಾರಿಕೊಳ್ಳಲು ಪ್ರಯತ್ನಿಸಿದೆ. ಅವಳು ಮಾತ್ರ ಬಿಡಬೇಕಲ್ಲ ? ನನ್ನ ಹೆಸರು ಹಿಡಿದು ಕೂಗಿಯೇಬಿಟ್ಟಳು.

ಇನ್ನು ತಪ್ಪಿಸಿಕೊಂಡು ಹೋಗುವಂತಿರಲಿಲ್ಲ.

" ಏನ್ರೀ ಸದಾಶಿವ, ಮಾತು ಆಡದೆ ಹಾಗೇ ಹೋಗ್ತೀರಲ್ಲ ? ನಾನೇನು ಮಾಡಿದೀನಿ ಅಂಥಾದ್ದು ? " ಎಂದಳು ಲೀಲಾವತಿ.

ಅಂಥ ಪ್ರಶ್ನೆಗೆ ಎಂಥ ಉತ್ತರ ಕೊಡಬೇಕು ? ನಾನು ಸುಮ್ಮನೆ ಮೂರ್ಖನಂತೆ ನಕ್ಕುಬಿಟ್ಟೆ.

ಲೀಲಾವತಿಯೂ ನಕ್ಕಳು. " ನಿಮ್ಮನ್ನ ನೋಡಿ ವರ್ಷ ಎರಡು ವರ್ಷ ಆಗುತಾ ಬಂತು, ಅಲ್ವಾ ? ಹ್ಯಾಗಿದೀರಿ ? ಚೆನ್ನಾಗಿದೀರಾ ? "

" ನನಗೇನಾಗ್ಬೇಕದ ಧಾಡಿ ? " ಎಂದು ನಾನು ಮತ್ತೆ ಹಲ್ಲು ಕಿರಿದೆ.

" ಎಲ್ಲಿದೀರೀ ? ಏನ್ಮಾಡುತಾ ಇದೀರಿ ? "

" ಇಲ್ಲೇ ಇದೀನಲ್ಲ ? " ಎಂದೆ ನಾನು.

" ಈ ಊರಲ್ಲೇ ಇದೀರಾ ? "

" ಹೂಂ."

" ಮತ್ತೆ ? ನನಗೆಂದೂ ಕಾಣಿಸಲೇ ಇಲ್ವಾ ? ಹುಂ...ನೀವು ಈಚೆಗೆ ಬ್ಯಾಂಕಿನ ಕಡೆಗೂ ಬಂದಿಲ್ಲ..." ಎಂದು ಹೇಳಿ ಏನನ್ನೋ ನೆನಪುಮಾಡಿಕೊಂಡು ಅವಳೆಂದಳು : " ಹುಂ...ಅರ್ಥ ಆಯ್ತು....ಸಾರಿ ಸದಾಶಿವ....ನಿಮ್ಮ ಮೇಲೆ ಏನೇನೋ ಆರೋಪ ಬಂದಿತ್ತಂತೆ. ನಾನೂ ಕೇಳಿದ್ದೆ. ಈಗ ಎಲ್ಲಾ ಮುಗಿದದ ಹೌದಲ್ವೋ ? "

" ಆಗಲೇ ಮುಗೀತಲ್ಲ ಎಲ್ಲಾ ? "

" ಅಂದರೆ ? "

" ಒಂದು ವರ್ಷದ ಹಿಂದಿನ ಹಳೇ ಕಥೆ ಅದೆಲ್ಲಾ. ಏನೇನೋ ಆಗಿ ಹೋಯ್ತು. ಈಗ ಮತ್ತೆ ನೆನಪುಮಾಡಿಕೊಂಡೇನು ಮಾಡೂದು ಬಿಡಿರಿ. ನೀವು ಚೆನ್ನಾಗಿದೀರಲ್ಲಾ ? "

" ಇದೀನಿ. ಆದರೆ ...ಸದಾಶಿವ ! ನೀವು .! "

" ನನ್ನ ವಿಚಾರ ಹಚ್ಚಿಕೋಬೇಡಿ, ನಮಸ್ಕಾರ, ಬರಲೇ ? " ಎಂದು ಹೇಳಿ ನಾನು ಹೊರಡುವುದರಲ್ಲಿದ್ದೆ. ಲೀಲಾವತಿ ಮಾತ್ರ ನನ್ನನ್ನು ಅಷ್ಟಕ್ಕೇ ಬಿಡಲಿಲ್ಲ

" ಹೀಗ್ಯಾಕ್ರೀ ಅವಸರ ಮಾಡ್ತೀರಿ ? ಗುರುತು ಪರಿಚಯ ಇಲ್ಲದವರಂತೆ ಮಾಡ್ತೀರಲ್ಲ ? ಎಷ್ಟೋ ದಿನವಾಯ್ತು ನಿಮ್ಮ ಭೇಟಿಯಾಗಿ ? ಎಲ್ಲಾರೆ ಕೂತು ಮಾತಾಡೋಣ ಅಂತೀನಿ...."

" ಹೋಟಲಿಗೆ ಹೋಗೋಣೇನರಿ ? "

" ನಿಮ್ಮ ಇಚ್ಛೆ."

ಹತ್ತಿಪ್ಪತ್ತು ಅಡಿ ದೂರದಲ್ಲಿದ್ದ ಚಹದಂಗಡಿಗೆ ಬಂದು, ಮಹಡಿ ಏರಿ " ಸ್ಪೆಶಲ್ ರೂಮಿ " ನಲ್ಲಿ ಕುಳಿತುಕೊಂಡೆವು—ಎದುರುಬದುರಾಗಿ. ಸೆರೆಯ ಸೀಸೆಯಿದ್ದ ಚೀಲವನ್ನು ನಾನು ಪಕ್ಕದ ಕುರ್ಚಿಯ ಮೇಲಿಡುತ್ತಿದ್ದಂತೆ ಲೀಲಾ ವತಿ ಕೇಳಿದಳು :

" ಏನದು ಚೀಲದಲ್ಲಿ ? "

" ಬಾಟ್ಲಿ ... " ನಾನು ನಿಜವನ್ನೇ ಹೇಳಿದೆ.

ವ್ಯಸನದಿಂದ ಮುಖ ಚಿಕ್ಕದು ಮಾಡಿ ಲೀಲಾವತಿಯೆಂದಳು :

" ನೀವು ಈ ಸ್ಥಿತಿಗೆ ಬಂದದ್ದು ನೋಡಿದರೆ ಬಹಳ ಬಹಳ ಕೆಟ್ಟನಿಸ್ತದ ಸದಾಶಿವ. ಈ ದುರಭ್ಯಾಸ ನಿಮಗೆ ಎಂದಿನಿಂದ ಗಂಟುಬಿತ್ತು ?"

" ಒಂದು ಒಂದೂವರೆ ವರ್ಷ ಆಗಿರಬಹುದು. "

" ಅದರ ಮೊದಲು ನೀವೆಂದೂ ಸೆರೆ ಮುಟ್ಟಿರಲಿಲ್ಲ. ನನಗ್ಗೊತ್ತು. "

" ನನಗೂ ಗೊತ್ತಲ್ಲ ! " ಎನ್ನುತ್ತ ನಾನು ಹುಚ್ಚನಂತೆ ನಕ್ಕೆ.

ನನ್ನ ಬಾಯಿಯಿಂದ ಒಂದೇ ಸಮನೆ ಸೆರೆಯ ವಾಸನೆ ಹೊರಬೀಳುತ್ತಿದ್ದಿ ತಾದರೂ ಲೀಲಾವತಿ ಆ ಬಗೆಗೆ ಅಸಹ್ಯಪಟ್ಟುಕೊಳ್ಳಲಿಲ್ಲ. ಅದನ್ನು ನೋಡಿ ನನಗೆ ಆಶ್ಚರ್ಯ, ಕೌತುಕ. ಇಂಥ ದುರ್ವಾಸನೆಯನ್ನು ಇವಳು ಹೇಗೆ ಸಹಿಸುತ್ತಿರುವಳೊ ! ಬೇರೆ ಸಭ್ಯಸ್ತ್ರೀಯರಾಗಿದ್ದರೆ ನನ್ನಂಥ ಕುಡುಕನೊಡನೆ

ಚಹದಂಗಡಿಗೆ ಬರುವುದಿರಲಿ, ರಸ್ತೆಯಲ್ಲಿ ನಿಂತು ಮಾತನಾಡಲೂ ಮನಸ್ಸು ಮಾಡುತ್ತಿರಲಿಲ್ಲ. ಲೀಲಾವತಿ ಒಳ್ಳೆ ಹುಡುಗಿ . ಅವಳ ಅಂತಃಕರಣ ದೊಡ್ಡದು. ಪಾಪಿಗಳ ಬಗೆಗೆ, ವ್ಯಸನಿಗಳ ಬಗೆಗೆ ಅವಳಿಗೆ ತಿರಸ್ಕಾರವಿಲ್ಲ, ಕನಿಕರವಿದೆ.

" ನಿಮ್ಮ ಮೇಲೆ ಆ ಪ್ರಸಂಗ ಬಂದೇ ಹೀಗಾಗಿರಬೇಕು ! " ಎಂದಳು ಲೀಲಾವತಿ.

" ಆಗಿರಬಹುದು. "

" ನಿಮ್ಮ ಮೇಲಿನ ಆರೋಪಗಳೆಲ್ಲಾ ಸುಳ್ಳು ಅಂತ ಈಗಲೂ ಅನ್ನಿಸ್ತದ ನನಗೆ. ನಾನೆಂದೂ ಅದನ್ನ ನಂಬಲಿಲ್ಲ. "

" ಥ್ಯಾಂಕ್‌ಯೂ ಲೀಲಾವತಿ ! " ಎಂದೆ ನಾನು.

" ಆದರೆ ಅಂಥಾ ಭಯಂಕರ ಪ್ರಸಂಗದಿಂದ ಹ್ಯಾಗೆ ಪಾರಾದಿರಿ ಅಂತ ಆಶ್ಚರ್ಯ. "

" ಪಾರಾಗುವದು ನಿಜವಾಗಿ ಕಠಿಣವಿತ್ತು ಲೀಲಾವತಿ ಹೊಲ–ಮನೆ–ತಾಯಿ ಮೂವರನ್ನೂ ಬಲಿಕೊಟ್ಟು ನಾನೊಬ್ಬ ಉಳಿದುಕೊಂಡೆ. "

" ತಾಯಿ... ? ಅವರಿಗೇನಾಯ್ತು ? "

" ಸಹಕಾರೀ ಸಂಘದ ಹತ್ತುಸಾವಿರ ರೂಪಾಯಿ ಅಫರಾತಫರು ಮಾಡಿದ ಆರೋಪದಿಂದ ನನ್ನ ವಿಚಾರಣೆ ಸುರು ಆಗುತ್ತಲೂ ತಾಯಿ ಎದೆಯೊಡೆದು ಕೊಂಡಳು. ತಂದೆ ಎಂದೋ ತೀರಿಕೊಂಡಿದ್ದ. ಇದ್ದವನು ನಾನೊಬ್ಬನೇ ಮಗ. ಬಹಳ ಪ್ರೀತಿಯಿಂದ ನನ್ನ ಬೆಳೆಸಿ ಇಲ್ಲಿ ಇಟ್ಟು ಓದಿಸಿದ್ದಳು. ಸಹ ಕಾರೀ ಸಂಘದ ನೌಕರಿ ಹಿಡಿದು, ಹೊಲಗಳನ್ನೂ ನೋಡಿಕೊಳ್ಳುತ್ತ ನಾನು ಊರಲ್ಲೇ ಇದ್ದದ್ದರಿಂದ ಆಕೆಗೆ ಆನಂದವೂ ಆಗಿತ್ತು. ಅಂಥಾದ್ದರಲ್ಲಿ ಒಮ್ಮಿಂ-ದೊಮ್ಮೆಲೇ ನನ್ನ ಮೇಲೆ ಅಂಥಾ ಆರೋಪ ಬಂದದ್ದು ನೋಡಿ ಮುದುಕಿ ಹೌಹಾರಿದ್ದು ಸಹಜ. ಹತ್ತುಸಾವಿರದ ಅಪವ್ಯಯಕ್ಕೆ ನಾನು ಕಾರಣನಾಗಿರ ಲಿಲ್ಲವಾದರೂ, ನಿಜವಾಗಿ ನಾನು ನಿರಪರಾಧಿಯಾಗಿದ್ದರೂ ವಿಚಾರಣೆಯಲ್ಲಿ ನಾನೇ ಆರೋಪಿಯಾದೆ. ತಾಯಿಯ ಕಣ್ಣೆದುರಿಗೇ ಜಮೀನು ಮನೆ ಎಲ್ಲಾ ಲಿಲಾವಾಯ್ತು, ಮನೆಯ ಲಿಲಾವು ನಡೆದಾಗಲೇ ಅವಳ ಜೀವವೂ ಹೋಯ್ತು"

" ಅನ್ಯಾಯ....ಅನ್ಯಾಯ ..ಭಯಂಕರ ಅನ್ಯಾಯ .. " ಲೀಲಾವತಿ ಮರುಗಿದಳು. ಅವಳ ಕಣ್ಣಂಚಿನಲ್ಲಿ ಒಂದೆರಡು ಹನಿಗಳೂ ಕಾಣಿಸಿಕೊಂಡುವು.

" ಕಾಫಿ ಆರಿತೇನೋ ! ತಗೊಳ್ರಿ ಸದಾಶಿವ "

ನಾನು ಮೌನವಾಗಿ ಕಾಫಿ ಗುಟುಕರಿಸತೊಡಗಿದೆ.

ಕಾಫಿ ಮುಗಿಸಿ ಲೀಲಾವತಿ ಮತ್ತೆ ಹೇಳಿದಳು :

" ನೀವು ಅಪರಾಧಿಯಲ್ಲ ಅಂತ ನನಗನಿಸಿಯೋ ಇತ್ತು. ಈ ಕೆಟ್ಟ ಜಗತ್ತಿನಲ್ಲಿ ನಿಮ್ಮಂಥ ಅನೇಕ ನಿರಪರಾಧಿಗಳಿಗೇ ವಿನಾಕಾರಣವಾಗಿ ತೊಂದರೆಯಾಗ್ತದ....ನಿಜವಾಗಿ ಆ ಅಪವ್ಯಯಕ್ಕೆ ಯಾರು ಕಾರಣರು ಸದಾಶಿವ ?"

" ನಿಮಗಿನ್ನೂ ಗೊತ್ತಿಲ್ಲ ಹಾಗಾದರೆ ? "

" ಇಲ್ಲರೀ....ನಮ್ಮ ನಿಮ್ಮ ಭೆಟ್ಟಿಯೇ ಇಲ್ಲವೆಂದಾಗ ನನಗೆ ಇದೆಲ್ಲಾ ಗೊತ್ತಾಗುವದಾದರೂ ಹ್ಯಾಗೆ ? "

" ಕೇಳಿಯಾದರೂ ಏನು ಮಾಡ್ತೀರಿ ಬಿಡಿರಿ. ಸುಮ್ಮನೆ ನಿಮಗೆ ದುಃಖ."

" ನಿಮ್ಮ ಈ ಅವಸ್ಥೆ ನೋಡಿ ಕರುಳು ತಡೀಲಾರದೆ ಕೇಳ್ತಿದೀನಿ. ನಿಮ್ಮನ್ನ ಈ ಸ್ಥಿತಿಗೆ ದೂಡಿದ ಆ ಪಾಪಿ ಯಾರು ? "

" ಬಸೆಟ್ಟಿ ಗೊತ್ತೇ ಲೀಲಾವತಿ ? "

" ಯಾವ ಬಸೆಟ್ಟಿ ? "

" ಮತ್ತಾರು ? ಜಿಲ್ಲೆಯ ನಂಬರ್ ವನ್ ಬಿಳಿಯಟೋಪಿ....ಹಿರಿಯ ಕಾಂಗ್ರೆಸ್ ಲೀಡರ್ ...ಲಕ್ಷಾಧೀಶ ವ್ಯಾಪಾರಿ .. "

" ಓ ...ಅವರೇ ? ನಮ್ಮ ಬ್ಯಾಂಕಿನ ಡೈರೆಕ್ಟರು ? "

" ಬ್ಯಾಂಕಿಗೂ ಜಿಗಿದನೇ ಆ ಸೆಟ್ಟಿ ? ಎಂದಿನಿಂದ ? "

" ಇದೇ ಜೂನ್ ತಿಂಗಳಲ್ಲಿ ಡೈರೆಕ್ಟರ್ ಬೋರ್ಡಿನ ಆಯ್ಕೆಯಾಯಿತಲ್ಲ ' ಆಗ...."

" ಸರಿ. ಸರಿ. ಸಹಕಾರಿ ಸಂಘಗಳನ್ನು ಸಮಾಧಿ ಮಾಡಿದ್ದಾಯ್ತು. . ಇನ್ನು ಬ್ಯಾಂಕಿನ ಸರದಿ ..."

" ನಿಜವಾಗಿಯೂ ಅವರು ಅಂಥವರೇ ? " ಲೀಲಾವತಿ ಮೆಲ್ಲಗಿನ ಧ್ವನಿಯಲ್ಲಿ ಪ್ರಶ್ನಿಸಿದಳು.

ಅವಳ ಧ್ವನಿ ಇಳಿಯಲು ಕಾರಣವೇನೆಂಬುದು ನನಗೆ ಥಟ್ಟನೆ ಗೊತ್ತಾಯಿತು. ಎಷ್ಟಾದರೂ ಅವಳು ನೌಕರಳಲ್ಲವೇ ? ತನ್ನ ಬ್ಯಾಂಕಿನ ಡೈರೆಕ್ಟರೊಬ್ಬನ ಬಗೆಗೆ ಮಾತನಾಡಲು ಅವಳು ಅಂಜಿಕೊಳ್ಳುವುದು ಸಹಜವೇ ಸರಿ.

" ಬಸೆಟ್ಟಿ ನಿಜವಾಗಿ ಎಂಥವನೆಂಬುದು ಎಲ್ಲರಿಗೂ ಗೊತ್ತಾಗುವದು

ಕಠಿಣ ಲೀಲಾ. ಅವನಿಂದ ಹೊಡೆತ ತಿಂದ ನನ್ನಂಥ ಕೆಲವರಿಗೆ ಮಾತ್ರ ಗೊತ್ತಾಗಬೇಕಷ್ಟೆ."

" ಅದೇನೇ ಇದ್ದರೂ ನೀವು ಹೀಗಾದಿರಲ್ಲಾ ಅಂತ ಕಳವಳವಾಗ್ತದ."

" ಆಗುವದೆಲ್ಲಾ ಆಗಲೇಬೇಕಲ್ಲ ಲೀಲಾ ? ದುಃಖಪಟ್ಟರೇನು ಪಯೋಗ ? " ಎಂದು ನುಡಿದು, ಸಿಗರೇಟು ಹೊತ್ತಿಸಿ ಹೊಗೆಯೆಳೆಯುತ್ತ ನಾನು ವಿಷಯ ಬದಲಿಸಿದೆ.

" ನಿಮ್ಮದೇನು ಸುದ್ದಿ ಹೇಳಲೇ ಇಲ್ಲಲ್ಲ ? ನಿಮ್ಮ ತಾಯಿ ಅರಾಮ ಇದಾರಲ್ಲ ? " ಎಂದು ಕೇಳಿದೆ.

" ಇರಬೇಕು...."

" ಅದೇನ್ರಿ ? ಹೀಗಂತೀರಲ್ಲ ? ಅವರೀಗ ನಿಮ್ಮ ಸಂಗಡ ಇಲ್ಲೇನು ? "

" ಇಲ್ಲ. ಒಂದು ವರ್ಷ ಆಯ್ತು—ಮುಂಬಯಿಗೋ ಮದ್ರಾಸಿಗೋ ಹೊರಟುಹೋಗಿ...."

ಲೀಲಾವತಿಯ ಮನೆತನದ ವಿಷಯ ನನಗೆ ಸ್ವಲ್ಪ ಸ್ವಲ್ಪ ಗೊತ್ತಿತ್ತು. ಅಷ್ಟೆ. ಅವಳ ತಾಯಿ ಗಂಡನನ್ನು ತ್ಯಜಿಸಿ ಈ ನಗರಕ್ಕೆ ಬಂದು ನೆಲಸಿ ಸೂಲಗಿತ್ತಿಯ ಕೆಲಸ ಮಾಡುತ್ತ ಮಗಳನ್ನು ಓದಿಸುತ್ತಿದ್ದುದನ್ನು ಕೇಳಿದ್ದೆ. ನಗರದ ವಿಸ್ತರಣದಲ್ಲಿ ಅವರ ಮನೆಯಿತ್ತು.

" ಒಮ್ಮಿಂದೊಮ್ಮೆಲೇ ಹ್ಯಾಗೆ ಹೋದರವರು ಲೀಲಾ ? ಏನಾಯ್ತು ?"

" ಏನೋ ಆಯ್ತು. ಅಂತೂ ಅಂದಿನಿಂದ ಆಕೆಯಿಂದ ಸುದ್ದಿಯಿಲ್ಲ."

" ಹಾಗಾದರೆ ಮನೆಯಲ್ಲಿ ನೀವೊಬ್ಬರೇ.... ಅಥವಾ.... ಇನ್ನೊಬ್ಬರಿದಾರೋ ? "

" ಮತ್ಯಾರು ಬರಬೇಕ್ರೀ ? " ಎನ್ನುತ್ತ ಅವಳು ನಕ್ಕಳು.

" ಅಲ್ಲ ...ನನಗೇನು ಗೊತ್ತು ಹೇಳಿರಿ. ನಿಮ್ಮ ಮದುವೆ ಆಗಿದ್ದೀತು ಅಂತ ತಿಳಿದು ..."

" ಮದುವೆ ಆಗಿಯಾದರೂ ಪಡತಕ್ಕ ಸುಖ ಅಷ್ಟರಲ್ಲೇ ಅದ ಅಲ್ಲ ? ಅದರ ಬದಲು ನನ್ನ ಅನ್ನ ನಾ ದುಡಿದುಕೊಂಡು ಒಬ್ಬಳೇ ಸ್ವತಂತ್ರವಾಗಿರೂದೇ ಚಲೋದು....ನೀವೂ ಮದುವೆಯಾಗಲಿಲ್ಲ, ಅಲ್ಲಾ ? "

" ನನ್ನಂಥವನನ್ನ ಯಾವ ಹೆಣ್ಣು ಮದುವೆಯಾದಾಳು ಲೀಲಾ ? " ಎನ್ನುತ್ತ ನಾನು ಸಿಗರೇಟಿನ ಹೊಗೆಯುಗುಳಿದೆ.

"ಯಾಕ್ರೀ ? ನಿಮಗೇನಾಗ್ಯದ ? ಈ ಹಾಳು ಚಟ ಬಿಟ್ಟುಕೊಟ್ಟು ಯಾವದೊಂದು ಒಳ್ಳೇ ನೌಕರಿ ಹಿಡಿದರೆ ಮದುವೆಯದೇನು ತಡ ? "

"ನನ್ನಂಥವನಿಗೆ ಒಳ್ಳೇ ನೌಕರಿಯಾದರೂ ಹ್ಯಾಗೆ ಸಿಗಬೇಕು ಲೀಲಾ ? ಯಾರನ್ನ ಕೇಳಿದರೂ—ನನ್ನ ಇತಿಹಾಸ ವಿಚಾರಿಸತಾರೆ. ಮೊದಲು ಎಲ್ಲಿ ಕೆಲಸ ಮಾಡಿದೆ, ಅದನ್ಯಾಕೆ ಬಿಟ್ಟೆ ? ಅಂತ ಸಹಕಾರೀ ಸಂಘದ ಹಣದ ಅಫರಾತಫರಿನ ಸಂಬಂಧದಲ್ಲಿ ನನ್ನ ಹೆಸರು ಪತ್ರಿಕೆಗಳಲ್ಲೂ ಬಂದಿತ್ಯಲ್ಲ ? "

"ದೂರ—ಬೆಂಗಳೂರಿಗೋ ಮೈಸೂರಿಗೋ ಹೋಗಿ ನಿಮ್ಮ ಗುರುತಿಲ್ಲದ ಕಡೆ ಕೆಲಸ ದೊರಕಿಸಬಹುದಲ್ಲ ? "

"ಎಲ್ಲಿಗೆ ಹೋಗಲೂ ನನಗೆ ಮನಸಿಲ್ಲ ಲೀಲಾ ಕ್ಷಮಿಸಿರಿ ನನಗೆ ಹೊತ್ತಾಯ್ತು, ಹೊರಡಬೇಕು .. "

"ಅಂಥ ಅರ್ಜಂಟ್ ಕೆಲಸವಾದರೂ ಏನದರೀ ನಿಮಗೆ ? "

"ಒಬ್ಬರನ್ನ ಭೆಟ್ಟಿಯಾಗತೀನಂತ ವಚನ ಕೊಟ್ಟಿದೀನಿ "

"ಆಯ್ತು ನನ್ನ ಮಾತ್ರ ಮರೀಬಾರದು ಹಂ. ಮೇಲಿಂದ ಮೇಲೆ ಭೆಟ್ಟಿಯಾಗುತಿರಬೇಕು. ನನ್ನ ಅಡ್ರೆಸ್ ಗೊತ್ತಿರಬೇಕಲ್ಲ ? "

"ಇಲ್ಲವಲ್ಲ ? ನಾನೆಂದು ನಿಮ್ಮ ಮನೆಗೆ ಬಂದೀನಿ ? "

"ಇನ್ನುಮೇಲೆ ಯಾವಾಗ ಬೇಕಾದರೂ ಬರಬಹುದು. ನಾನೂ ಒಬ್ಬಳೇ ಇದೀನಿ. ಮನೆಯೂ ಊರಿನ ಹೊರಗೆ ಗದ್ದಲವಿಲ್ಲದ ಕಡೆ ಅದ. ಸಂಕೋಚವಿಲ್ಲದೆ ಬರಬಹುದು ' ಎಂದು ಹೇಳಿ ಕಣ್ಣುಗೊಂಬೆಗಳಲ್ಲಿ ತಾರೆಗಳನ್ನು ಕುಣಿಸುತ್ತ ಅವಳು ನನ್ನನ್ನು ನೋಡಿದಳು ಆ ನೋಟವನ್ನು ಸರಿಯಾಗಿ ಅರಿತುಕೊಂಡು ನಾನು ಮುಗುಳ್ನಗು ಬೀರಿದೆ. ಏಕಾಂಗಿನಿಯಾದ ಯುವತಿ. ವಿವಾಹ ಬೇಡವಾದರೇನಾಯಿತು ? ನೈಸರ್ಗಿಕವಾದ ಆಸೆ ಬಯಕೆಗಳನ್ನು ಹತ್ತಿಕ್ಕಲು ಶಕ್ಯವಾದೀತೇ ? ನನ್ನಲ್ಲಿ ಅವಳಿಗೆ ಮೊದಲಿಂದಲೂ ಹೆಚ್ಚು ಸಲಿಗೆ. ಅದನ್ನು ಇನ್ನಷ್ಟು ಹೆಚ್ಚಿಸಿ, ಇಬ್ಬರಿಗೂ ಲಾಭವಾಗುವಂತೆ ಮಾಡುವುದೇ ಅವಳ ಉದ್ದೇಶವಿರಲು ಸಾಕು.

## ೨

ಕಾಫಿಯ ಬಿಲ್ಲನ್ನು ತಾನೇ ಕೊಟ್ಟು “ ಬೈ ! ಬೈ ! ” ಹೇಳಿ ಲೀಲಾವತಿ ಹೊರಟು ಹೋದಳು. ರಸ್ತೆಯಲ್ಲಿಯೆ ನಿಂತು ಕ್ಷಣಹೊತ್ತು ನಾನು ಅವಳನ್ನು ನೋಡುತ್ತಿದ್ದೆ. ಅವಳ ಭುಜಗಳು ತುಂಬಿಕೊಂಡು ಮಾಟವಾಗಿದ್ದುವು ಎದೆ ಮಾತ್ರ ಆವಳ ವಯಸ್ಸಿನ ತರುಣಿಯರಂತೆ ಸರಿಯಾಗಿ ಬೆಳೆಯದೆ ಬಯಲಿ ನಂತೆ ಸಮತಲವಾಗಿತ್ತು. ಇನ್ನಿತರ ಯುವತಿಯರಂತೆ ಅವಳು ಎದೆಕಟ್ಟು ಗಳನ್ನು ಉಪಯೋಗಿಸದಿದ್ದುದೂ ಅದಕ್ಕೊಂದು ಕಾರಣವಾಗಿದ್ದಿತೊ ಏನೊ. ದಪ್ಪ ಗಾಜಿನ ಕನ್ನಡಕ ಬೇರೆ ಅವಳ ಮುಖವನ್ನು ವಿದ್ರೂಪಗೊಳಿಸಿತ್ತು. ಅದೇನೇ ಇದ್ದರೂ ಅವಳ ನಡಿಗೆಯ ಗತಿಯಲ್ಲಿ ಒಂದು ಬಗೆಯ ಲಯವಿದ್ದು ದನ್ನು ನಾನು ಗಮನಿಸದಿರಲಿಲ್ಲ.

ಅಷ್ಟು ಹೊತ್ತು ಹಾಗೆ ಅವಳನ್ನು ದಿಟ್ಟಿಸುತ್ತಿದ್ದು ಆನಂತರ ಕೋಣೆಗೆ ಹೊರಟೆ. ಅಲ್ಲಿಂದ ಅರ್ಧಮೈಲಿನ ಮೇಲೆ ಬಸ್‌ಸ್ಟ್ಯಾಂಡಿನ ಸಮೀಪದಲ್ಲಿದ್ದ, ಕೆಳತರಗತಿಯ ಜನವಸತಿಯಲ್ಲಿ ನನ್ನ ಕೋಣೆಯಿತ್ತು. ಆ ವಿಭಾಗದಲ್ಲಿ ಎಲ್ಲ ಜಾತಿಗಳ ಬಡಜನರೂ ವಾಸಿಸಿದ್ದರು ಮುಸ್ಲಿಮರು, ಕ್ರಿಶ್ಚಿಯನ್ನರು, ಹರಿ ಜನರು ಮಾತ್ರವಲ್ಲದೆ ಹತ್ತಿಪ್ಪತ್ತು ಮಂದಿ ವೇಶ್ಯೆಯರೂ ಅಲ್ಲಿ ನೆಲಸಿದ್ದರು. ಒಂದು ವರ್ಷದಿಂದ ಅಲ್ಲಿಯೆ ವಾಸವಾಗಿದ್ದುದರಿಂದ ಆ ವೇಶ್ಯೆಯರನೇಕರ ಪರಿಚಯವೂ ನನಗೆ ಆಗಿತ್ತು. ಅದರಲ್ಲೂ, ನನ್ನ ಕೋಣೆಯ ಮಗ್ಗುಲಿನ ಮನೆಯಲ್ಲಿದ್ದ ರಾಧೆಯಂತೂ ನನ್ನೊಡನೆ ವಿಶೇಷವಾದ ಸಲುಗೆ ಬೆಳೆಸಿಕೊಂಡಿ ದ್ದಳು. ಮನಸ್ಸಿಗೆ ಬಹಳ ಬೇಸರವಾದಾಗಲೆಲ್ಲ ನಾನು ಅವಳನ್ನು ಅರಸಿ ಕೊಂಡು ಹೋಗುತ್ತಿದ್ದೆ. ಬೇರೆ ಗಿರಾಕಿಗಳಿಲ್ಲದಿದ್ದಾಗ ಅವಳೂ ನನ್ನ ಕೋಣೆಗೆ ಬರುತ್ತಿದ್ದಳು. ಒಂದೊಂದು ಬಾರಿ ನಾನು ಕೋಣೆಯಲ್ಲಿಲ್ಲದಿದ್ದಾ ಗಲೂ ಅವಳು ಅಲ್ಲಿಗೆ ಬಂದು ಹೋಗುತ್ತಿದ್ದುದಿತ್ತು. ಹೊರಗೆ ಹೋಗು

ವಾಗ ಬಾಗಿಲಿಗೆ ನಾನು ಬೀಗ ಹಾಕುತ್ತಿದ್ದುದೇನೋ ನಿಜ. ಹೆಸರಿಗೆ ಮಾತ್ರ ಅದೊಂದು ಬೀಗ; ಆದರೆ, ಸ್ವಲ್ಪ ಎಳೆದರೆ ಸಾಕು, ಬಿಚ್ಚಿಕೊಳ್ಳುತ್ತಿತ್ತು. ಈ ಗುಟ್ಟು ರಾಧೆಗೆ ಎಂದೋ ಗೊತ್ತಾಗಿ ಹೋಗಿತ್ತು. ನನಗೂ ಆ ಬಗೆಗೆ ಚಿಂತೆಯೇನೂ ಇರಲಿಲ್ಲ. ನನ್ನ ಕೋಣೆಯಲ್ಲಿ ಅಂಥ ಬೆಲೆಬಾಳುವ ವಸ್ತುವಾದರೂ ಏನಿತ್ತು ? ಕೋಣೆಯನ್ನೆಲ್ಲ ತಿರುವಿಹಾಕಿದರೂ ಒಂದು ರೂಪಾಯಿ ಸಹ ಸಿಕ್ಕುವಂತಿರಲಿಲ್ಲ.

ಆದರೆ ಈ ದಿನ ಮಾತ್ರ ನನ್ನ ಕಿಸೆಯಲ್ಲಿ ಹಣವಿತ್ತು. ಹೋಟಲಿನವರು ಅದೇ ಮಧ್ಯಾಹ್ನ ಹತ್ತು ರೂಪಾಯಿ ಕೊಟ್ಟಿದ್ದರು. ಖರ್ಚುಮಾಡುವ ಅಗತ್ಯವಿರಲಿಲ್ಲವಾದುದರಿಂದ ನೋಟು ಹಾಗೆಯೇ ಬಿದ್ದುಕೊಂಡಿತ್ತು.

ನಾನು ಹೋದಾಗ ಕೊಟಡಿಯ ಬಾಗಿಲಿಗೆ ಬೀಗವಿರಲಿಲ್ಲ; ಆದರೆ ಒಳಗಿನಿಂದ ಬಾಗಿಲು ಮುಚ್ಚಿಕೊಂಡಿತ್ತು. ರಾಧೆಯೇ ಬಂದು ನನ್ನ ದಾರಿ ಕಾಯುತ್ತಿರಲು ಸಾಕು. ಅವಳಿಗೂ ಸೆರೆಯ ವ್ಯಸನ ಅಂಟಿಕೊಂಡಿದೆ. ಸಾಯಂಕಾಲವಾಯಿತೆಂದರೆ ಒಂದೆರಡು ಕಪ್ ಆದರೂ ಬೇಕೇಬೇಕು. ಸಂಜೆ ಬರುವಾಗ ಸ್ವಲ್ಪವಾದರೂ ಸೆರೆ ತೆಗೆದುಕೊಂಡು ಬರಬೇಕೆಂದು ಅವಳು ಬೆಳಗ್ಗೆ ಭೆಟ್ಟಿಯಾದಾಗ ಕೇಳಿಕೊಂಡಿದ್ದಳು. ಸಿಕ್ಕಿದರೆ ಅಗತ್ಯವಾಗಿ ತರುವೆನೆಂದು ನಾನೂ ಒಪ್ಪಿಕೊಂಡಿದ್ದೆ.

" ರಾಧಾ ...ರಾಧಾರಾಣೀ ! " ಬಾಗಿಲು ತಳ್ಳುತ್ತ, ನಾನು ಕೂಗಿದೆ.

ನನ್ನ ಕೋಣೆಗೆ ಎರಡು ಭಾಗಗಳುಂಟು. ಹೊರಗಿನದು ಕೂಡ್ರುವ, ಮಲಗುವ ಸ್ಥಳ. ಒಳಗಿನದು ಅಡುಗೆಯ ಕೋಣೆ. ಬಚ್ಚಲು-ಒಲೆ ಎಲ್ಲಾ ಇವೆ. ನಾನು ಮಾತ್ರ ಅವುಗಳನ್ನುಪಯೋಗಿಸುವುದಿಲ್ಲ. ಸ್ನಾನ ಮಾಡಬೇಕೆನ್ನಿಸಿದಾಗ ಎರಡು ಬಕೆಟ್ಟು ತಣ್ಣೀರು ಸುರುವಿಕೊಳ್ಳುತ್ತೇನೆ. ಅಷ್ಟೆ. ಒಮ್ಮೊಮ್ಮೆ ಒಂದೊಂದು ವಾರದ ವರೆಗೂ ನೀರನ್ನೇ ಮುಟ್ಟುವುದಿಲ್ಲ.

ಗೋಡೆಗೆ ತಗಲಿಸಿದ್ದ ನನ್ನ ಕೋಟಿನ ಕಿಸೆಗಳನ್ನು ಶೋಧಿಸುವುದರಲ್ಲಿ ತೊಡಗಿದ್ದ ರಾಧೆ ನಾನು ಒಳಗೆ ಬಂದ ಮೇಲೂ ಆ ಕಾಯಕ ನಿಲ್ಲಿಸಲಿಲ್ಲ.

" ಏನು ತುಡುಗು ಮಾಡುತ್ತೀಯೋ ಕಳ್ಳೀ ! "

" ತುಡುಗು ಮಾಡಲಿಕ್ಕೆ ಇಲ್ಲಿ ಇರೂದಾದರೂ ಏನು ! " ಎಂದು ಮೂಗು ಮುರಿದಳು ರಾಧೆ. ಅದೊಂದು ದುರಭ್ಯಾಸ ರಾಧೆಯದು, ಮೂಗು ಮುರಿಯುವುದು ! ತುಂಟತನದಿಂದ ಹಾಗೆ ಅಣಕವಾಡಿದಾಗಲೆಲ್ಲ ರಾಧೆ ಹದಿ

ನೈದರ ಹುಡುಗಿಯಂತೆ ಕಾಣುತ್ತಾಳ ಈಗ ಅವಳಿಗೆಷ್ಟು ವ ರಬಹು ದೆಂಬುವನ್ನು ಖಚಿತವಾಗಿ ಹೇಳಲು ನನ್ನಿಂದ ಶಕ್ಯವಿಲ್ಲ. ಇರಬಹು ಇಪ್ಪತ್ತೈದು .ಅಥವಾ ಇಪ್ಪತ್ತೇಳು. ಅದಕ್ಕಿಂತ ಹೆಚ್ಚಿಗಿರಲಾರದು ಮಾತ್ರ ನಿಜ. ಅವಳ ರೂಪು ಹೇಗೆ ? ಅದನ್ನಾದರೂ ನಾನು ಹೇಗೆ ಹೇ ? ಹಾಗೆ. ಸೌಂದರ್ಯ ದೃಷ್ಟಿಯಿಂದ ನಾನು ಅವಳನ್ನು ನೋಡಿದಾದೂ ಇ ಇದ್ದಾಳೆ. ನಾಲ್ಕು ಜನರ ಹಾಗೆ ಲೀಲಾವತಿಯೊಡನೆ ಹೋಲಿಸಿದಾಗ ಮಾ ರಾಧೆಯೇ ಮೇಲೆಂದು ಹೇಳಬೇಕಾಗುತ್ತದೆ ದೇಹವಿಕ್ರಯದಂಥ ವ್ಯ ಯು ನಡೆ ಸಿದ್ದರೂ ಸಹ ರಾಧೆಯು ಶರೀರದ ಮಾಟ ಕೆಟ್ಟುಹೋಗಿಲ್ಲ ನ ಪಟಿಂಗ ರನ್ನು ಮರುಳುಗೊಳಿಸುವ ವಕ್ರವಿನ್ಯಾಸದಿಂದ ಕೂಡಿ ಆಕರ್ಷಕ ಅವಳ ದೇಹ.

"ಸೆರೆಗೆ ರೊಕ್ಕ ಹುಡುಕುತ್ತಿದ್ದಿ ಹೌದಲ್ಲೋ ? ಇದೋ ನೋಡಿಲ್ಲಿ, ಒಂದು ಬಾಟಲಿಯನ್ನೇ ತಂದೀನಿ," ಎನ್ನುತ್ತ ಚೀಲವನ್ನು ಅವಳ ಕೈಗಿತ್ತೆ.

"ಐ ನನ್ನ ರಾಜಾ!" ಎಂದು ನಾಟಕೀಯವಾಗಿ ಹೇಳುತ್ತ ಅವಳು ಸೀಸೆಯನ್ನೇ ಹೊರತೆಗೆದಳು. ತಾನೇ ಒಳಗೆ ಹೋಗಿ ಬಚ್ಚಲ ಮೇಲಿದ್ದ ಒಡಕು ಕಪ್ಪುಗಳನ್ನು ತಂದಳು. ನಾನು ಗೋಡೆಗೊರಗಿ, ಮೇಲೆ ಕಾಲುಚಾಚಿ ಕುಳಿತುಕೊಂಡೆ. ಕಿಸೆಯಲ್ಲಿ ಹತ್ತುರೂಪಾಯಿ ರ ನೆನಪು ಬಂದು "ನಾನು ಇಂದಿನಮಟ್ಟಿಗಾದರೂ ರಾಜನೇ!" ಕೊಂಡು ಮುಗುಳ್ನಗು ಬೀರಿದೆ.

"ಏನದು ಬಹಳ ನಗ್ತೀರಲ್ಲ ?" ಎಂದಳು ರಾಧೆ, ನೆರೆತುಂಬಿದ ಕಪ್ಪನ್ನು ನನ್ನ ಕೈಗೆ ಕೊಡುತ್ತ.

"ನಿನ್ನ ನೋಡಿದ ಕೂಡಲೇ ನಗೆ ಬರ್ತದ. ನಾನಾರೆ ಮಾಡಲಿ ಹೇಳು"

"ಯಾಕ್ರೀ ? ನಗುವಂಥಾದ್ದು ಏನು ಕಂಡಿರಿ ನನ್ನಲ್ಲಿ ? ಏನು ನನ್ನ ಕಣ್ಣು ಸೊಟ್ಟೊ ? ಮೂಗು ಸೊಟ್ಟೊ ? ಕಾಲು ಡೊಂಕೋ ? ಕೈ ಡೊಂಕೋ ?"

"ಒಂದೂ ಅಲ್ಲ ಡೊಂಕು....ಬುದ್ಧಿ!"

"ನನ್ನ ಡೊಂಕು ಬುದ್ಧಿಯಿಂದ ನಿಮಗೇನು ಕೊಂಕಾತು ?

"ಇದೇ ಈಗ ನಾ ಬಂದಾಗ, ಕೈ ಹಿಡಿದ ಹೆಂಡತಿಯ ಹಾಗೇ ಕಿಸೆ ತಪಾಸು ಮಾಡ್ತಿದ್ದಿಯಲ್ಲ, ಅದಕ್ಕಂದೆ!"

"ನಿಮ್ಮಂಥವರ ಕೈಹಿಡಿದವಳು ಬಾಯಿಬಾಯಿ ಬಡಕೋಬೇಕು. ಏನು ಒಂದು ಉದ್ಯೋಗನೇ? ಒಂದು ನೌಕರೀನೇ? ಹಗಲುರಾತ್ರೀ ಕುಡಿಯೋದು, ಗಟಾರವಾಗ ಬೀಳೋದು, ಕಾರಿಕೊಳ್ಳೋದು " ಎಂದು ಅವಳು ಕೆಣಕಿದಳು.

ನನಗೇನು ಕೋಪ ಬರಲಿಲ್ಲ. ರಾಧೆ ನಿಜವನ್ನೇ ಹೇಳುತ್ತಿದ್ದಾಗ ಕೋಪ ವಾದರೂ ಹೇಗೆ ಬರಬೇಕು? ಅನೇಕ ಬಾರಿ, ಕುಡಿತದ ಮತ್ತಿನಲ್ಲಿ ತೂರಾ ಡುತ್ತ ಬಂದು, ಬಾಗಿಲು ತೆರೆಯಲು ಶಕ್ತಿಯಿಲ್ಲದೆ, ಕೋಣೆಯೆದುರಿನ ಚರಂಡಿ ಯಲ್ಲಿ ನಾನು ಉರುಳಿಬೀಳುತ್ತಿದ್ದೆ. ನಾನು ಬಿದ್ದ ಸದ್ದು ಕೇಳಿ ರಾಧೆಯೇ ಎದ್ದು ಬಂದು, ಅತ್ಯಂತ ಪ್ರಯಾಸದಿಂದ ನನ್ನನ್ನೆಬ್ಬಿಸಿ, ನನ್ನ ಮೈಗಂಟಿಕೊಂಡ ಹೊಲಸನ್ನೊರೆಸಿ ಕೋಣೆಗೆ ಕರೆದು ತಂದು ಮಲಗಿಸುತ್ತಿದ್ದಳು. ನಾನು ಕಾರಿಕೊಂಡ ವಾಂತಿಯನ್ನು ಬಳಿದು ಬಿಸುಟುತ್ತಿದ್ದಳು. ನಾನು ಹೊಲಸು ಮಾಡಿದ ಚಾಪೆಯನ್ನೂ ಹೊದ್ದಿಕೆಯನ್ನೂ ತೊಳೆದುಕೊಡುತ್ತಿದ್ದಳು. ನನ್ನ ಹತ್ತಿರ ಹಣವಿದ್ದಾಗಲೆಲ್ಲ ನಾನೂ ಅವಳಿಗೆ ಎರಡುಮೂರು ರೂಪಾಯಿ ಕೊಡುತ್ತಿದ್ದೆ ಆಗಾಗ ಸೆರೆಯನ್ನೂ ತಂದು ಕೊಡುತ್ತಿದ್ದೆ. ಅವಳ ಉಪಕಾರದ ಹೊರೆಯನ್ನು ಹಾಗೆಯೇ ಹೊತ್ತುಕೊಂಡಿರಲು ನನಗೇನೂ ಇಷ್ಟವಿರಲಿಲ್ಲ.

"ನಿಮ್ಮನ್ನ ನೋಡತಾ ಇದ್ದರೆ ನೀವು ಮೊದಲಿಂದಲೂ ಹೀಗೇ ಇದೀರಿ ಅಂತ ಅನಿಸೂದಿಲ್ಲ, ಮೊದಲು ಚಲೋ ಸ್ಥಿತಿಯಲ್ಲಿದ್ದಿರಬೇಕು ..." ಎಂದಳು ರಾಧೆ.

"ಹುಚ್ಚಿ! ಮೊದಲಿಂದಲೂ ಹೀಗೇ ನಾನು, ಸಾವಿರಾರು ವರ್ಷದಿಂದ ಹೀಗೇ! ಕುಡಿಯೋದು, ಗಟಾರವಲ್ಲಿ ಬೀಳೋದು, ಲಫಂಗನಂತೆ ತಿರು ಗೂದು ..."

"ಊಹೂಂ ..ನನಗೇನೂ ಹಾಗನಿಸೂದಿಲ್ಲ ಬಿಡಿರಿ. ನೀವು ಕಲಿತವರೇ ಇದೀರಿ. ಏನೋ ಆಗಿ ಹಿಂಗ ಆಗಿರಬೇಕು ."

"ಏನೋ ಅಂದರ ಏನಾಗಿರಬಹುದು. ಹೇಳು ನೋಡೋಣ...ಬಹಳ ದೊಡ್ಡ ಜಾಣೆ!" ಅವಳ ಕೆನ್ನೆ ಚಿವುಟುತ್ತ ನಾನೆಂದೆ.

"ಮೊದಲು ನೀವು ಯಾವದೋ ಚಲೋ ನೌಕರಿಯಲ್ಲಿದ್ದಿರಿ. ಅದನ್ನ ಬಿಟ್ಟಮ್ಯಾಲ...."

"ಬರೋಬ್ಬರಿ! ನಾ ಎಂಥ ನೋಕರಿಯಲ್ಲಿದ್ದೆ ಗೊತ್ತೇ ರಾಧಾ? ಜಿಲ್ಲಾದ ಕಲೆಕ್ಟರಾಗಿದ್ದೆ ನೋಡು!" ಎಂದು ಹೇಳಿ ಅವಳ ಬೆನ್ನು ಬಾರಿಸಿ ನಕ್ಕೆ.

"ಕಲೆಕ್ಟರ್ ಆಗಿರದಿದ್ದರೂ—ಒಂದು ಚಲೋ ನೋಕರಿ ಅಂತೂ ಮಾಡತಿದ್ದಿರಿ, ಅಷ್ಟು ಖರೆ. ಅದರಲ್ಲೇನು ಸಂಶಯು ಇಲ್ಲ....ಅಲ್ಲದೆ....ದೇಶ ಭಕ್ತರ ಹಂಗ ಖಾದೀ ಅರಿವೀ ಬ್ಯಾರೆ ಹಾಕತೀರಲ್ಲ?"

"ಖಾದೀನೇ?" ನಾನು ಗಹಗಹಿಸಿ ನಕ್ಕೆ. "ಅವು ನೂರಾರು ವರ್ಷದ ಹಿಂದೆ ಹೊಲಿಸಿದ್ದು ರಾಧಾ. ಸ್ವತಃ ಗಾಂಧಿಯವರೇ ನನಗೆ ಆ ಅರಿವೆ ಕಾಣಿಕೆ ಕೊಟ್ಟಿದ್ದರು!"

ಎರಡನೆಯ ಕಪ್ಪನ್ನು ಬಾಯಿಗಿಟ್ಟುಕೊಳ್ಳುತ್ತ ರಾಧೆಯೆಂದಳು:

"ಅಥವಾ....ನೀವೂ ಒಬ್ಬರೂ ಪುಢಾರಿಯಾಗಿದ್ದಿರೋ ಹೆಂಗ?"

"ಸರಿಯಾಗಿ ಹೇಳಿದೆ ರಾಧಾ! ಅಂಥಿಂಥಾ ಚಿಕ್ಕ ಪುಟ್ಟ ಪುಢಾರಿಯಾಗಿರಲಿಲ್ಲ. ದೊಡ್ಡ ದೊಡ್ಡ ಪುಢಾರಿಯಾಗಿದ್ದೆ ನಾನು! ಜಿಲ್ಲಾ ಕಾಂಗ್ರೆಸ್ ಕಮಿಟಿ ಅಧ್ಯಕ್ಷ, ಕಾರ್ಯದರ್ಶಿ, ಕೋಶಾಧ್ಯಕ್ಷ, ಸದಸ್ಯ—ಎಲ್ಲಾ ನಾನೇ ಆಗಿದ್ದೆ.... ಕಲೆಕ್ಟರ್, ಡಿ. ಎಸ್. ಪಿ., ಕಮಿಶನರ್, ಅದೇಕೆ, ಮಿನಿಸ್ಟರ್ ಕೂಡಾ ನನಗೆ ಅಂಜಿ ಸಾಯುತ್ತಿದ್ದರು..." ಎಂದು ಹೇಳುತ್ತ ನಾನು ಚಾಪೆಯ ಮೇಲೆ ಹೊರಳಾಡತೊಡಗಿದೆ.

"ನಿಶೆ ತಲೆಗೇರಿರಬೇಕು!" ಎಂದು ಅಣಕಿಸಿದಳು ರಾಧೆ.

"ಏರಿರಲಿಕ್ಕೇ ಬೇಕಲ್ಲ! ಮರಿಯನ ಅಡ್ಡೇದಲ್ಲಿ ಒಂದು ಬಾಟಲಿ.... ಮತ್ತ ಇಲ್ಲಿ ನಿನ್ನ ಸಂಗಡ .. ತಲೆಗಷ್ಟೇ ಅಲ್ಲ ರಾಧಾ.. ನೆಟ್ಟಗೇ ನೆತ್ತಿಗೇ ಏರಿ ಹೋಗ್ಯದ ನಿಶೆ....Come on my dear·· Let us sing a song...."

"No!" ಎಂದಳು ರಾಧೆ. ಅವಳಿಗೂ ಅಮಲು ಏರುತ್ತಿತ್ತು.

"Come on my girl....Let us sleep!"

"No! you bloody swine!" ಎಂದಳು ರಾಧೆ.

"ಓಹ್ಹೊ! ಇವಳಿಗೂ ಇಂಗ್ಲೀಷು ಬರ್ತದಲ್ಲ!" ನಾನು ಅಣಕ ಮಾಡಿದೆ.

"ಯಾಕ ಬರಬಾರದು?" ಎನ್ನುತ್ತ ಅವಳು ಮೂಗು ಮುರಿದಳು.

" ದೊಡ್ಡ ಗ್ರ್ಯಾಜುಯೇಟೇ ಇರಬೇಕು ಹಾಗಾದರೆ ! ಎಮ್ಮೇನೇ ಆಗಿರ ಬೇಕು !"

" ಎಮ್ಮೇ ಯಾಕಾಗಲಿ ? ನಾಕುಯತ್ತೆ ಕಲಿತೀನಿ ನಾನೂ ಇಂಗ್ಲೀಷ್ ಸಾಲಿಯೊಳಗ ! "

ನನಗೆ ಅದೊಂದು ಹೊಸ ಸುದ್ದಿಯಾಗಿತ್ತು. ಅವಳಿಗೆ ಇಂಗ್ಲೀಷು ತಿಳಿಯುತ್ತಿರಬಹುದೆಂದು ಅದಃವರೆಗೂ ನನಗನ್ನಿಸಿರಲಿಲ್ಲ. ಅವಳು ಹೇಳಿದ್ದರೆ ತಾನೆ ಗೊತ್ತಾಗುವುದು ? ಅವಳ ಬಾಯಿಯಿಂದ ಅದುವರೆಗೆ ಇಂಗ್ಲೀಷ್ ಶಬ್ದವೂ ಬಂದಿರಲಿಲ್ಲ. ಅವಳ ಜತೆಗಿರುವಾಗ ನಾನೂ ಆ ಭಾಷೆಯನ್ನು ಬಳಸಿರಲಿಲ್ಲ. ಇಂದು ಅದೇಕೋ ಏನೋ ಅಕಸ್ಮಾತ್ ನಾನು ಇಂಗ್ಲೀಷು ಆಡಿದ್ದೆ. ಅವಳೂ ಆದೇ ಭಾಷೆಯಲ್ಲಿ ಉತ್ತರವಿತ್ತಿದ್ದಳು. ನಾನು ತಿಳಿದಿದ್ದ ಮೇರೆಗೆ ರಾಧೆ ಅಷ್ಟೇನೂ ಅಶಿಕ್ಷಿತೆಯಲ್ಲ ಹಾಗಾದರೆ !

" Very good Radha ! I am glad··· " ಎಂದೆ ನಾನು.

" Damn you ! " ಎಂದಳು ರಾಧೆ, ನಾಲ್ಕನೆಯ ಕಪ್ಪು ಮುಗಿಸುತ್ತ.

" ಸಿಟ್ಟಾಗಬೇಡ ರಾಧಾ....ಇಲ್ಲಿ ಬಾ, " ಎನ್ನುತ್ತ ಅವಳನ್ನು ಸಮೀಪಕ್ಕೆಳೆಯಲು ಪ್ರಯತ್ನಿಸಿದೆ. ಅವಳು ದೂರ ಸರಿದು ಕುಳಿತು—

" ರೊಕ್ಕ ಕೊಟ್ಟರೆ ಬರ್ತೀನಿ, " ಎಂದಳು.

ಕಿಸೆಯಿಂದ ಹತ್ತು ರೂಪಾಯಿಯ ನೋಟು ತೆಗೆದು ಚಾಪೆಯ ಮೇಲಿಟ್ಟು ನಾನೆಂದೆ :

" ಇಷ್ಟಾದರೆ ಸಾಕಲ್ಲ ?"

" ಪಿಶ್ಶ್ ! ಇಷ್ಟೇ ಅಂತ ತಿಳಿದೀರೇನ್ ನನ್ನ ಕಿಮ್ಮತ್ತು ? ನನ್ನಂಥಾಕಿಗೆ ನೂರು ರೂಪಾಯಿ ನಗನಗತ ಕೊಟ್ಟಾರು ಯಾರಾದರೂ ! "

" ನಾನೂ ಕೊಡ್ತೀನಂತೆ—ಮಹಾರಾಜನಾದಾಗ.... "

" ನೀವು ಕೊಡ್ತೀರಿ....ನಾ ತಗೊಂಡೆ....ಕೆಲಸಕ್ಕೆ ಬಾರದ ಸೋಮಾರಿ !"

" ನಾಲಿಗೆ ಉದ್ದ ಮಾಡುತೀಯಲ್ಲ ರಾಧಾ....ಐದು ರೂಪಾಯಿ ತೋರಿಸಿದರೆ ನಿನ್ನಂಥವರು ಹತ್ತುಮಂದಿ ಓಡಿ ಬರ್ತ್ತಾರ. ತಿಳೀತೇನು ? "

" ಕರಕೊಳ್ರಿ ಅವರನ್ನೇ. ಕರಕೊಂಡು ಕುಣಿದಾಡಿರಿ. ನಾ ಹೋಗತೀನಿ!"

" ಏಳು ಹಾಗಾದರೆ !"

ಅವಳು ಏಳಲಿಲ್ಲ. ಅವಳ ಮುಖಮುದ್ರೆಯಲ್ಲಿ ಥಟ್ಟನೆ ಒದಲಾವಣೆ ಯಾಯಿತು ನನ್ನ ಪಾಗ್ಗುಲಲ್ಲಿ ಒರಗಿಕೊಳ್ಳುತ್ತ ಅವಳೆಂದಳು :

" ಊಹೂಂ ನಾನಿವತ್ತು ಇಲ್ಲೇ ಇರುವಾಕಿ! ನೀವೇನು ಮಾಡ ತೀರೋ ನೋಡತೀನಿ ! "

ಅವಳನ್ನು ಇನ್ನಷ್ಟು ಹತ್ತಿರ ಎಳೆದು ಬಿಗಿಯಾಗಿ ತಬ್ಬಿಕೊಂಡೆ ಅವಳ ತೋಳುಗಳು ನನ್ನ ಕೊರಳನ್ನು ಬಳಸಿದುವು ಅವಳ ತುಟಿಗಳು ತರೆದುವು. ಅವಳ ಉಸಿರಿಗೆ ವೇಗವೇರಿತು

" ಸ್ವಲ್ಪ ತಡೆ ರಾಧಾ ಚಿಲಕ ಹಾಕಿ ಬರ್‍ತೀನಿ. " ಎಂದೆ ನಾನು

ಚಿಲಕ ಹಾಕುತ್ತಿದ್ದಂತೆ ನನ್ನ ಕೈ ಕೊಂಚ ನಡುಗಿದಂತಾಯಿತು ಇದ್ದು ದಿದ್ದಂತೆಯೇ ನನಗೆ ಲೀಲಾವತಿಯ ನೆನಪು ಬಂದಿತು ಅವಳ ಸಮತಲವಾದ ಎದೆಯನ್ನೂ ದಪ್ಪನೆಯ ಕನ್ನಡಕವನ್ನೂ ನೆನೆದಾಗ ನಗು ಬರುವಂತಾಯಿತು ನಾನು ಚಿಲಕ ಹಾಕಿ ಬರುವುದನ್ನೇ ಕಾದು ಮಲಗಿದ್ದ ರಾಧೆಯನ್ನು ನೋಡಿದ ಹಾಗೆ ನನಗೇಕೋ ತುಸು ಅಸಹ್ಯವೆನ್ನಿಸಿತು ಒಂದೇ ಒಂದು ವರ್ಷದಲ್ಲಿ ನಾನು ಎಂಥ ಪತನದ ಪಾತಾಳಕ್ಕಿಳಿದೆನಲ್ಲ! ನಿಜವಾಗಿ ಲೀಲಾವತಿಯಂಥವಳು ನನ್ನ ಜೊತೆಗಾರ್ತಿಯಾಗಬೇಕು ಅವಳ ಸಂಸ್ಕೃತಿ ನನ್ನ ಸಂಸ್ಕೃತಿ ಒಂದೇ ಮಟ್ಟದ್ದು ಅಂಥವಳ ಬದಲು—ಸಾವಿರ ಗಂಡಸರಿಗೆ ದೇಹವೊಪ್ಪಿಸಿದ ಈ ನಿತ್ಯವಧುವಿ ನೊಡನೆ " ಛಿ ! ಛಿ ! ಧಿಕ್ಕಾರ ! " ಎನ್ನಿಸಿತು ರಾಧೆಯನ್ನೆತ್ತಿ ಹೊರಗೆ ಬಿಸುಟಬೇಕೆನ್ನಿಸಿತು ಆದರೆ ನಾನು ಹಾಗೆ ಮಾಡದೆ, ಲೀಲಾವತಿಯ ನೆನ ವನ್ನೇ ಮನಸ್ಸಿನಿಂದ ಬಿಸುಟು ರಾಧೆಯನ್ನೇ ತಬ್ಬಿಕೊಂಡೆ.

ನನ್ನ ಆಲಿಂಗನದಲ್ಲಿ ಅಂಥ ಉದ್ರೇಕವೇನೂ ಇರಲಿಲ್ಲವೆನ್ನುವುದು ರಾಧೆಗೆ ಹೇಗೆ ಗೊತ್ತಾಯಿತೊ ತಿಳಿಯದು. ಸ್ತ್ರೀಯರಿಗೆ ಇಂಥ ವಿಷಯಗಳು ಸಹಜವಾಗಿ ತಿಳಿಯುತ್ತಿರಬೇಕು, ಸೆರೆಯ ಅಮಲಿನಲ್ಲೂ ಅವಳು ನನ್ನ ವಿಮನ ಸ್ಕತೆಯನ್ನು ಗುರುತಿಸಿ ಅದನ್ನು ಹೋಗಲಾಡಿಸಲು ತಾನು ಕಲಿತ ವಿದ್ಯೆಯನ್ನು ಪ್ರಯೋಗಿಸತೊಡಗಿದಳು. ನನ್ನನ್ನು ತೃಪ್ತಿಗೊಳಿಸಲು ಅವಳು ಯತ್ನಿಸಿ ದಷ್ಟೂ ನನಗೆ ನನ್ನ ಬಗೆಗೇ ಹೇಸಿಕೆಯೆನಿಸತೊಡಗಿತು. ನೆಟ್ಟಗೆ ರೈಲುದಾರಿಗೆ ಹೋಗಿ, ಮೇಲುಗಾಡಿ ಬಂದಾಗ ಅದರೆದುರು ಬಿದ್ದು ಈ ಹೇಸಿ ಜೀವನವನ್ನು ಅಂತ್ಯಗೊಳಿಸುವುದೇ ಉತ್ತಮವೆಂದು ಅನ್ನಿಸತೊಡಗಿತು. ರಾಧೆಯ ಅಪ್ಪುಗೆ

ಯಿಂದ ಬಿಡಿಸಿಕೊಂಡು ಮೇಲೆದ್ದು, ಸೀಸೆಯಲ್ಲುಳಿದಿದ್ದ ಸೆರೆಯನ್ನೆಲ್ಲ ಹೊಟ್ಟೆಗಿಳಿಸಿದೆ. ಆಗ ಮಾತ್ರ ಏನೋ ಕೊಂಚ ಸಮಾಧಾನವಾದಂತಾಯಿತು.

ಮತ್ತೆ ಎಷ್ಟು ಹೊತ್ತು ಕಳೆಯಿತೋ ತಿಳಿಯದು. ನನಗೆ ಪ್ರಜ್ಞೆ ಬಂದಾಗ ಮಧ್ಯರಾತ್ರಿಯಾದಂತಿತ್ತು. ಬೀದಿಯಲ್ಲುರಿಯುತ್ತಿದ್ದ ವಿದ್ಯುದ್ದೀಪದ ಕಿರಣವೊಂದು ಕೋಣೆಯ ಕಿಟಕಿಯಿಂದ ನುಸುಳಿಬರುತ್ತಿತ್ತು. ಹೊರಗಡೆ ತುಸುವೂ ಗದ್ದಲವಿರಲಿಲ್ಲ, ಓಣಿಯೆಲ್ಲ ಗಾಢವಾಗಿ ನಿದ್ರಿಸುತ್ತಿರಲು ಸಾಕು. ನನ್ನ ಎಡದೋಳಿನ ಮೇಲೆ ತಲೆಯನ್ನೊರಗಿಸಿ ರಾಧೆಯೂ ಸುಖವಾಗಿ ನಿದ್ರಿಸುತ್ತಿದ್ದಳು. ನಾನು ಎಚ್ಚತ್ತುಕೊಂಡು ಅಲುಗಾಡಿದಾಗ ಅವಳಿಗೂ ಎಚ್ಚರವಾಯಿತು.

" ಟೈಂ ಎಷ್ಟಿರಬಹುದ್ರೀ ಈಗ ? " ಎಂದಳು ರಾಧೆ.

" ಗಡಿಯಾರವನ್ನು ಕೇಳಬೇಕು. "

" ಹತ್ತೋ ಹನ್ನೊಂದೋ ಆಗಿರಬಹುದು ಅಲ್ಲಾ ? "

" ಹನ್ನೊಂದೂ ಇರಬಹುದು ಇಪ್ಪತ್ತೊಂದೂ ಇರಬಹುದು. ದೇವರೇ ಬಲ್ಲ ! " ಎಂದೆ ನಾನು.

ಕತ್ತಲಲ್ಲಿಯೇ ಅವಳು ಎದ್ದು ಕುಳಿತಳು

" ಇವತ್ತು ಎಂಟು ಗಂಟೆಗೆ ಒಬ್ಬರು ಬರ್ತೀನಂದಿದ್ದರು. ನಾ ಮರತೇಬಿಟ್ಟೆ. ಬಂದು ಹೋದರೋ ಏನೋ. "

" ಹೋಗಿ ನೋಡಲ್ಲ ! "

" ಇನ್ನೇನು ಹೋಗೂದು ಬಿಡ್ರಿ. ಹೆಂಗೂ ನೀವು ಹತ್ತು ರೂಪಾಯಿ ಕೊಟ್ಟೀರಿ ! "

" ನೂರು ರೂಪಾಯಿ ಕಿಮ್ಮತ್ತಿನವಳಿಗೆ ಹತ್ತು ಅಂದರೆ ಯಾತಕ್ಕಾದೀತು ! ನನ್ನಿಂದ ನಿನಗೆ ಬಹಳ ಹಾನಿಯಾಯ್ತು ನೋಡು ! "

" ಇರಲಿ ಬಿಡ್ರೀ. ವಟವಟ ಮಾಡಬ್ಯಾಡ್ರಿ. ನೀವು ನನಗ ಏನೂ ಕೊಡದಿದ್ರೂ ಅಷ್ಟೆ. ನಿಮ್ಮನ್ನ ಕಂಡರೆ ನನಗೆ ಪ್ರೀತಿ...ಆದಕ್ಕೆ.... "

" ಪ್ರೀತಿ ? ಪ್ರೀೀತೀೀ ! " ಎಂದು ನಾನು ಗಟ್ಟಿಯಾಗಿ ನಕ್ಕೆ.

" ಯಾಕ ? ನಾ ಸುಳ್ಳು ಹೇಳ್ತೀನಿ ಅಂತೀರೇನು ? "

" ನಿನ್ನಂಥವಳ ಬಾಯಿಂದ ಪ್ರೀತಿ ಅನ್ನುವ ಶಬ್ದ ಬಂತಲ್ಲಾ ಅಂತ ಆಶ್ಚರ್ಯ ಆಗ್ತದ ನೋಡು, "

" ಇಲ್ಲರೀ. ನೀವು ನಂಬಿದರೆ ನಂಬಿರಿ. ನಂಬದಿದ್ದರೆ ಬಿಡಿರಿ. ನಿಮ್ಮ ಬಗ್ಗೆ ನನಗಂತೂ ಬಹಳ ಬಹಳ.... "

" ಹೀಗನ್ನುವವರನ್ನು ನೋಡೀನಿ ಬಹಳ ಬಹಳ ಮಂದಿಯನ್ನ ! "

" ಒಟ್ಟಾರೆ ನಿಮ್ಮ ತಲೀನೇ ಕೆಟ್ಟಿರಬೇಕು. ಯಾರನ್ನೂ ನಂಬೂದಿಲ್ಲ ನೀವು. "

" ನಂಬಿದವರೆಲ್ಲಾ ಕುತ್ತಿಗೆ ಕೊಯ್ದ ಮೇಲೆ ನಂಬೂದಾದರೂ ಹ್ಯಾಗೆ ರಾಧಾ ? "

" ನೀವು ಆಸೆಯನ್ನೇ ಬಿಟ್ಟೀರಿ. ಪೂರಾ ನಿರಾಶರಾಗೀರಿ ಯಾರೋ ಕೆಲವರು ಘಾತ ಮಾಡಿದರಂತ ಜಗತ್ತೆಲ್ಲಾ ಘಾತಕಿ ಅಂತಲೇ ತಿಳೀಬಾರದು ಗಟ್ಟಿ ಮನಸ್ಸು ಮಾಡಿ ಹೊಡೆದಾಡಬೇಕು. "

" ಗೋಡೆಯ ಸಂಗಡ ಹ್ಯಾಗೆ ಹೊಡೆದಾಡೂದು ರಾಧಾ ? "

" ಯಾಕ ? ಗೋಡೆ ಆದರೇನಾಯ್ತು ? ಅದನ್ನ ಕೆಡವಬೇಕಂತ ಮನಸು ಮಾಡಿದರ ಹಾರೀ ತಗೊಂಡು ಹಣಿದರಾಯ್ತು. ಕಿತ್ತು ಬೀಳ್ತದ.... "

ಅವಳು ನಕ್ಕಳು—ಮೃದುವಾಗಿ, ಚಿಕ್ಕ ಹುಡುಗಿಯಂತೆ. ಆ ಕ್ಷಣದಲ್ಲಿ ಅವಳ ಬಗೆಗೆ ಮೆಚ್ಚುಗೆಯುಂಟಾಯಿತು.

" ಗೋಡೆ ಕೆಡವಲಿಕ್ಕೂ ಶಕ್ತಿ ಬೇಕಾಗ್ತದ ರಾಧಾ. ಅದೇ ನನ್ನಲ್ಲಿಲ್ಲ. ಇದ್ದರೂ ಕೂಡಾ ಆ ದೊಡ್ಡ ಗೋಡೆಯೆದುರು ನನ್ನ ಆಟ ನಡೆಯುವಂತಿಲ್ಲ. ನಿಜವಾಗಿ ನಾನು ದುರ್ದೈವಿ. ನನ್ನಂಥವರು ಬದುಕಿಯೂ ಇರಬಾರದು. ಸರಕಾರದವರು ನನ್ನನ್ನ ಹೀಗೇ ಬಿಟ್ಟು ತಪ್ಪು ಮಾಡಿದರು. ಹಿಡಿದು ಗಲ್ಲಿಗೇರಿಸಬೇಕಾಗಿತ್ತು ... "

" ಅಂಥಾದ್ದು ನೀವೇನು ಮಾಡೀರಿ ? "

" ಖೂನಿ ಗೀನಿ ಮಾಡಿಲ್ಲ, ನಿಜ. ಮಾಡುವಂಥಾ ಮನುಷ್ಯನೂ ಅಲ್ಲ. ಆದರೆ ನಾನೊಬ್ಬ ಒಂದನೆಯ ನಂಬರಿನ ಉಡಾಳ, ನಿರುಪಯೋಗಿ, ಆಲಸಿ, ಮೈಗಳ್ಳ. ನನ್ನಂಥವರು ಬದುಕಿರಲು ಅಧಿಕಾರವಿಲ್ಲ.... "

" ನೀವು ಇಷ್ಟ್ಯಾಕೆ ನಿರಾಶೆಯಿಂದ ಮಾತಾಡ್ತೀರಿ ಅಂತೀನಿ ! ನಿಮಗಾದದ್ದಾದರೂ ಏನು ? "

ನನಗೆ ಆದದ್ದೇನು ? ಎನ್ನುವುದನ್ನು ರಾಧೆಗೆ ನಾನೆಂದೂ ಹೇಳಿರಲಿಲ್ಲ.

ಆದರೆ, ಇಂದು, ಆದೇಕೋ ಏನೋ, ಅವಳಿಗೆ ಎಲ್ಲವನ್ನೂ ಹೇಳಿಬಿಡಬೇಕೆಂದು ಅನ್ನಿಸಿತು.

" ಬಸೆಟ್ಟಿ ಅಂತ ಒಬ್ಬ ಪುಢಾರಿ ಇದಾನೆ, ಕೇಳಿದೀಯಾ ರಾಧಾ ? "

" ಬಿಳಿಯ ಟೋಪಿ ? "

" ಹುಮ್. ಈ ಕಾಂಗ್ರೆಸ್ ರಾಜ್ಯದಲ್ಲಿ ಬಿಳಿಯಟೋಪಿಗಳಲ್ಲದೆ ಬೇರೆ ಯಾರು ಪುಢಾರಿಯಾದಾರು ? "

" ಇವರ ಮನೆ ಹಾಳಾಗಲಿ...ಇವರ ವಂಶ ನಿರ್ವಂಶ ಆಗಲಿ....ಇವರ ಹೆಂಡಿರ ಬಳೆ ಒಡೆಯಲಿ....ಗುಳದಾಳಿ ಹರಿದುಹೋಗಲಿ! " ಎಂದು ಶಪಿಸಿದಳು ರಾಧೆ.

ನಾನು ಚಕಿತನಾಗಿ ಕೇಳಿದೆ :

" ಯಾರನ್ನ ಶಪಿಸುತೀ ರಾಧೇ ? "

" ಮತ್ತ್ಯಾರನ್ನ ? ಈ ಲಫಂಗ ಬಿಳಿಯ ಟೊಪಿಗಿಯವರನ್ನು ! "

" ಅವರ ಮ್ಯಾಲ ನಿನಗ್ಯಾಕೇ ಸಿಟ್ಟು ? ನಿನಗೇನು ಮಾಡಿದಾರವರು ? "

" ಮಾಡೋದೇನುಳೀತು ? ನನ್ನ ಬಾಳೇ ಹಾಳು ಮಾಡಿದವರೇ ಅವರು "

" ಯಾರು ? ಬಸೆಟ್ಟಿಯೇ ? "

" ಬಸೆಟ್ಟಿಯಲ್ಲದಿದ್ದರಿನ್ನೊಬ್ಬ ಸೆಟ್ಟಿ. ಹಲ್ಕಟ ನನ ಮಕ್ಕಳು. ಈ ಕಾಂಗ್ರೆಸಿನವರಲ್ಲಿ ನೂರರಾಗ ತೊಂಭತ್ತು ಮಂದಿ ಬದ್ಮಾಷರು ರಾಜ್ಯ ಅವರ ಕೈಯಾಗದ ಅಂತ ಬೇಕಾದ ಅತ್ಯಾಚಾರ ಮಾಡತಾರ. ನಾನು ಈ ಹೊಲಸಿನಾಗ ಸಿಕ್ಕು ಬೀಳಲಿಕ್ಕೂ ಒಬ್ಬ ಟೊಪಿಗಿಯವನೇ ಕಾರಣ ಆದ. ನಿಮಗ ಹೇಳಿಲ್ಲಲ್ಲಾ ಇದುವರೆಗೆ ? "

" ಇಲ್ಲವಲ್ಲ ? ನಾನು ನೀನು ಇಂಥಾ ವಿಷಯ ಮಾತಾಡಿಯೇ ಇಲ್ಲ.

" ಇಲ್ಲ. ಇವತ್ತೇ ಯಾಕೆ ಇದೆಲ್ಲಾ ಹೊರಟಿತೋ ನನಗೂ ಗೊತ್ತಿಲ್ಲ. ನಾನು ಯಾರು, ಎಲ್ಲಿಯವಳು ಅನ್ನೂದೇನಾರೆ ನಿಮಗ ಗೊತ್ತದೇನ ? "

" ನೀ ಹೇಳಿದ್ದರಲ್ಲೇನು ಗೊತ್ತಾಗೂದು ? "

" ನಾನಿನ್ನೂ ಸಣ್ಣವಳಿದ್ದಾಗಲೇ ನನ್ನ ಅಪ್ಪ ಅವ್ವ ಇಬ್ಬರೂ ಕಾಲರಾದಿಂದ ತೀರಿಕೊಂಡರಂತೆ. ನನ್ನ ನೋಡಿಕೊಳ್ಳುವವರು ಬ್ಯಾರೆ ಯಾರೂ ಇರಲಿಲ್ಲ. ಉದಾರ ಮನಸಿನವರೊಬ್ಬರು ನನ್ನ ಒಯ್ದು ಅನಾಥ ಬಾಲಕಾಶ್ರಮಕ್ಕೆ

ಸೇರಿಸಿದರು. ಇಪ್ಪತ್ತು ಮೂವತ್ತು ಹುಡುಗಹುಡುಗಿಯರ ಸಂಗಡ ನಾ ಅಲ್ಲಿ ಬೆಳೆದೆ. ಹೈಸ್ಕೂಲಿಗೂ ಹೋದೆ. ಆಗ ಹದಿನಾಲ್ಕು ಹದಿನೈದು ವಯಸ್ಸಿರಬಹುದು. ಮ್ಯಾಟ್ರಿಕ್ ಮಾಡಿ ಯಾವದೊಂದು ಗರ್ಲ್ಸ್ ಸ್ಕೂಲಿನಲ್ಲಿ ಮಾಸ್ತರಿಕೆ ದೊರಕಿಸಿ ಮರ್ಯಾದೆಯಿಂದ ಬಾಳಬೇಕಂತ ನಿಶ್ಚಯ ಮಾಡಿದ್ದೆ.... ಆದರೆ ... ಆದರೆ .."

ರಾಧೆಯ ಮಾತು ಮುಗಿದಿರಲಿಲ್ಲ. ಅಷ್ಟರಲ್ಲಿ ಬಾಗಿಲಿನ ಮೇಲೆ ಯಾರದೋ ಬೆರಳಿನ ಸದ್ದಾಯಿತು. ಅಂಥ ರಾತ್ರಿಯಲ್ಲಿ ಬಾಗಿಲು ತಟ್ಟುವ್ವ ದೇನೂ ಹೊಸ ವಿಷಯವಾಗಿರಲಿಲ್ಲ ಆ ಓಣಿಯಲ್ಲಿ. ನನಗೂ ಅವೆಲ್ಲ ಅಭ್ಯಾಸ ವಾಗಿತ್ತು. ಎಂತಲೇ ನಾನು ಬಾಗಿಲು ತೆರೆಯಲು ಹೋಗದ ಹಾಗೆಯೇ ಬಿದ್ದುಕೊಂಡಿದ್ದೆ.

ಆದರೆ ಬಾಗಿಲು ತಟ್ಟುವುದು ನಿಲ್ಲಲಿಲ್ಲ. ಈ ಬಾರಿ ಮುಷ್ಟಿಯಿಂದ ಪ್ರಹಾರ ಮಾಡಿದಂತಾಯಿತು.

"ಸುಮ್ಮನೆ ಹೋಗೋ ಕುಡುಕ ಸೂಳೀಮಗನೇ, ಇದೇನು ನಿಮ್ಮಪ್ಪನ ಮನೆಯಲ್ಲ!" ಎಂದು ಬಯ್ದು ನಾನು ಮಲಗಿಕೊಂಡೇ ಇದ್ದೆ.

"ಬಾಗಿಲು ತೆಗೆ ಸದ್ಯಾ, ಇಲ್ಲಾಂದರೆ ಬಾಗಿಲಾ ಮುರೀಬೇಕಾದೀತು!" ಎಂದು ಕಠೋರ ಧ್ವನಿಯೊಂದು ಹೇಳಿತು.

ತಾನು ಯಾರೆಂಬುದನ್ನು ಅವನೇನೂ ಹೇಳುವ ಅಗತ್ಯವಿರಲಿಲ್ಲ. ನನಗೆ ಚಿರ ಪರಿಚಿತವಾಗಿದ್ದ ಧ್ವನಿಗಳಲ್ಲಿ ಅದೂ ಒಂದು. ನನ್ನ ಸ್ವಂತದ ಧ್ವನಿಯನ್ನು ಗುರುತಿಸುವಷ್ಟು ಸುಲಭವಾಗಿ ನಾನು ಸಬ್‌ಇನಸ್ಪೆಕ್ಟರ್ ಸೋಮಯ್ಯನ ಧ್ವನಿ ಯನ್ನೂ ಗುರುತಿಸಬಲ್ಲವನಾಗಿದ್ದೆ. ಅವನ ಸ್ವಭಾವವೂ ನನಗೆ ಚೆನ್ನಾಗಿ ತಿಳಿ ದಿತ್ತು. ಪೊಳ್ಳು ಬೆದರಿಕೆ ಹಾಕುವ ಜಾತಿಯವನಲ್ಲ ಸೋಮಯ್ಯ. ಆತ ಅದೇ ತಾನೆ ಹೇಳಿದಂತೆ ಬಾಗಿಲು ಮುರಿಯಲೂ ಹಿಂದುಮುಂದು ನೋಡುವವನಲ್ಲ. ಮೊದಲೇ ಒರಟು ಮನುಷ್ಯ. ಮಂಗನಿಗೆ ಸೆರೆ ಕುಡಿಸಿದಂತೆ ಪೋಲೀಸು ಖಾತೆಯ ಅಧಿಕಾರ ಬೇರೆ. ಮಾದಾಪುರದ ಪೋಲೀಸ್ ಅಧಿಕಾರಿಗಳಲ್ಲೆಲ್ಲ ಅತ್ಯುಗ್ರನಾದವನೆಂದರೆ ಸೋಮಯ್ಯನೇ. ಸ್ವತಃ ಡಿ. ಎಸ್. ಪಿ. ಯೇ ಅವ ನಿಗೆ ಅಂಜುತ್ತಿದ್ದನೆಂದು ಕೇಳಿದ್ದೆ. ಸೋಮಯ್ಯ ಕೋಪಿಸಿಕೊಂಡರೆ ರಿವಾ ಲ್ವರಿನಿಂದ ಹೊಡೆದು ಕೊಲ್ಲಲೂ ಹಿಂಜರಿಯುತ್ತಿರಲಿಲ್ಲವಂತೆ ದೊಡ್ಡ ದೊಡ್ಡ ದರೋಡೆಗಾರರೂ ಸೋಮಯ್ಯನನ್ನು ಕಂಡೊಡನೆ ಬೆಕ್ಕು ಕಂಡ ಇಲಿ

ಯುಂತಾಗುತ್ತಿದ್ದರು. ಆವನ ಒರಟುತನ, ಕ್ರೌರ್ಯ, ನಿಷ್ಠುರ ನಡತೆಗಳ ಅನುಭವ ನನಗೂ ಸಾಕಷ್ಟಿತ್ತು. ಈ ಹಿಂದೆಯೂ ಹಲವುಬಾರಿ ಆತ ಇದೇರೀತಿಯಾಗಿ ಅಪರಾತ್ರಿಯಲ್ಲಿ ಬಂದು ನನ್ನನ್ನೆಬ್ಬಿಸಿ ಠಾಣೆಗೆ ಕರೆದೊಯ್ದು ಪೀಡಿಸಿದ್ದುದಿತ್ತು.

ಜಾರಿಹೋಗಿದ್ದ ಸೀರೆಯನ್ನು ಕೂಡಲೇ ಸರಿಪಡಿಸಿಕೊಳ್ಳುವಂತೆ ರಾಧೆಗೆ ಸೂಚನೆಯಿತ್ತು ಎದ್ದು ಹೋಗಿ ಚಿಲಕ ತೆಗೆದೆ. ಸೋಮಯ್ಯ ಒಳಗೆ ಬಂದವನೇ ವಿದ್ಯುದ್ದೀಪದ ಗುಂಡಿಯೊತ್ತಿ ಬೆಳಕು ಬೀರಿದ. ಕಳಚಿದ್ದ ಸೀರೆಯನ್ನು ಸರಿಯಾಗಿ ಉಟ್ಟುಕೊಳ್ಳುತ್ತಿದ್ದ ರಾಧೆ ಥಟ್ಟನೆ ಒಳಗಿನ ಭಾಗಕ್ಕೋಡಿದಳು.

" ಏನು ನಡಿಸೀಯೋ ಸದ್ಯಾ ? " ಸೋಮಯ್ಯ ಗುಡುಗಿದ.

" ಮಾಡಿಕೊಂಡ ಹೆಂಡತಿಯ ಸಂಗಡ ಎಲ್ಲರೂ ಏನು ನಡಸ್ತಾರೋ ಅದನ್ನೇ ? " ಎಂದು ನಾನು ವ್ಯಂಗ್ಯವಾಗಿ ಉತ್ತರವಿತ್ತೆ.

" ಮಾಡಿಕೊಂಡ ಹೆಂಡತಿ ! ಸೂಳೇರು ಎಂದಿನಿಂದ ಗರತೇರಾಗುತಿರೋದು ! ಈ ರಾಧೆಯ ಹೆಸರು ನಮ್ಮ ರಜಿಸ್ಟರಿನಲ್ಲಿದೆ, ಗೊತ್ತೋ ? "

" ಇರಬಹುದು. ಆದರೀಗ ಅವಳು ವ್ಯವಸಾಯ ಮಾಡುವದಿಲ್ಲ."

" ಇಂಥಾ ಗೊಡ್ಡು ಮಾತೆಲ್ಲಾ ನನ್ನೆದುರು ನಡೆಯುವಂತಿಲ್ಲ. ಏಳು. ಬಟ್ಟೆ ಹಾಕಿಕೋ, ರಾಧೇ ನೀನೂ ತಯಾರಾಗು. ಸ್ಟೇಶನ್ನಿಗೆ ಹೋಗಬೇಕು."

" ಇದೆಷ್ಟನೆಯ ಸಲ ಸೋಮಯ್ಯ ನೀ ನನ್ನ ಬಂಧಿಸೂದು ? ಐದನೆಯ ಸಲ, ಅಲ್ಲಾ ? ಇಂಥಾ ದೊಡ್ಡ ಫೌಜದಾರ ಆಗಿ ಇಂಥಾ ಸೊಟ್ಟ ಕಾರಣದಿಂದ ಅರೆಸ್ಟ್ ಮಾಡೂದಂದರೆ ನಿನಗೇನು ಕಿಮ್ಮತ್ತು ಬಂತು ? "

ಸೋಮಯ್ಯ ಕರೆದು ತಂದಿದ್ದ ಪೈಲವಾನನಂಥ ಪೋಲೀಸನೊಬ್ಬ ನನ್ನನ್ನು ಹೊಡೆಯಲು ಮುಂದೆ ಬಂದ, ನಾನು ನನ್ನ ಮುಖವನ್ನು ಅವನೆದುರು ನೀಡಿ, " ಸುರುಮಾಡಪಾ ಭೀಮಸೇನಾ, ಕೊಡು ನನ್ನ ಮೂಗಿಗೊಂದು ! " ಎಂದು ಅಣಕವಾಡಿ ನಕ್ಕೆ.

ಪುಷ್ಟವಾದ ತೋಳನ್ನು ಮುಂದೆ ಚಾಚಿ ಸೋಮಯ್ಯ ಪೋಲೀಸನನ್ನು ಅತ್ತ ಸರಿಸಿದ.

" ದಂಗಾಮಸ್ತಿ ಬೇಡ ಬಿಸ್ಮಿಲ್. ಈ ಅಸಾಮಿ ಚ್ಯಾಪ್ಟರ್ ಆದರೂ ಕಲಿತವನಿದಾನೆ. ಇವನ ಮೈಮೇಲೆ ಹೊಡೆತದ ಗುರುತಾಗೋದು ಬೇಡ ಹೊರಡು ಸದ್ಯಾ. ಬಿಸ್ಮಿಲ್, ನೀನು ಆ ಸುಂದರಿಯನ್ನ ನೋಡಿಕೋ, "

ಬಿಸ್ಮಿಲ್ ಒಳಗಡೆ ಅಡಿಯಿಡುವ ಮುನ್ನ ರಾಧೆಯೇ ಬಂದುಬಿಟ್ಟಳು. ಇಂಥ ಬಂಧನಗಳು ನನಗೆ ಅಪರಿಚಿತವಾಗಿರಲಿಲ್ಲವಾದುದರಿಂದ ನನಗೇನೂ ಅನ್ನಿಸಲಿಲ್ಲ. ರಾಧೆಯೂ ಅನೇಕ ಸಲ ಲಾಕಪ್ಪಿನ ಅನುಭವ ಪಡೆದಿರಲು ಸಾಕು.

ಪೋಲೀಸ ಠಾಣೆಯಲ್ಲಿ ನಮ್ಮನ್ನು ಯಾರೂ ಏನನ್ನೂ ಕೇಳಲಿಲ್ಲ. ನಿದ್ರೆಯಿಂದ ಜಡವಾಗಿದ್ದ ದೃಷ್ಟಿಯನ್ನೆತ್ತಿ ಹವಲ್ದಾರ್ ನನ್ನನ್ನು ನೋಡಿ, ಥಟ್ಟನೇ ಗುರುತು ಹಿಡಿದು ಹೆಸರು ಬರೆದುಕೊಂಡ. ಇನ್ನೊಬ್ಬ ಸಿಪಾಯಿ ನನ್ನನ್ನು ಶೋಧಿಸಿದ. ಅನಂತರ ನನ್ನನ್ನೂ ರಾಧೆಯನ್ನೂ ಒಂದು ಕೋಣೆಯಲ್ಲಿ ದೂಡಿ ಬಾಗಿಲು ಇಕ್ಕಿಕೊಂಡರು.

" ನಾವು ಮತ್ತೆ ಗಂಡಹೆಂಡರಂತಿರಲು ನೀನೇ ಅಪ್ಪಣೆ ಕೊಟ್ಟಂತಾಯಿತಲ್ಲ ! " ಎಂದೆ ನಾನು ಸೋಮಯ್ಯನಿಗೆ.

" Shut up ! " ಎಂದನಾತ.

" ನನ್ನ ಮೇಲ್ಯಾಕೆ ಸಿಟ್ಟಾಗುತೀ ಸೋಮಯ್ಯ ? ನಿನ್ನ ಡ್ಯೂಟೀ ನೀನು ಮಾಡುತಾ ಇದೀ. ನಾ ಬಲ್ಲೆ. ಯಾರೋ ನಿನಗೆ ಆರ್ಡರ್ ಕೊಡ್ತಾರೆ. ಅವರು ಪೋಲೀಸ್ ಖಾತೆಯವರಲ್ಲವಾದರೇನಾಯ್ತು ? ಪೋಲೀಸ್ ಖಾತೆಯ ಅಪ್ಪನಂತೂ ಹೌದಲ್ಲ ? ಅಪ್ಪನ ಮಾತು ಮಗ ಕೇಳಲೇಬೇಕಲ್ಲ ? ಇಲ್ಲವಾದರೆ, ಹಮಾಲೀ ಮಾಡಲು ತಕ್ಕವನಾದ ನಿನ್ನಂಥವ ಫೌಜದಾರನಾಗಿರೂದು ಶಕ್ಯವಾಗುತ್ತಿತ್ತೇ ? "

" ದಿನದಿಂದ ದಿನಕ್ಕೆ ನಿನಗೆ ಮೈಸೊಕ್ಕು ಏರುತಾ ಇದೆ ! ಈ ಬಾರಿ ಚೆನ್ನಾಗಿ ಬುದ್ಧಿ ಕಲಿಸುತೀನಿ, ಸುಮ್ಮನಿರು ! " ಎಂದ ಸೋಮಯ್ಯ.

" ಹೀಗೆ ನನ್ನ ಅರೆಸ್ಟ್ ಮಾಡೂದು ಬೇಕಾಯದೇಶೀರ ಆಗ್ತದ, ತಿಳುಕೊಂಡಿರು." ಎಂದೆ ನಾನು.

" ಕೋರ್ಟಿನಲ್ಲಿ ಹೇಳುವಿಯಂತೆ ! ದೊಡ್ಡ ಅಡ್ವೋಕೇಟನ ಮೊಮ್ಮಗ ! " ಎಂದು ತಿರಸ್ಕಾರದಿಂದ ನುಡಿದು ಸೋಮಯ್ಯ ಹೊರಟುಹೋದ.

" ಹೌದೇ ಸದಾ ? ಇದು ಬೇಕಾಯ್ದೇಶೀರ ಅಂತೀರಾ ? " ಎಂದಳು ರಾಧೆ.

" ಇಂಥಾ ಅಪರಾತ್ರಿಯೊಳಗೆ ಹೆಂಗಸರನ್ನ ಹಿಡುಕೊಂಡು ಬಂದು ಲಾಕಪ್ಪಿಗೆ ಹಾಕಲಿಕ್ಕೆ ಬರೂದಿಲ್ಲ. ನಮಗೆ ಮುದ್ದಾಂ ತ್ರಾಸ ಕೊಡಬೇಕಂತಲೇ

ಈತ ಈ ಆಟ ಹೂಡಿದಾನೆ. ಈ ಪ್ರಕರಣ ಕೋರ್ಟಿಗೂ ಹೋಗುವದಿಲ್ಲ. ಮುಂಜಾನೆ ಅಂದರೆ ಬಿಟ್ಟುಬಿಡ್ತಾರೆ."

"ಈ ಪೋಲೀಸ್ ನನ ಮಕ್ಕಳ ಗುಣಾನೇ ಇಷ್ಟು. ನನ್ನೂ ಐದಾರು ಸಲ ಹಿಡಿದು ಒಂದೆರಡು ರೂಪಾಯಿ ಕಸಕೊಂಡು ಬಿಟ್ಟುಬಿಟ್ಟರು. ಹೆಂಗೂ ನನ್ನ ಹತ್ತರ ಹತ್ತುರೂಪಾಯಿ ಅದಾವಲ್ಲ. ನೀವು ಕೊಟ್ಟದ್ದು ? ಅವನ್ನೇ ಒಗದುಬಿಟ್ಟು ಹೊಂಟುಹೋಗೋಣೇನು ? " ಎನ್ನುತ್ತಾ ಅವಳು ರವಕೆಗೆ ಕೈಹಾಕಿದಳು.

"ಅವ್ವಯ್ಯ ! ನಾ ಅವನ್ನ ಅಲ್ಲೇ ಮರತು ಬಂದಿರಬೇಕು. ಇನ್ನ ಹೆಂಗ ಮಾಡೂದು ಸದಾ ? "

"ಆ ಹತ್ತುರೂಪಾಯಿ ಇವರ ಹೆಣಕ್ಕೆ ಯಾಕೆ ಬಡಿಯೂದು ರಾಧಾ ? ಇವರು ನಮಗ ಮಾಡೂದಾದರೂ ಏನು ? ನಮಗಾದರೂ ಯಾವ ಜಾಗಾ ಆದರೇನಂತೆ ? ಅದೂ ಖೋಲಿ. ಇದೂ ಖೋಲಿ. ಎಲ್ಲಾ ಒಂದೇ."

"ಅಲ್ಲಾ, ಹಿಂಗ ಒಮ್ಮಿಂದೊಮ್ಮೆಲೇ ಬಂದು ಯಾಕ ಹಿಡಿದರಂತೀನಿ ? "

"ಮ್ಯಾಲಿಂದಮ್ಯಾಲ ನನಗೆ ಅಂಜಿಕೆ ಹಾಕ್ತಿರೂದು ಅವರ ಧೋರಣೆ ರಾಧಾ. ಬಸೆಟ್ಟಿಯ ವಿರುದ್ಧ ನಾನೇನೂ ಮಾಡಬಾರದು, ಕುಡಿದು ಅಮಲೇರಿ ಬಿದ್ದುಕೊಂಡಿರಬೇಕು—ಅಂತ..."

"ಅವನ ವಿರುದ್ಧ ನೀವಾದರೂ ಏನು ಮಾಡುವ ಹಂಗಿದೀರಿ ? ನಿಮಗ ಆ ಶಕ್ತೀನೇ ಇಲ್ಲಂತ ನೀವೇ ಹೇಳ್ತೀರಲ್ಲ ? "

"ಆದರೂ ಅವರಿಗೆ ನಂಬಿಕೆಯಿಲ್ಲ ರಾಧಾ. ಕಳ್ಳನ ಜೀವ ಸುಮ್ಮನಿರೂದಿಲ್ಲ. ನಾನು ಧಟ್ಟನೆ ಏನಾದರೂ ಮಾಡಿಯೇನು, ಗದ್ದಲ ಎಬ್ಬಿಸೇನು ಅಂತ ಅಂಜಿಕೆ. ಅದಕ್ಕೇ ಮ್ಯಾಲಿಂದಮ್ಯಾಲ ಹೀಗೆ ಅರೆಸ್ಟ್ ಮಾಡಿ ಲಾಕಪ್ಪಿನ ಡೋಸ್ ಕೊಡೂದು ! "

ನಾನು ತಿಳಿದುಕೊಂಡಿದ್ದ ಮೇರೆಗೆ ಬೆಳಗಾಗುತ್ತಲೂ ನಮ್ಮನ್ನು ಬಿಟ್ಟುಬಿಟ್ಟರು. ಅರ್ಥಾತ್—ಸೋಮಯ್ಯ ಆಗ ರಾಣೆಯಲ್ಲಿರಲಿಲ್ಲ.

## ೩

ರಾತ್ರಿ ಕುಡಿದ ಸೆರೆಯ ಅಮಲು ಪೂರ್ತಿಯಾಗಿ ಇಳಿದು ಹೋಗಿತ್ತು. ರಾಧೆ ಮನೆಗೆ ಹೊರಟು ಹೋದಳು. ನನಗೆ ಮಾತ್ರ ತಕ್ಷಣ ಅಲ್ಲಿಗೆ ಹೋಗಲು ಮನಸ್ಸು ಬರಲಿಲ್ಲ. ಒಂದು ಚಹದಂಗಡಿಗೆ ಹೋಗಿ ಬಾಯಿ ತೊಳೆದು ಕೊಂಡು ಬಿಸಿ ಬಿಸಿ ಚಹ ಕುಡಿದಾಗ ಎಷ್ಟೋ ಹಿತವೆನಿಸಿತು. ಅನಂತರ ಒಂದು ಸಿಗರೇಟು ಹೊತ್ತಿಸಿ ಹಾಯಾಗಿ ಹೊಗೆಯೆಳೆಯುತ್ತ ಕುಳಿತುಕೊಂಡೆ

ತೆರವಾಗಿದ್ದ ಪಕ್ಕದ ಕುರ್ಚಿಯ ಮೇಲೆ ಯಾರೋ ಬಂದು ಕುಳಿತು ಕೊಂಡಂತಾಯಿತು. ನಾನೇನು ಅತ್ತ ತಿರುಗಿನೋಡಲಿಲ್ಲ. ಆದರೆ, ಬಂದಾತ ಸುಮ್ಮನಿರದೆ ನನ್ನ ಭುಜ ಹಿಡಿದು ಅಲುಗಾಡಿಸಿದ. ಹೊರಳಿ ನೋಡಿದರೆ ರುದ್ರಗೌಡ. ಮೂಸೂರಿನ ಸನಿಯದಲ್ಲಿದ್ದ ಕ್ಯಾತನೂರಿನ ಗಣ್ಯವ್ಯಕ್ತಿ. ಅವನೂ ನಮ್ಮ ಭಾಗದವನೇ ಆದುದರಿಂದ ಇಬ್ಬರಿಗೂ ಚೆನ್ನಾಗಿ ಪರಿಚಯವಿತ್ತು.

"ಏನು ಸದಾಶಿವಪ್ಪ, ನಿಮ್ಮ ಗುರುತೇ ಸಿಗದಾಂಗ ಆಗ್ಯೈತಲ್ಲ? ಮೈಯಾಗ ಅರಾಮ ಆದನೋ ಇಲ್ಲೋ?" ಎಂದು ಆರಂಭಿಸಿದ ರುದ್ರಗೌಡ

"ಇಲ್ರೀ, ಎಲ್ಲಿಯ ಅರಾಮು? ಏನು ಮಣ್ಣು?"

"ಡಾಕ್ಟರರಿಗೆ ತೋರಿಸೀರಾ?"

"ಈ ಸೊಟ್ಟ ಪುಟ್ಟ ಡಾಕ್ಟರಿಗೆಲ್ಲಾ ಏನು ತಿಳೀತದ ಬಿಡ್ರಿ. ತೋರಿಸೂ ದಾದರೆ ಬಿ. ಸಿ. ರಾಯ್‌ರಿಗೇ ತೋರಿಸಬೇಕು!"

ಬಿ. ಸಿ. ರಾಯ್ ಎಂದರಾರು ಎನ್ನುವುದು ರುದ್ರಗೌಡನಿಗೂ ಗೊತ್ತಿರ ಬೇಕಲ್ಲ! ಅವನು ಕಾಂಗ್ರೆಸ್ಸಿಗನೇ ಅಲ್ಲವೆ? ೧೯೪೭ರಿಂದೀಚೆಗೆ ಬಿಳಿಯ ಟೋಪಿ ಏರಿಸಿದ ಹಸಿಬಿಸಿ ಕಾಂಗ್ರೆಸ್ಸಿಗನೂ ಅಲ್ಲ ರುದ್ರಗೌಡ. ನಮ್ಮ ಭಾಗ ದಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು ಸಂಘಟಿಸಿದ ಕೆಲವೇ ಜನರಲ್ಲಿ ಆತನೂ ಒಬ್ಬ. ನಾಲ್ಕಾರು ಬಾರಿ ಸೆರೆಮನೆ ಕಂಡುಬಂದ ಕೀರ್ತಿಯೂ ಅವನದಾಗಿದೆ. ೧೯೩೦

ರಿಂದಲೂ ಆತ ಖಾದೀ ಧರಿಸುತ್ತಿರುವನಂತೆ ಅಂದರೆ ಮೂವತ್ತು ವರ್ಷ ಗಳಿಂದ ಸತತವಾಗಿ ಖಾದೀಧಾರಿಯಾಗಿದ್ದ ಹಾಗಾಯಿತು. ಒಂದೆರಡು ವರ್ಷ ಆತ ಎ. ಐ. ಸಿ. ಸಿ. ಯ ಸದಸ್ಯನೂ ಆಗಿದ್ದನಂತೆ. ಅರ್ಥಾತ್—ಬಿ. ಸಿ. ರಾಯ್ ಎಂದರೆ ಇವನಿಗೆ ಗೊತ್ತಿರಲೇಬೇಕಲ್ಲ ?

ರುದ್ರಗೌಡ ನಕ್ಕ. ಅವನ ನಗೆ ಕೊಂಚ ವಿಚಿತ್ರವಾಗಿಯೇ ಕಾಣುತ್ತಿತ್ತು. ಮುಂಭಾಗದ ನಾಲ್ಕೈದು ಹಲ್ಲು ಬಿದ್ದು ಹೋಗಿದ್ದುದರಿಂದ ಆತ ನಕ್ಕಾಗ ಲೆಲ್ಲಾ ಬಾಯಿಯ ಬಾವಿಯ ದರ್ಶನವಾಗಿ ವಿಚಿತ್ರವೆನಿಸುತ್ತಿತ್ತು. ವಯಸ್ಸಿನ ಪರಿಣಾಮ ! ಐವತ್ತರ ಸೀಮೆಯನ್ನು ದಾಟಿ ಬಂದುದರ ಕುರುಹಾಗಿ ರುದ್ರ ಗೌಡನ ಗಡ್ಡ ಮೀಸೆಗಳಲ್ಲಿ ಬಿಳಿಗೂದಲುಗಳೆಷ್ಟೋ ಬೆರೆತುಕೊಂಡಿದ್ದುವು. ರುದ್ರಗೌಡ ನಕ್ಕ, ನಕ್ಕು ಹೇಳಿದ .

" ಆ ಪ್ರಕರಣ ಆದಂದಿನಿಂದ ನಿಮ್ಮ ತಲೀನೂ ಸ್ವಲ್ಪ ಕೆಟ್ಟಂಗ ಕಾಣ ತದ. ಅಲ್ಲಾ ? "

" ಕೆಟ್ಟಿರಲಿಕ್ಕೇ ಬೇಕಲ್ಲ ? "

ಸಹಕಾರೀ ಸಂಘದ " ಆ ಪ್ರಕರಣ " ವನ್ನು ರುದ್ರಗೌಡ ಚೆನ್ನಾಗಿ ಬಲ್ಲವ ನಾಗಿದ್ದ. ಅವನಿಗೆ ಮಾತ್ರವಲ್ಲ, ನಮ್ಮೂರಿನ ಸುತ್ತಲಿನ ಹತ್ತು ಹಳ್ಳಿಗಳ ಜನರಿಗೆಲ್ಲ ಆ ವಿಷಯ ಪೂರ್ತಿಯಾಗಿ ತಿಳಿದಿತ್ತು. ಸಂಘದ ಹಣವನ್ನು ನಾನೇ ಎತ್ತಿಹಾಕಿರಬೇಕೆಂದು ಕೆಲವರು ಭಾವಿಸಿದ್ದರಾದರೆ, ಬನೆಟ್ಟಿಯೇ ಅವನ್ನು ನುಂಗಿರಬೇಕೆಂದು ಇನ್ನು ಕೆಲವರು ತಿಳಿದುಕೊಂಡಿದ್ದರು. ಆ ವಿಚಾರವಾಗಿ ರುದ್ರಗೌಡನ ಅಭಿಮತವೇನಿದ್ದಿತೆಂಬುದು ನನಗೆ ಗೊತ್ತಿರಲಿಲ್ಲ ಗೊತ್ತು ಮಾಡಿಕೊಳ್ಳುವ ಇಚ್ಛೆಯೂ ನನಗಿರಲಿಲ್ಲ

" ಹೀಂಗ ತಲೀ ಕೆಡಿಸಿಕೊಂಡು ತಿರುಗಿದರ ಏನುಪಯೋಗ ಅಂತೀನಿ ? ಮನುಷ್ಯಾ ಆದವ್ಯಾಲ ಸ್ವಲ್ಪ ಕೈಕಾಲು ಅಗಳಾಡಿಸಬೇಕು, ಸಮಾಜಕ್ಕ ಉಪ ಯೋಗ ಆಗುವಂಥ ಕೆಲಸ ಏನಾರೆ ಮಾಡಾಕಬೇಕು, " ಎಂದ ರುದ್ರಗೌಡ.

" ನಾನೇನು ಮಾಡಬೇಕಂತೀರಿ ಗೌಡರೆ ? ನಿಜವಾಗಿ ನನಗೆ ಏನೇನೂ ಉತ್ಸಾಹ ಇಲ್ಲ ನೋಡಿರಿ "

" ಈ ತರುಣ ವಯಸ್ಸಿನೊಳಗೇ ಇಷ್ಟು ನಿರಾಶ ಆದರೆ ಹೆಂಗ ಸದಾ ಶಿವಪ್ಪ ? ಏನೋ ಆಯ್ತು, ಹೋಯ್ತು. ಅದನ್ನ ಮನಸ್ಸಿಗೆ ಹಚ್ಚಿಕೊಂಡು

ಕೊರಗುವದರಲ್ಲಿ ಅರ್ಥ ಇಲ್ಲ. ನೀವು ಇಚ್ಛಿಸಿದರೆ ಬೇಕಾದ್ದು ಮಾಡಬಹುದು. ಇನ್ನೂ ವಯಸ್ಸು ಅದ, ಬುದ್ಧಿ ಅದ, ಅನುಭವನೂ ಬಂದದ...."

"ಹೌದು. ಭಯಂಕರ ಅನುಭವ ಬಂದದ ...ಅದಕ್ಕಿಂತ ಹೆಚ್ಚಿನ ಅನುಭವ ತಗೊಂಡೇನು ಮಾಡೂದು ?"

"ಜೀವನ ಅಂದರ ಹಿಂಗೇ. ಒಮ್ಮೆ ಬೀಳೂದು—ಒಮ್ಮೆ ಏಳೂದು ಇದ್ದದ್ದೇ, ಒಮ್ಮೆ ಬಿದ್ದ ಮಾತ್ರಕ್ಕೆ ಕೈಕಾಲು ಕಳಕೊಂಡು ಕೂಡ್ರಬಾರದು. ಸಮಾಜದಲ್ಲಿ ಅನೇಕ ದುಷ್ಟಶಕ್ತಿಗಳವ. ಸದ್ಯಕ್ಕೆ ಅವುಗಳ ಕೈಯೇ ಮ್ಯಾಲ ಅದ. ಆದರೆ ಅದೇ ಕಡೆತನಕ ಉಳಿಯಬಾರದು. ನಿಮ್ಮಂಥವರು ಮುಂದೆ ಬಂದು ದುಷ್ಟರ ವಿರುದ್ಧ ಹೋರಾಡಬೇಕು "

"ಬಸೆಟ್ಟಿಯಂಥಾ ದುಷ್ಟ ನಮ್ಮ ಜಿಲ್ಲೆಯಲ್ಲಿ ಇನ್ನೊಬ್ಬ ಇರಲಿಕ್ಕಿಲ್ಲ. ಆದರೆ ಅಂಥವನೇ ಜಿಲ್ಲೆಯ ಪುಢಾರಿಯಾಗಿ ಮೆರೀತಿದಾನಲ್ಲ ? ಮಂತ್ರಿಗಳು ಮುಖಂಡರು ಎಲ್ಲಾ ಇವನ ಮಾತೇ ಕೇಳುವವರು. ನಮ್ಮಂಥ ಬಡವರನ್ನು ಯಾರು ಮಾತಾಡಿಸುತಾರೆ ಹೇಳಿರಿ. ಬಸೆಟ್ಟಿಯ ವಿರುದ್ಧ ಆದದ್ದಕ್ಕೆ ನನ್ನ ಗತಿಯೇ ಏನಾಯ್ತು ನೋಡಿದಿರಲ್ಲ ? ನನ್ನಿಂದಾಗಿ ತಿಮ್ಮಣ್ಣ ಬೇರೆ ವ್ಯರ್ಥವಾಗಿ ಪ್ರಾಣ ಕಳಕೊಂಡ. ಒಂದು ಖೂನಿ ಮಾಡಿಸಿಯೂ ಬಸೆಟ್ಟಿ ಉಳಿದುಕೊಂಡ. ಇನ್ನು ಅಂಥವನ ವಿರುದ್ಧ ಯಾರು ಏನು ಮಾಡಬಲ್ಲರು ?"

"ಕೊಲೆ, ಹಾದರ, ಕಳವು ಒಂದಿಲ್ಲೊಂದು ದಿನ ಬಯಲಿಗೆ ಬಂದೇ ಬರ್ತಾವ ಸದಾಶಿವಪ್ಪ. ಪಾಪಿಗಳಿಗೆ ಶಿಕ್ಷೆ ಆಗೇ ಆಗ್ತದ. ಆದರೆ ಅದು ತಾನಾಗೇ ಆಗುವದಿಲ್ಲ. ಯಾರಾದರೂ ಧೈರ್ಯದಿಂದ ಮುಂದೆ ಬಂದು ಅವರನ್ನ ಬಯಲಿಗೆಳೀಬೇಕಾಗ್ತದ. ಬಸೆಟ್ಟಿಯನ್ನ ನಾವು ಸುಮ್ಮನೆ ಬಿಡಬಾರದು. ಅವನ ದುಷ್ಟ ಕೃತ್ಯಗಳನ್ನೆಲ್ಲಾ ಸಾರಿ ಸಾರಿ ಹೇಳಬೇಕು. ಅವನೆಂಥಾ ನೀಚನೆಂಬುದು ಜನರಿಗೆಲ್ಲ ತಿಳಿಯಬೇಕು. ಮುಖಂಡರಿಗೂ ಗೊತ್ತಾಗಬೇಕು. ಅಷ್ಟು ಮಾಡಿದರೆ ಬಸೆಟ್ಟಿಯ ಆಟ ನಿಂತಂತೆಯೆ. "

ಬಸೆಟ್ಟಿಯ ವಿರುದ್ಧವಾಗಿ ನನ್ನನ್ನೆತ್ತಿ ನಿಲ್ಲಿಸಲು ರುದ್ರಗೌಡ ನಡೆಸಿದ್ದ ಪ್ರಯತ್ನವನ್ನು ನೋಡಿ ನನಗೇನೂ ಅಚ್ಚರಿಯೆನಿಸಲಿಲ್ಲ. ಅನೇಕ ವರ್ಷಗಳಿಂದ ಅವರಿಬ್ಬರಲ್ಲಿ ಭಾರೀ ಸ್ಪರ್ಧೆ ಬೆಳೆದು ಬಂದಿದ್ದುದನ್ನು ನಾನು ಚೆನ್ನಾಗಿ ಬಲ್ಲವನಾಗಿದ್ದೆ. ೧೯೪೭ರ ಮುನ್ನ ನಮ್ಮ ಭಾಗದ ಏಕಮೇವ ಮುಂದಾಳುವಾಗಿದ್ದವನು ರುದ್ರಗೌಡ. ನಮ್ಮ ತಾಲೂಕಿನಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು

ಬಲಪಡಿಸಿದವನೂ ಆತನೇ. ಸ್ವಾತಂತ್ರ್ಯ ಬರುವುದಕ್ಕೆ ಮೊದಲು ಬಸೆಟ್ಟಿ ಕಾಂಗ್ರೆಸ್ಸಿನ ಪ್ರಬಲ ವಿರೋಧಿಯಾಗಿದ್ದ. ದ್ವಿತೀಯ ಮಹಾಯುದ್ಧದ ಕಾಲಕ್ಕೆ ಆತ ಯುದ್ಧರಂಗದ ಸದಸ್ಯನಾಗಿದ್ದುಕೊಂಡು ಬ್ರಿಟಿಷ ಸರಕಾರಕ್ಕೆ ಸೈನಿಕರನ್ನೂ ಹಣವನ್ನೂ ಒದಗಿಸಲು ಸಾಕಷ್ಟು ಪ್ರಯತ್ನಪಟ್ಟಿದ್ದ. ಅಸೆಂಬ್ಲಿ, ಕೌನ್ಸಿಲ್, ಡಿ. ಎಲ್. ಬಿ, ಇತ್ಯಾದಿ ಆಯ್ಕೆಗಳಲ್ಲೆಲ್ಲ ಕಾಂಗ್ರೆಸ್ ಹುರಿಯಾಳು ಗಳನ್ನು ವಿರೋಧಿಸಿದ್ದ. ೧೯೪೨ರ ಚಳವಳಿಯ ಕಾಲಕ್ಕೆ ತಲೆಮರೆಸಿಕೊಂಡ ಕಾಂಗ್ರೆಸ್ ಕಾರ್ಯಕರ್ತರನೇಕರನ್ನು ಆತ ಹಿಡಿದುಕೊಟ್ಟಿದ್ದುದೂ ಇತ್ತು. ಸ್ವಾತಂತ್ರ್ಯದ ಹೋರಾಟವನ್ನು ಯಾವಾಗಲೂ ವಿರೋಧಿಸುತ್ತ ಬಂದು ಪರ ಕೀಯ ಸರಕಾರದ ಬೂಟು ನೆಕ್ಕುವ ಹೇಸಿ ಕಾಯಕದಲ್ಲಿಯೆ ಧನ್ಯತೆ ಪಡೆಯು ತ್ತಿದ್ದ ಬಸೆಟ್ಟಿ, ೧೯೪೭ರ ಸಪ್ಟಂಬರ್ ತಿಂಗಳಿನಲ್ಲಿ ಬಿಳಿಯ ಟೋಪಿ ಏರಿಸಿ ಕಾಂಗ್ರೆಸ್ ಸದಸ್ಯನಾಗುತ್ತಲೂ ಅವನ ತಾರೆ ನಿಧಾನವಾಗಿ ಮೇಲಕ್ಕೇರುತ್ತ ಬಂದಿತ್ತು. ಅವನಿಂದ ಹಣ ತಿಂದೋ ಅಥವಾ ಮತ್ತಾವ ಸಹಾಯ ಪಡೆದೋ ಅನೇಕ ಕಾಂಗ್ರೆಸ್ಸಿಗರು ಅವನ ಬಾಲ ಹಿಡಿಯತೊಡಗಿದ್ದರು. ತಾಲೂಕು ಕಾಂಗ್ರೆಸ್ ಚುನಾವಣೆಯ ಕಾಲಕ್ಕೆ ಸಾವಿರಾರು ರೂಪಾಯಿ ಖರ್ಚುಮಾಡಿ ಉಪಾಧ್ಯಕ್ಷನಾಗಿದ್ದ ಬಸೆಟ್ಟಿ. ಅಲ್ಲಿಂದ ಜಿಲ್ಲಾ ಕಾಂಗ್ರೆಸ್ಸಿಗೆ ಜಿಗಿದಿದ್ದ. ರುದ್ರಗೌಡ ಬಸೆಟ್ಟಿಯಷ್ಟು ಹಣವಂತನಲ್ಲ. ಬಸೆಟ್ಟಿಯಂತೆ ಅನೀತಿಯಿಂದ ಹಣಗಳಿಸುವ ಹೇಸಿತನಕ್ಕೂ ಇಳಿಯುವವನಲ್ಲ ಅದರಿಂದಾಗಿ, ರುದ್ರಗೌಡ ಎಷ್ಟು ವಿರೋಧಿಸಿದರೂ ಅವನ ಆಟ ನಡೆಯದೆ ಬಸೆಟ್ಟಿ ಮುಂದಾಳುವೆನಿಸಿ ಕೊಂಡಿದ್ದ. ಮೊದಲನೆಯ ಮತ್ತು ಎರಡನೆಯ ಮಹಾ ಚುನಾವಣೆಗಳ ಕಾಲಕ್ಕೆ ಕಾಂಗ್ರೆಸ್ ಟಿಕೀಟು ದೊರಕಿಸಿ ಅಸೆಂಬ್ಲಿ ಸದಸ್ಯನಾಗಲು ಬಸೆಟ್ಟಿ ಪ್ರಯತ್ನಿಸಿದ್ದನಾದರೂ ಅನೇಕ ಕಾರಣಗಳಿಂದ ಆತ ಯಶಸ್ವಿಯಾಗಿರಲಿಲ್ಲ. ಈಗ ಮತ್ತೆ ಮೂರನೆಯ ಮಹಾಚುನಾವಣೆಯ ಕಾಲ ಸನ್ನಿಹಿತವಾದಂತಿತ್ತು. ನಾನು ತಲೆ ಕೆರೆದುಕೊಂಡೆ. ಈಗ ನಡೆಯುತ್ತಿರುವ ಇಸವಿ ಯಾವುದು ? ೧೯೬೦ ? ಅಥವಾ ೧೯೬೧ ?

“ ಎಲೆಕ್ಶನ್ ಹತ್ತಿರ ಬಂತೇನು ಗೌಡರೆ ? ”

“ ಬಂದಂತೆಯೇ. ಈಗಾಗಲೇ ಎಷ್ಟೋ ಮಂದಿ ತಯಾರಿ ಮಾಡ್ತಿದಾರೆ. ಮೊದಲು ಕಾಂಗ್ರೆಸ್ ಟಿಕೀಟು ಸಿಗಬೇಕಲ್ಲ ? ಅದಕ್ಕಾಗಿ ಈಗಿನಿಂದಲೇ ಗದ್ದಲ ನಡದದ. ”

" ಈ ಸಲಾನೂ ಬಸೆಟ್ಟಿ ಟಿಕೀಟಿಗಾಗಿ ಪ್ರಯತ್ನ ಮಾಡುವವ ಅನ್ನಿರಿ."

" ಬಿಟ್ಟಾನೇನು ಅವ ? ಸಾಯುವದರೊಳಗಾಗಿ ಒಮ್ಮೆ ಎಂ. ಎಲ್. ಎ. ಆಗಬೇಕು, ಶಕ್ಯ ಆದರೆ ಮಂತ್ರಿಯೂ ಆಗಬೇಕು ಅಂತ ಅವನ ಆಸೆ. "

" ಎರಡು ಸಲ ಪ್ರಯತ್ನ ಮಾಡಿದರೂ ಟಿಕೀಟು ಸಿಗಲಿಲ್ಲಲ್ಲ ? ಮೂರ ನೆಯ ಸಲ ಆದರೂ ಸಿಕ್ಕೀತೋ ಹ್ಯಾಗೆ ? "

" ಅದನ್ನ ಈಗಲೇ ಹೆಂಗ ಹೇಳೂದು ಸದಾಶಿವಪ್ಪ ? ಈ ಐದು ವರ್ಷ ದಲ್ಲಿ ಬಸೆಟ್ಟಿ ತನ್ನ ಪ್ರಸ್ಥ ಬೆಳಿಸಿಕೊಳ್ಳಲು ಆಕಾಶ ಪಾತಾಳ ಒಂದುಮಾಡಿ ದಾನ. ನಿಮಗೂ ಗೊತ್ತದಲ್ಲ ? ಜಿಲ್ಲಾ ಕಾಂಗ್ರೆಸ್ ಅಂತೂ ಈಗ ಅವನದೇ ಆಗ್ಯದ. ಬೆಂಗಳೂರಿನಿಂದ ಬರುವ ದೊಡ್ಡ ದೊಡ್ಡ ಮುಖಂಡರೆಲ್ಲಾ ಅವನ ಮನೆಯೊಳಗೇ ಇಳಿದುಕೊಳ್ತಾರ. ಅವರಿಗೆಲ್ಲಾ ಅವನಲ್ಲಿ ರಾಜಾತಿಥ್ಯ ನಡೀತದ. ಅದೂ ಅಲ್ಲದೆ ಮಂತ್ರಿಯೊಬ್ಬ ಇವನಿಗೆ ದೂರದಿಂದ ಸಂಬಂಧಿಕ ನಾಗಬೇಕಂತೆ. ಅಂತೂ ಬಸೆಟ್ಟಿ ಈಗ ಬಹಳ ಪ್ರಭಾವಶಾಲಿಯಾಗಿದಾನನ್ನೂ ದರಲ್ಲಿ ಸಂಶಯ ಇಲ್ಲ.... "

" ಸದಾಸ್ಮಿತಪ್ಪನವರೂ ಬರ್ತಾರೇನು ಇವನ ಮನೆಗೆ ?"

" ಅವರನ್ನು ಬಿಟ್ಟಾನೇನು ಸೆಟ್ಟಿ ? ನಾಲ್ಕೈದು ಸಲ ಅವರನ್ನೂ ಊಟಕ್ಕೆ ಕರೆದು ತಂದಿದ್ದನಂತೆ. "

" ಅವರು ಮಾತ್ರ ಅವನಲ್ಲಿ ಇಳಿಯುವದಿಲ್ಲ, ಅಲ್ಲಾ ? "

" ಇಲ್ಲ. ಅವರ ಹಳೆಯ ಮಿತ್ರರೊಬ್ಬರ ಮನೆಯಲ್ಲೇ ವಸತಿ ಮಾಡು ತಾರ. ಆದರೂ ಅವರೊಡನೆಯೂ ಬಸೆಟ್ಟಿಯ ಸಲಿಗೆ ಬಹಳ."

" ಸದಾಸ್ಮಿತಪ್ಪನವರೂ ದೊಡ್ಡ ಮುಖಂಡರು. ಅಂಥವರ ದೋಸ್ತಿ ಅದ ಅಂದಮೇಲೆ ಬಸೆಟ್ಟಿಗೆ ಟಿಕೀಟು ಸಿಕ್ಕೂದು ಸುಲಭ ಅಂತ ಕಾಣ್ತದಲ್ಲ ? "

" ಮ್ಯಾಲಮ್ಯಾಲ ಹಂಗ ಕಾಣ್ತದ, ಆದರ, ಸದಾಸ್ಮಿತಪ್ಪನವರದು ಒಂದು ಥರದ ಸ್ವಭಾವ. ಬಸೆಟ್ಟಿಯ ನಿಜವಾದ ವಿಷಯ ಅವರಿಗೆ ಗೊತ್ತಿ ದ್ದಂತೆ ಕಾಣೂದಿಲ್ಲ. ಸಾಕ್ಷಿ ಪುರಾವೆ ಸಹಿತ ನಾವು ಅವರಿಗೆ ಮನಗಾಣಿಸಿ ಕೊಟ್ಟರ ಬಸೆಟ್ಟಿಯಂಥ ಲಫಂಗನನ್ನ ಅವರೆಂದೂ ಎತ್ತಿ ಹಿಡಿಯಲಿಕ್ಕಿಲ್ಲ. ಸದಾ ಸ್ಮಿತಪ್ಪ ಒಳ್ಳೆಯವರು. ಅವರಿಗೆ ಇಂಥ ನೀಚತನ ಸರಿಬರುವದಿಲ್ಲ."

" ಇವ ನೀಚ ಅನ್ನುವದನ್ನ ಮೊದಲು ಸಿದ್ಧಮಾಡಿ ಕೊಡಬೇಕಾಗ್ತ ದಲ್ಲ ? "

" ಅದೇ ಇರೂದು ಕಷ್ಟ. ಅದಕ್ಕಾಗೇ ನಾನು ನಿಮಗೆ ಹೇಳ್ತಿರೂದು. ನೀವು ಮನಸು ಮಾಡಿದರೆ ಈ ಕೆಲಸ ಆದೀತು. ಬಸೆಟ್ಟಿಯ ಹುಳುಕುಗಳೆಲ್ಲಾ ನಿಮಗೆ ಗೊತ್ತವ. ಅವನಿಂದ ನಿಮಗೆ ಬಹಳ ಅನ್ಯಾಯವೂ ಆಗ್ಯದ. ಅವ ನನ್ನ ಹಿಂಗೇ ಬಿಡಬಾರದು, ಬಯಲಿಗೆಳೀಬೇಕು. ಇಲ್ಲದಿದ್ದರೆ ಅವ ಟಿಕೀಟೂ ದೊರಕಿಸಿ ಎಂ. ಎಲ್. ಎ. ನೂ ಆಗಬಹುದು, ಮಿನಿಸ್ಟರೂ ಆಗಬಹುದು. ಇಂಥವರೆಲ್ಲಾ ಮಿನಿಸ್ಟರಾದರೆಂದರ ದೇಶದ ಉದ್ಧಾರವಾದಂತೆಯೆ ! "

ರುದ್ರಗೌಡನ ಆ ಮಾತು ನನ್ನ ಮೆದುಳನ್ನು ತಿವಿದೆಬ್ಬಿಸಿತು. ಒಂದು ವರ್ಷದ ವರೆಗೆ ಸೆರೆಯ ಅಮಲಿನಲ್ಲಿ ಹುಗಿದುಹೋಗಿದ್ದ ನನ್ನ ಚೇತನಕ್ಕೆ ಏನೋ ಅಷ್ಟು ಜೀವ ಬಂದಂತಾಯಿತು. ನನ್ನ ಮನೆಮಾರು ಸೂರೆಗೊಂಡು ನನ್ನನ್ನು ಅನ್ಯಾಯವಾಗಿ ಹಾಳುಮಾಡಿದ ಬಸೆಟ್ಟಿಯ ಮೇಲೆ ಸೇಡನ್ನು ತೀರಿಸಿ ಕೊಳ್ಳಬೇಕೆಂಬ ಸಿಟ್ಟು ಸಿಡಿದೆದ್ದಿತು.

" ನಾನೇನು ಮಾಡಬೇಕಂತೀರಿ ಗೌಡರೆ ? " ಎಂದು ಕೇಳಿದೆ.

" ಬಸೆಟ್ಟಿಯ ಲಫಂಗತನವನ್ನ ಸಿದ್ಧ ಮಾಡಲು ಸಾಕ್ಷಿ ಪುರಾವೆ ತಯಾರು ಮಾಡಬೇಕು. ನೀವು ಅಷ್ಟು ಮಾಡಿದರೆ, ಉಳಿದದ್ದು ನಾ ನೋಡಿಕೊಳ್ತೀನಿ."

" ನೀವೂ ಪ್ರಯತ್ನ ಮಾಡುವವರೋ ಏನು ಟಿಕೀಟಿಗಾಗಿ ? "

" ಹೌದು. ಆ ವಿಚಾರವೂ ಅದ. ಕಾಂಗ್ರೆಸ್ಸಿಗಾಗಿ ಆಯುಷ್ಯವನ್ನೆಲ್ಲಾ ಸವೆಸಿದ ನನ್ನಂಥವನಿಗೆ ಟಿಕೀಟು ಸಿಗಬಾರದೇಕೆ ? "

ಬಸೆಟ್ಟಿಗಿಂತ ರುದ್ರಗೌಡ ಸಾವಿರಪಾಲಿಗೆ ಮೇಲು. ರುದ್ರಗೌಡನಿಗೆ ಟಿಕೀಟು ಸಿಕ್ಕಿದರೆ ಆತ ಆರಿಸಿಬರುವುದರಲ್ಲಿಯೂ ಸಂಶಯವಿರಲಿಲ್ಲ. ಅವನಿಗೆ ವಿರೋಧ ಮಾಡುವಂಥ ದೊಡ್ಡ ಇಸಮುಗಳು ನಮ್ಮ ತಾಲೂಕಿನಲ್ಲಂತೂ ಯಾರೂ ಇರಲಿಲ್ಲ—ಬಸೆಟ್ಟಿಯೊಬ್ಬನನ್ನು ಬಿಟ್ಟು.

ಅವರಿಬ್ಬರಿಗೂ ನಡೆದ ಸ್ಪರ್ಧೆಗಳಲ್ಲೆಲ್ಲ ಇದೇ ಬಲು ಭಾರೀ ಸ್ಪರ್ಧೆ ಯೆಂಬುದು ಸ್ಪಷ್ಟವಾಗಿತ್ತು.

" ಸೆಟ್ಟಿಯಂಥಾ ಹಣವಂತನ ವಿರುದ್ಧ ಹೋರಾಡಲಿಕ್ಕೆ ಸಾಕಷ್ಟು ಹಣ ಬೇಕಾಗ್ತದಲ್ಲ ಗೌಡರೆ ? "

" ಹಣದ ವಿಷಯ ನನಗಿರಲಿ. ಎಷ್ಟು ಖರ್ಚಾದರೂ ಚಿಂತೆಯಿಲ್ಲ. ನನ್ನ ಭೂಮಿಯನ್ನೆಲ್ಲಾ ಮಾರುವ ಪ್ರಸಂಗ ಬಂದರೂ ಅಡ್ಡಿಯಿಲ್ಲ. ಸೆಟ್ಟಿಗೆ ಟಿಕೀಟು ಸಿಗಗೊಡುವಂತಿಲ್ಲ, " ಎಂದ ರುದ್ರಗೌಡ. ಆತ ಆಡಿದಂತೆ

ಮಾಡುವ ಹಟವಾದಿಯೆಂಬುದು ನನಗೇನು ಗೊತ್ತಿರಲಿಲ್ಲವೆ ? ಇಂಥ ಛಲವಾದಿಗಳಿಗಾಗಿಯೆ ಹೆಸರಾದ ಜಿಲ್ಲೆ ನಮ್ಮದು. ಒಂದು ಹಟಕ್ಕಾಗಿ ಮನೆಮಾರು ಹಾಳು ಮಾಡಿಕೊಂಡು ದೇಶಾಂತರ ಹೋದವರಿಗೂ ನಮ್ಮಲ್ಲಿ ಕೊರತೆಯಿಲ್ಲ.

ಮತ್ತೆ ರುದ್ರಗೌಡ ಶಿರಾ ತರಿಸಿದ, ಪುರಿಪಲ್ಯಕ್ಕೆ ಹೇಳಿದ. ಅದನ್ನೆಲ್ಲ ತಿಂದು ಕಾಫಿ ಕುಡಿದು ಮತ್ತೊಂದು ಸಿಗರೇಟು ಹೊತ್ತಿಸಿದೆ.

" ನಿಮ್ಮ ಕೆಲಸ ಇಂದಿನಿಂದಲೇ ಸುರು ಆಗಲಿ. ನಿಮ್ಮ ಖರ್ಚಿಗಾಗಿ ಸ್ವಲ್ಪ ಹಣವನ್ನೂ ಕೊಟ್ಟಿರ್‍ತೀನಿ " ಎಂದು ಹೇಳಿ ಜೇಬಿನಿಂದ ನೂರು ರೂಪಾಯಿಗಳ ಒಂದು ನೋಟು ತೆಗೆದುಕೊಟ್ಟ ರುದ್ರಗೌಡ.

" ಇಷ್ಟೇ ಅಲ್ಲ, ನೀವು ಕೆಲಸ ಮಾಡುತಾ ಹೋದಂತೆ ಮತ್ತೆ ಕೊಡ್ತೀನಿ. ನೀವು ಇರೂದೆಲ್ಲಿ ? "

" ನರಕದಲ್ಲಿ ! " ಎಂದೆ ನಾನು, ಹುಚ್ಚು ಹುಚ್ಚಾಗಿ ನಗುತ್ತ.

" ಎಲ್ಲಾದರೂ ಇರಲೂಲ್ಲಿರೇಕೆ ? ಇಲ್ಲಿಗೆ ಬಂದಾಗಲೆಲ್ಲಾ ಇಳುಕೊಳ್ಳಲು ನಾನೊಂದು ಖೋಲಿ ಓಡಿದೀನಿ. ಇನ್ನುಮ್ಯಾಲಂತೂ ವಾರದಾಗ ಮೂರು ನಾಕು ದಿವಸ ಆದರೂ ಇಲ್ಲೇ ಇರಬೇಕಾಗ್ತದ. ನನ್ನ ಖೋಲಿಯ ಕಡೆ ಆಗಾಗ ಬರುತಾ ಇದ್ದರಾಯ್ತು. ಅಲ್ಲಿ ಸಿಗದಿದ್ದರ ಕಾಂಗ್ರೆಸ್ ಕಮಿಟಿಯೊಳಗಂತೂ ನಾ ಸಿಕ್ಕೇ ಸಿಗುತೀನಿ. ಅಲ್ಲೂ ಸಿಗದೆ ಇದ್ದರ ಊರಲ್ಲಿರುತೀನಿ. ಅರ್ಜಂಟ್ ಇದ್ದರ ಊರಿಗೇ ಬರಬಹುದಲ್ಲ..... "

" ಸರಿ. ಸರಿ. "

" ಹಂಗಾರ ನಾನಿನ್ನು ಹೋಗುತೀನಿ. ಟಿಕೇಟಿಗಾಗಿ ಅರ್ಜಿ ಹಾಕೂದದ. ಅದರ ಫಾರ್ಮ್ ತಗೋಬೇಕು. "

" ಫಾರ್ಮ್ ? ಇದೂ ಒಂದು ನೋಕರಿಯ ಅರ್ಜಿಯೇ ಆದಂತಾಯ್ತಲ್ಲರಿ ? "

" ಎಂ. ಎಲ್. ಎ. ಅಂದರ ಅದೂ ಒಂದು ನೋಕರೀನೇ ಅಲ್ಲಾ ? ಐದು ವರ್ಷದ ನೋಕರಿ ? ತಿಂಗಳಿಗೆ ಎರಡೂವರೆನೂರು ಸಂಬಳ, ಮ್ಯಾಲ ಭತ್ತೆ, ಅದೂ ಇದೂ...ಇದೂ ಒಂದು ಮಾಮಲೇದಾರಿಕೆ ಇದ್ದ ಹಂಗೇ. ಅದಕ್ಕಿಂತ ಹೆಚ್ಚು ಅಂದರೂ ಅಡ್ಡಿಯಿಲ್ಲ. ಅದಕ್ಕೇ ಇಷ್ಟು ಸ್ಪರ್ಧೆ... "

" ನಮ್ಮ ತಾಲೂಕಿನಿಂದ ಮತ್ಯಾರು ಅರ್ಜಿ ಹಾಕುತಾರ ? "

" ಯಾರ್ಯಾರೋ ಹಾಕುತಾರಂತ. ಇನ್ನೂ ಸರಿಯಾಗಿ ಗೊತ್ತಾಗಿಲ್ಲ ಇನ್ನೊಂದು ವಾರದೊಳಗಾಗಿ ಎಲ್ಲಾ ಮುಗೀತದ. ಆ ಮ್ಯಾಲ ತಿಳೀತದಲ್ಲ ತಾನೇ ? "

" ನಿಮ್ಮಂಥವರಿಗೆ ಟಿಕೀಟು ಸಿಕ್ಕರ ನನಗೆ ನಿಜವಾಗಿ ಸಂತೋಷ ಆಗ್ತ ದರೀ ಗೌಡರೆ. "

" ಆಗಲಿ. ನಿಮ್ಮಿಂದಾದಷ್ಟು ಸಹಾಯಮಾಡಿರಿ ಹಂಗಾರ, " ಎಂದು ಹೇಳಿ ರುದ್ರಗೌಡ ಹೊರಟುಹೋದ

ಸಿಗರೇಟು ಮುಗಿಯುವವರೆಗೂ ಚಹದಂಗಡಿಯಲ್ಲಿಯೆ ಕುಳಿತಿದ್ದು ಅನಂತರ ಹೊರಬಿದ್ದು ನೇರವಾಗಿ ಮರಿಯನ ಗಡಂಗಿಗೆ ಬಂದೆ. ಎರಡು ಕಪ್ ಸೆರೆ ಹೊಟ್ಟೆಗೆ ಸೇರುತ್ತಲೂ ಉತ್ಸಾಹ ಉಕ್ಕಿ ಬಂದಿತು. ಬಸೆಟ್ಟಿಯ ಘಾತಕ ತನದ ವಿವರಗಳನ್ನೆಲ್ಲ ಕಲೆಹಾಕಿ ಅವನನ್ನು ಮಣ್ಣುಗೂಡಿಸಬೇಕೆಂಬ ರೊಚ್ಚು ಕೆರಳಿತು.

ಅಲ್ಲಿಂದ ನಾನು ನಡೆದುದು ಖಾದೀಭಾಂಡಾರಕ್ಕೆ. ಒಂದು ವರ್ಷ ದಿಂದೀಚೆಗೆ ನಾನು ಅತ್ತ ಸುಳಿದಿರಲಿಲ್ಲ. ಈ ಅವಧಿಯಲ್ಲಿ ಆ ಅಂಗಡಿಯಲ್ಲಿ ಬಹಳ ಬದಲಾವಣೆಯಾಗಿದ್ದಂತೆ ಕಾಣಿಸಿತು. ನನ್ನ ಪರಿಚಯದ ಮುದುಕ ವ್ಯವಸ್ಥಾಪಕರು ಅಲ್ಲಿರಲಿಲ್ಲ. ಅವರ ಬದಲು ಯುವಕನೊಬ್ಬ ಹಣದ ಪೆಟ್ಟಿ ಗೆಯ ಬಳಿ ಕುಳಿತಿದ್ದ ಅಂಗಡಿಯಲ್ಲಿ ಥಳ ಥಳ ಹೊಳೆವ ಹೊಸ ಫರ್ನೀಚರು ಕಾಣುತ್ತಿತ್ತು. ದೇಶದ ಬೇರೆ ಬೇರೆ ಕಡೆಗಳಿಂದ ತರಿಸಿದಂತಿದ್ದ ಬಣ್ಣಬಣ್ಣದ ಖಾದೀ ಬಟ್ಟೆ ಗಿರಾಕಿಗಳನ್ನಾಕರ್ಷಿಸುತ್ತಿತ್ತು. ಬಟ್ಟೆ ಹರಿದುಕೊಡುವ ಹುಡುಗ ನೊಬ್ಬನಲ್ಲದೆ ಖಾದೀ ಸೀರೆ ರವಕೆ ಧರಿಸಿದ ಒಬ್ಬ ತರುಣಿಯೂ ಅವನೊಡನೆ ಕೆಲಸಕ್ಕಿದ್ದ ಹಾಗಿತ್ತು.

ಅಂಗಡಿಯಲ್ಲಿ ಗುರುತಿನವರಾರೂ ಇರಲಿಲ್ಲವಾದುದರಿಂದ ನನಗೆ ಕೊಂಚ ಸಂಕೋಚವೆನ್ನಿಸಿತು. ನನ್ನ ಬಾಯಿಯಿಂದ ಸೆರೆಯ ವಾಸನೆ ಬೇರೆ ಬರುತ್ತಿದ್ದಿ ತಲ್ಲ ?

" ರೆಡೀಮೇಡ್ ಬಟ್ಟೆಗಳು ಅವ ಅಲ್ಲಾ ? " ಎಂಬ ನನ್ನ ಪ್ರಶ್ನೆಗೆ ಆ ಯುವತಿಯೇ ಮುಂದಾಗಿ ಮರು ಪ್ರಶ್ನೆ ಮಾಡಿದಳು :

" ನಿಮಗೆ ಏನೇನು ಬೇಕು ? "

" ಪ್ಯಾಂಟು, ಬುಶ್‌ಶರ್ಟು, ನೆಹರು ಶರ್ಟು, ಪಾಯಿಜಮಾ... "

" ಇತ್ತ ಬರ್‍ರಿ. ತೋರಿಸ್ತೀನಿ, " ಎಂದಳು ಯುವತಿ.

ಸ್ವಾತಂತ್ರ್ಯ ಬಂದಂದಿನಿಂದೀಚೆಗೆ ನಮ್ಮ ಖಾದೀಭಾಂಡಾರಗಳಲ್ಲಿ ಬಹಳ ಸುಧಾರಣೆಗಳಾಗಿವೆ. ಹೊಲಿದು ಸಿದ್ಧಪಡಿಸಿದ ಉಡುಪುಗಳು ಸದಾಕಾಲವೂ ಸಿಗುವುದು ಆ ಸುಧಾರಣೆಗಳಲ್ಲೊಂದು. ಸಿಂಪಿಗನ ಕಾಟವಿಲ್ಲ; ಉಡುಪಿಗಾಗಿ ವಾರಗಳ ಕಾಲ ಕಾಯುವ ಅಗತ್ಯವಿಲ್ಲ. ಒಂದೇ ದಿನದಲ್ಲಿ ದೇಶಭಕ್ತರಾಗ ಬಯಸುವವರಿಗೆ ಇದರಿಂದ ತುಂಬಾ ಅನುಕೂಲವಾಗಿದೆ !

ಆದರೆ ನಾನೇನು ಇಂಥ ಅವಸರದ ' ದೇಶಭಕ್ತ 'ನಲ್ಲ. ಹತ್ತು ಹನ್ನೆರಡು ವರ್ಷಗಳಿಂದ ನಾನು ಖಾದಿಯನ್ನೇ ಧರಿಸುತ್ತಿದ್ದೆ. ವಿದ್ಯಾರ್ಥಿಯಾಗಿದ್ದಾಗಿನಿಂದಲೂ ನನಗೆ ಖಾದಿಯ ಬಗೆಗೆ ಪ್ರೀತಿಯಿತ್ತು. ಬನೆಟ್ಟಿಯಿಂದ ಏಟು ತಿಂದ ಮೇಲೆ ಕಾಂಗ್ರೆಸ್ಸಿಗರ ಬಗೆಗೆ ಆದರವುಳಿದಿಲ್ಲವಾದರೂ ಖಾದಿಯ ಮೇಲಿನ ಮೋಹವೇನೂ ಮಾಯವಾಗಿಲ್ಲ.

ನಾಲ್ಕು ಬುಶ್‌ಶರ್ಟು, ನಾಲ್ಕು ಪ್ಯಾಂಟು, ಎರಡು ನೆಹರುಶರ್ಟು, ಎರಡು ಪಾಯಿಜಾಮು, ನಾಲ್ಕು ಕರವಸ್ತ್ರ ಖರೀದಿ ಮಾಡಿದೆ. ರಾಧೆಗಾಗಿ ಒಂದು ರವಕೆಯನ್ನೂ ತೆಗೆದುಕೊಂಡೆ. ನಗುನಗುತ್ತ ನನ್ನನ್ನು ನೋಡುತ್ತ ಯುವತಿ ಕೇಳಿದಳು .

" ಟೊಪ್ಪಿಗೆಗಳು ಬೇಡವೇನು ? "

" ಬೇಡ. ಅವನ್ನ ಈಗಾಗಲೇ ಇನ್ನೊಬ್ಬರು ಹಾಕಿದಾರ ನನಗೆ ! " ಎಂದು ನಾನೂ ನಗುತ್ತಲೇ ಹೇಳಿ, ಹಣ ಕೊಟ್ಟು ಹೊರಗೆ ಬಂದೆ. ಸನಿಯದಲ್ಲಿಯೆ ಇದ್ದ ಸಲೂನಿಗೆ ಹೋಗಿ ಕ್ರಾಪು ಕತ್ತರಿಸಿಕೊಂಡು ಕೋಣೆಗೆ ಬಂದಾಗ ನನಗಾಗಿ ಕಾಯುತ್ತಿದ್ದ ರಾಧೆ ಕ್ಷೌರದಿಂದ ಅಂದಗೊಂಡಿದ್ದ ನನ್ನ ಮುಖವನ್ನೂ ಕೈಯಲ್ಲಿದ್ದ ಬಟ್ಟೆಗಳ ಕಟ್ಟನ್ನೂ ಕೌತುಕದಿಂದ ದಿಟ್ಟಿಸುತ್ತ ಕೇಳಿದಳು :

" ಏನೋ ಭಾರೀ ಖರೀದಿ ಮಾಡಿ ಬಂದಂಗ ಕಾಣ್ತದಲ್ಲ ? ಲಾಟರಿಗೀಟರಿ ಹತ್ತಿತೋ ಏನು ? "

" ಎಲ್ಲಿಯ ಲಾಟರಿಯೋ ರಾಧಾ ? ಚಹದಂಗಡಿಯೊಳಗ ಒಂದು ಪಾಕೀಟು ಸಿಕ್ಕಿತು. ಯಾರದೋ ಕಿಸೆಯಿಂದ ಜಾರಿ ಬಿದ್ದಿರಬೇಕು. ಅದರಾಗ ಇಪ್ಪತ್ತುಸಾವಿರ ರೂಪಾಯಿ ಇದ್ದವು. ಕಳಕೊಂಡವರು ತಿರುಗಿ ಬಂದು ಹುಡುಕಬಹುದು ಅಂತ ತಾಸೆರಡು ತಾಸು ಅಲ್ಲೇ ಕೂತಿದ್ದೆ. ಯಾರೂ ಬರಲಿಲ್ಲ. ಸರಿ. ಇಷ್ಟೊಂದು ಹಣವನ್ನ ಪೋಲೀಸ್ ಸೂಳೀಮಕ್ಕಳಿಗ್ಯಾಕೆ

ಕೊಡೂದಂತ ವಿಚಾರ ಮಾಡಿ ನಾನೇ ಇಟ್ಟುಕೊಂಡು ಬಿಟ್ಟೆ. ಯಾರ ಹಣ ಆದರೇನ್, ಅದು ಇರೂದು ಖರ್ಚಿಗಾಗಿ ಅಲ್ಲಾ ? "

" ಇಪ್ಪತ್ತು ಸಾವಿರ ಸಿಕ್ಕಿತೇ ? ದೊಡ್ಡ ಸುಳ್ಳು.... " ಎಂದಳು ಆ ತುಂಟಿ ನಗುತ್ತ.

" ಇಪ್ಪತ್ತುಸಾವಿರ ಸಿಕ್ಕಿರಬಹುದು, ಇಲ್ಲದಿದ್ದರ ಇಪ್ಪತ್ತೇ ಸಿಕ್ಕಿರಬಹುದು, ನನಗೇನು, ಎಲ್ಲಾ ಒಂದೇ!" ಎನ್ನುತ್ತ ಅವಳಿಗಾಗಿ ತಂದಿದ್ದ ಬಣ್ಣದ ಹೂಗಳ ಚಿತ್ರವಿದ್ದ ರವಕೆಯನ್ನು ಅವಳ ಕೈಗಿತ್ತೆ.

" ಅಯ್ಯೊ ! ನನಗೂ ಈ ಸುಡುಗಾಡು ಖಾದೀದೇ ತಂದಿರಾ ? ಎರಡು ಸಲ ನೀರಾಗೆ ಹಾಕಿದರಾತು, ಬಣ್ಣ ಎಲ್ಲಾ ಹೋಗಿ ಬಿಡ್ತದ. ಸೋಗಲಾಡಿ ದೇಶಭಕ್ತರಂಗೇ ಇದೂ. ಎಲ್ಲಾ ಮ್ಯಾಲ ಮ್ಯಾಲ ಥಳಕು "

" ಇರಲಿರಲಿ, ಅರಿವೆ ಏನ್ ಮಾಡೀತು ರಾಧಾ ? ಅದನ್ಯಾಕೆ ತಿರಸ್ಕರಿಸಬೇಕು ? ನಾನೆಷ್ಟೇ ಪತನ ಹೊಂದಿದರೂ ಈ ಖಾದಿಯನ್ನ ಮಾತ್ರ ಬಿಡಲಿಕ್ಕಾಗೂದಿಲ್ಲ ನೋಡು. "

" ಅದೂ ಒಂದು ಹುಚ್ಚು, " ಎಂದಳು ರಾಧೆ, ರವಕೆಯನ್ನು ಮೂಲೆಗೆಸೆಯುತ್ತ.

" ಏಳು ರಾಧೇ, ನೀರು ಕಾಸು, ಇವತ್ತು ಚೆನ್ನಾಗಿ ಜಳಕ ಮಾಡುತೀನಿ."

" ಜಳಕ ಮಾಡಿ ಹೊಸ ಡ್ರೆಸ್ ಹಾಕಿಕೊಂಡು ಎಲ್ಲಿಗೆ ಹೋಗಬೇಕಂತ ವಿಚಾರ ? ಯಾರ್ಯಾರೆ ಮಿನಿಸ್ಟರು ಬರುವವರಿದಾರೋ ಏನು ?"

" ಮಿನಿಸ್ಟರುಗಳಿಗೇನೇ ರಾಧಾ? ಮಿನಿಟಿಗೊಬ್ಬರು ಬರ್ತಾರ, ಹೋಗ್ತಾರ. ಅವರನ್ನ ಕೇಳುವವರೇ ಇಲ್ಲ. ನನ್ನಂಥವನು ಆ ಸೊಟ್ಟ ಮಿನಿಸ್ಟರನ್ನ ನೋಡಲಿಕ್ಕೆ ಹೋಗ್ತೇನೆಯೆ ? ನಾನೊಂದು ಮಹತ್ವದ ಕೆಲಸ ಸುರುಮಾಡೀನಿ. ಅದಕ್ಕಾಗಿ ಇದೆಲ್ಲಾ ತಯಾರಿ...."

" ಯಾರಿಗೂ ಸಂಶಯ ಬರದಂತೆ ಡ್ರೆಸ್ ಮಾಡಿಕೊಂಡು ಕಿಸೆ ಕತ್ತರಿಸಲಿಕ್ಕೆ ಹೊರಟಿರಬಹುದು !" ಎಂದು ರಾಧೆ ಚೇಷ್ಟೆ ಮಾಡಿದಳು

" ಕಿಸೆ ಕತ್ತರಿಸಲಿಕ್ಕಲ್ಲ....ದುಷ್ಟರನ್ನ ಕತ್ತರಿಸಲಿಕ್ಕೆ ! ಏಳು ರಾಧಾ, ನೀರು ಬೇಗೂ ಕಾಯಲಿ !"

ಆಜ್ಞಾಧಾರಕ ಸತಿಯಂತೆ ಅವಳು ಎದ್ದು ತನ್ನ ಮನೆಗೆ ಹೋಗಿ ನೀರು ಕಾಸಿದಳು.

ಸ್ನಾನ ಮಾಡಿ ಹೊಸ ಬುಶ್‌ಶರ್ಟು–ಪ್ಯಾಂಟು ಧರಿಸಿ, ಕ್ರಾಪ್ ಬಾಚಿಕೊಂಡು ನಾನು ಮತ್ತೆ ಹೊರ ಹೊರಟೆ. ಭೋಜನಾಲಯದಲ್ಲಿ ಊಟ ಮುಗಿಸಿಕೊಂಡು, ಸಿಗರೇಟು ಸೇದುತ್ತ ಮೆಲ್ಲನೆ ಕಾಂಗ್ರೆಸ್ ಕಾರ್ಯಾಲಯದತ್ತ ಹೆಜ್ಜೆ ಹಾಕಿದೆ. ಆಗಲೂ ನನ್ನ ಬಾಯಿಯಿಂದ ಸೆರೆಯ ವಾಸನೆ ಬರುತ್ತಿತ್ತೊ ಇಲ್ಲವೊ ತಿಳಿಯದು. ಕಾಂಗ್ರೆಸ್ ಕಾರ್ಯಾಲಯದಲ್ಲಿ ನನ್ನ ಕುಡಿತದ ಬಗೆಗೆ ಆಕ್ಷೇಪವೆತ್ತುವವರಿದ್ದರೆಂದೂ ಹೇಳಲಾರೆ, ಕಾಂಗ್ರೆಸ್ಸಿಗರು ಮದ್ಯಪಾನ ಮಾಡಿಯೆ ಮಾಡುತ್ತಾರೆ. ಸಾಮಾನ್ಯ ಕಾರ್ಯಕರ್ತರ ಮಾತಂತಿರಲಿ, ನಮ್ಮ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಮಲ್ಲಿಕಾರ್ಜುನಪ್ಪನೇ ಪಾನಪ್ರಿಯನಾಗಿದ್ದಾನೆ. ಇಂಥವನು ಅಧ್ಯಕ್ಷನಾದುದಾದರೂ ಹೇಗೆ ? ಎಂದು ಪ್ರಶ್ನಿಸುವ ಹಸುಳೆಗಳಿಗೂ ಕೊರತೆಯಿಲ್ಲ. ಕಾಂಗ್ರೆಸ್ ಕಾಜ್ಯದಲ್ಲಿ ಹಣವೊಂದು ಇದ್ದರಾಯಿತು, ಅಧ್ಯಕ್ಷನೂ ಆಗಬಹುದು, ಮಂತ್ರಿಯೂ ಆಗಬಹುದು, ರಾಜ್ಯಪಾಲನೂ ಆಗಬಹುದು. ಇಲ್ಲವಾದರೆ, ನಗರದ ಕಳ್ಳ ಸಂತೆಯ ವರ್ತಕರ ದೊರೆಯಂತಿರುವ ಮಲ್ಲಿಕಾರ್ಜುನಪ್ಪ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷಪಟ್ಟ ದೊರಕಿಸಲು ಸಾಧ್ಯವಾಗುತಿತ್ತೇ ?

ಕಾಂಗ್ರೆಸ್ ಕಾರ್ಯಾಲಯ ನನಗೇನು ಹೊಸದಾಗಿರಲಿಲ್ಲ. ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಿನಿಂದಲೂ ನಾನು ಅಲ್ಲಿಗೆ ಹೋಗಿಬರುತ್ತಿದ್ದುದಿತ್ತು. ಬಸೆಟ್ಟಿಯ ಶಿಷ್ಯನಾಗಿದ್ದ ಆ ಎರಡು ಮೂರು ವರ್ಷಗಳ ಅವಧಿಯಲ್ಲಿಯೂ ಅನೇಕ ಬಾರಿ ಆ ಕಚೇರಿಯ ಕಾರಕೂನ ಶರಭಣ್ಣನೂ ನನ್ನನ್ನು ಗುರುತಿಸುತ್ತಿದ್ದ.

ಆದರೆ ಆ ದಿನ ಕಚೇರಿಯಲ್ಲಿ ಕಾಲಿಡುವುದಕ್ಕೂ ಸ್ಥಳವಿರಲಿಲ್ಲ. ಹೊರಗಡೆಯ ಹಾಲಿನ ತುಂಬಾ ಬಿಳಿಯ ಟೋಪಿಗಳೇ ಕಾಣುತ್ತಿದ್ದುವು, ಅವುಗಳ ನಡುವೆ ಅಲ್ಲಲ್ಲಿ ಖಾದೀ ಸೀರೆಗಳೂ ಎದ್ದು ತೋರುತ್ತಿದ್ದುವು. ಕಾರಕೂನ ಶರಭಣ್ಣನ ಮೇಜಿನ ಸುತ್ತಲೂ ಟೋಪೀಧಾರಿಗಳು ನೊಣಗಳಂತೆ ಮುತ್ತಿಕೊಂಡಿದ್ದರು. ಅಲ್ಲಿಯೇ ಇದ್ದ ಒಂದು ಕುರ್ಚಿಯಲ್ಲಿ ರುದ್ರಗೌಡ ಗಾಂಭೀರ್ಯದಿಂದ ಕುಳಿತುಕೊಂಡು ಪಕ್ಕದಲ್ಲಿದ್ದವರೊಡನೆ ಮಾತನಾಡುತ್ತಿದ್ದ. ಬಾಗಿಲಿನ

ಬಳಿ ನಿಂತು, ಅಲ್ಲಿ ನಡೆದಿದ್ದ ತಮಾಷೆಯನ್ನು ನಿರೀಕ್ಷಿಸುತ್ತಿದ್ದ ನಾನು ರುದ್ರ ಗೌಡನ ದೃಷ್ಟಿಗೆ ಬೀಳುವುದು ಶಕ್ಯವಿರಲಿಲ್ಲ.

ನನ್ನ ಹತ್ತಿರವೇ ನಿಂತುಕೊಂಡಿದ್ದ, ನೆಹರುಶರ್ಟು-ಜಾಕೀಟು-ಟೋಪೀ ಧಾರಿ ಕಾರ್ಯಕರ್ತನನ್ನು ನಾನು ಕೇಳಿದೆ "ಏನು ಗದ್ದಲರೀ ಇದು? ಅರ್ಜಿಯು ದೇನು?"

ಆ ಟೋಪೀಧಾರಿ ನನ್ನ ಕಡೆ ತಿರುಗಿ, ನನ್ನ ಖಾದೀಬಟ್ಟೆ ಕಂಡು ಸಮಾ ಧಾನಪಟ್ಟುಕೊಂಡು, ನಾನೂ ಅವರ ಪಕ್ಷಕ್ಕೆ ಸೇರಿದವನೇ ಎಂದು ಖಚಿತ ಪಡಿಸಿಕೊಂಡು ನಿಧಾನವಾಗಿ ಉತ್ತರವಿತ್ತ :

"ಹೌದ್ರಿ ಅರ್ಜಿಫಾರ್ಮುಗಳನ್ನ ಕೊಡ್ತಾ ಇದಾರ, ನೀವೂ ಅರ್ಜಿ ಮಾಡುವವರೋ ಏನು? ಯಾವ ತಾಲೂಕಿನವರು?"

ಆ ಪ್ರಶ್ನೆಗೆ ನೇರವಾದ ಉತ್ತರವೀಯದೆ ನಾನು ಮುಗುಳುನಗೆ ಬೀರಿ ಮಾತನಾಡಿದೆ :

"ನಾನೇನು ಅದಕ್ಕಾಗಿ ಬಂದಿಲ್ಲರಿ ಸುಮ್ಮನೆ ನೋಡಿ ಹೋಗೋಣಂತ ಬಂದೆ."

ಎದುರಿನ ಗದ್ದಲ ಕೊಂಚ ಕಡಿಮೆಯಾಗಲು ಆತ ಹಾದಿ ಮಾಡಿಕೊಂಡು ಮುಂದೆ ಸರಿದ ಅಷ್ಟರಲ್ಲಿ ಒಳಗಿನ ಕೋಣೆಯಿಂದ ಅಪ್-ಟು-ಡೇಟ್ ಯುವತಿ ಯೊಬ್ಬಳು ಹೊರಗೆ ಬಂದಳು. ಅವಳು ಮೈಸೂರು ರೇಶಿಮೆಯ ಸೀರೆಯುಟ್ಟು ಗುಲಾಬಿ ಬಣ್ಣದ ಖಾದೀರವಕೆ ತೊಟ್ಟಿದ್ದಳು. ತೆಳ್ಳನೆಯ ಮಾಟವಾದ ದೇಹಾಕೃತಿ, ಸಾದುಗಪ್ಪು ಬಣ್ಣದ್ದಾದರೂ ಆಕರ್ಷಣೀಯವಾಗಿದ್ದ ಮುಖ, ತುಟಿಗಳ ಮೇಲೆ ಸದಾ ನರ್ತಿಸುವ ಮುಗುಳುನಗೆ, ಎಡಗಡೆ ಬೈತಲೆ ತೆಗೆದು ಬಾಚಿದ ತಲೆಗೂದಲು, ಹಿಂಭಾಗದಲ್ಲಿ ತೆಂಗಿನಕಾಯಿಯಷ್ಟು ದೊಡ್ಡದಾಗಿದ್ದ ತುರುಬು, ಅದರ ಮೇಲೊಂದು ಗುಲಾಬಿ ಹೂ. ಮಾದಾಪುರದ ಪ್ರಖ್ಯಾತ ಸಾಮಾಜಿಕ ಕಾರ್ಯಕರ್ತೆಯೂ, ಜಿಲ್ಲಾ ಕಾಂಗ್ರೆಸ್ ಕಾರ್ಯಸಮಿತಿಯ ಸದಸ್ಯಳೂ ಆಗಿದ್ದ ಆ ತರುಣಿಯೊಡನೆ ನನಗೆ ಪರಿಚಯವಿರಲಿಲ್ಲವಾದರೂ ಅವಳನ್ನು ಅನೇಕ ಬಾರಿ ನೋಡಿದ್ದೆ. ಅವಳ ಹೆಸರು ಏನೋ ಇತ್ತು. ಹಾಳಾದ್ದು ಮರೆತು ಹೋಗಿತ್ತು.

ಅವಳು ಹಾಲಿಗೆ ಬರುತ್ತಲೂ ನೂರು ಬಯಕೆಯ ಕಣ್ಣುಗಳು ಅವಳತ್ತ ತಿರುಗಿದುವು. ರಾಣಿಯೊಬ್ಬಳಿಗೆ ದಾರಿ ಮಾಡಿಕೊಡುವಂತೆ ಕಾಂಗ್ರೆಸ್ಸಿಗರು ಅವಳಿಗೆ ದಾರಿ ಮಾಡಿಕೊಟ್ಟರು. ಕಾರಕೂನ ಶರಭಣ್ಣನೂ ನಗುತ್ತಲೇ ಕುರ್ಚಿಯಿಂದೆದ್ದು— "ಬರ್ರಿಬರ್ರಿ ಮಾಲಾದೇವಿಯವರೆ, ನಿಮಗೂ ಫಾರ್ಮ್ ಬೇಕಲ್ಲ ?" ಎಂದು ಕೇಳಿದ.

ಸುತ್ತಲೂ ನಿಂತ ಟೋಪೀಧಾರಿಗಳ ಮೇಲೆಲ್ಲ ಕುಡಿನೋಟ ಬೀರುತ್ತ ಕುಲುಕುಲು ನಗುತ್ತ ಮಾಲಾ ಕುರ್ಚಿಯಲ್ಲಿ ಕುಳಿತಳು,

"ನನಗೆ ಮಾತ್ರ ಫಾರ್ಮ್ ಕೊಡಬಾರದಂತ ಮಾಡೀರೇನ್ರೀ ಶರಭಣ್ಣ?"

"ಅಯ್ಯೋ! ನಿಮಗೆ ಕೊಡದೇ ಇನ್ನಾರಿಗೆ ಕೊಡೋದ್ರೀ ಮಾಲಾದೇವೀ! ಇಕೋ ತಗೊಳ್ರಿ ಫಾರ್ಮ್. ಇಲ್ಲಿ ಸಹಿ ಹಾಕ್ರಿ, ಒಂದು ರೂಪಾಯಿ ಮಾತ್ರ ಕೊಡಬೇಕು ನೋಡ್ರಿ. ಒಂದೇ ಸಾಕೋ ? ಇನ್ನೊಂದು ಬೇಕೋ ?"

"ಏನು ?"

"ಅರ್ಜಿ ಫಾರ್ಮ್. ಒಂದು ಕಾಪಿ ಪ್ರಾಂತಿಕ ಕಮಿಟಿಗೆ, ಇನ್ನೊಂದು ಜಿಲ್ಲಾ ಕಮಿಟಿಗೆ. ಮತ್ತೊಂದನ್ನ ನಿಮ್ಮ ಹತ್ತರ ಇಟ್ಟುಕೊಂಡಿದ್ದರೂ ಉತ್ತಮ."

"ಅಂದರೆ ? ಮೂರು ಕಾಪಿ ಬೇಕು ಅನ್ನಿರಿ."

"ನೀವು ಇಲ್ಲಿ ತಗೊಂಡರೂ ನಡೀತದ. ಅಥವಾ ಒಂದೇ ಕಾಪಿ ತಗೊಂಡು ಅದರಿಂದ ಬೇರೆ ಕಾಪಿ ತಯಾರಿಸಿಕೋಬಹುದು."

ಎರಡು ರೂಪಾಯಿ ತೆತ್ತು ಎರಡು ಪ್ರತಿ ತೆಗೆದುಕೊಂಡಳು ಮಾಲಾ. ರವಕೆಯ ಮೇಲ್ಭಾಗದಿಂದ ಪೆನ್ ತೆಗೆದು ಸಹಿ ಹಾಕಿದಳು. ಅನಂತರ ಫಾರ್ಮನ್ನು ಓದಿನೋಡುತ್ತ—

"ಶಿಫಾರಸಿಗೆ ಯಾರ ಸಹಿ ಮಾಡಿಸಬೇಕ್ರೀ ?" ಎಂದು ಕೇಳಿದಳು.

"ಜಿಲ್ಲಾ ಕಾಂಗ್ರೆಸ್ ಕಮಿಟಿಯ ಐದು ಸದಸ್ಯರು ಅಥವಾ ಹತ್ತುಮಂದಿ ಸಕ್ರಿಯ ಸದಸ್ಯರ ಸಹಿ ಮಾಡಿಸಿದರಾಯ್ತು, ನಿಮಗೇನ್ರಿ ಅದರ ಚಿಂತೆ ? ನೂರುಮಂದಿ ನಗುನಗುತಾ ಸಹಿ ಮಾಡಿಯಾರು!"

"ತರ್ರಿ ಬೇಕಾದರ, ಇಲ್ಲೇ ಮಾಡಿಸಿಕೊಡುತೇನಿ," ಎಂದು ಹೇಳುತ್ತ

ಯುವಕನೊಬ್ಬ ಮುಂದೆ ಬಂದ. ಅವನನ್ನು ದೃಷ್ಟಿಯಿಂದಲೇ ದೂರವಿರಿಸಿ ಮಾಲಾ ಹೇಳಿದಳು:

"ಅದರದೆಲ್ಲಾ ಏನವಸರ ? ಮೊದಲು ಫಾರ್ಮು ತುಂಬಬೇಕಲ್ಲ ? ನಾವು ಮಾಡಿದ ಕೆಲಸಗಳ ವಿವರ ಪೂರೈಸಬೇಕಂತಲ್ಲ ? "

"ಸೋಶಿಯೆಲ್ ಕ್ಲಬ್, ಮಹಿಲಾ ಮಂಡಲ, ಕಲಾಸಂಘ, ನಾಟಕಸಂಘ. ಸಂಗೀತ ಸಂಘ, ಸಾಹಿತ್ಯ ಸಂಘ, ಶಿಶುವಿಹಾರ, ಕಾಂಗ್ರೆಸ್ ಸಂಘಟನೆ—ಒಂದೇ ಎರಡೇ ! ನೂರಾರು ಚಟುವಟಿಕೆ ನಿಮ್ಮವು ಮಾಲಾದೇವಿ. ಇನ್ನು ಮೇಲೆ ಎಂ. ಎಲ್ ಎ. ಯೂ ಆಗತಕ್ಕವರು ! " ಎಂದ ಆ ಯುವಕ, ಅವಳನ್ನು ಉಬ್ಬಿಸುತ್ತ.

"ಟಿಕೀಟಾದರೂ ಸಿಗಬೇಕಲ್ರೀ ಮೊದಲು ? ಹಾಲಿಲ್ಲ ಬಟ್ಟಲಿಲ್ಲ, ಗುಟುಕ್ ಅಂದರಂತೆ ! ನೀವೊಬ್ಬರು !" ಎನ್ನುತ್ತ ಕಿಸಕ್ಕನೆ ನಕ್ಕಳು ಮಾಲಾ.

"ನಿಮ್ಮಂಥ ಯೋಗ್ಯ ಮಹಿಳೆಗೆ ಟಿಕೀಟು ಕೊಡದೆ ಇನ್ನೆಂಥವರಿಗೆ ಕೊಡ್ತಾರ್ರೀ ? ಕಳೆದ ವರ್ಷ ಸದಾಸ್ಮಿತಪ್ಪನವರು ಬಂದಿದ್ದಾಗ ನೀವು ಆಭಾರ ಮನ್ನಣೆಯ ಭಾಷಣ ಮಾಡಿದ್ದು ಕೇಳಿ ಅವರು ಮೆಚ್ಚಿಕೊಂಡರಂತೆ.... "

"ಹೌದು. ನನ್ನ ಎದುರೂ ಹೇಳಿದರು ಮೊನ್ನೆ – ಬೆಂಗಳೂರಿಗೆ ಹೋಗಿದ್ದಾಗ. ಜಿಲ್ಲೆಯಲ್ಲಿ ಯಾರ್ಯಾರು ಅರ್ಜಿ ಹಾಕಬಹುದೆಂಬ ಬಗ್ಗೆ ಹರಟೆ ನಡೆದಿತ್ತು. ಮಾಲಾದೇವಿಯವರೂ ಹಾಕಬಹುದು ಅಂತ ನಾನಂದೆ. ಓ, ಅವರೇ ! ಸೊಗಸಾಗಿ ಭಾಷಣ ಮಾಡ್ತಾರೆ ಅಂತ ಸದಾಸ್ಮಿತಪ್ಪನವರಂದರು," ಎಂದು ಇನ್ನೊಬ್ಬ ರಸಿಕ ಕಾರ್ಯ ಕರ್ತಹೇಳಿದ.

ಸದಾಸ್ಮಿತಪ್ಪನವರು ಹಾಗೆ ಹೇಳಿದ್ದರೊ ಇಲ್ಲವೊ ದೇವರೇ ಬಲ್ಲ ! ಈ ದೇವಿಯ ನೆನಪಾದರೂ ಅವರಿಗಿದ್ದಿತೊ ಇಲ್ಲವೊ. ಹತ್ತೊಂಭತ್ತು ಜಿಲ್ಲೆಗಳಲ್ಲಿನ ಸಾವಿರಾರು ಕಾರ್ಯಕರ್ತರನ್ನು ಅವರು ನೋಡಿರುತ್ತಾರೆ. ಅವರೊಡನೆ ನಿಕಟ ಸಂಬಂಧವಿರುವ ಕೆಲವೇ ಜನರನ್ನು ಮಾತ್ರ ಥಟ್ಟನೆ ಗುರುತಿಸಲು ಸಾಧ್ಯವಾದೀತು. ಇಂಥ ದೇವಿಯರೆಷ್ಟು ಜನರೊ ಕರ್ನಾಟಕದಲ್ಲಿ ! ನಿಜವಾಗಿ ಸದಾಸ್ಮಿತಪ್ಪನವರಿಗೆ ಈಕೆಯ ನೆನವೂ ಇರಲಾರದು. ಆದರೂ, ಈ ದೇವಿಯನ್ನು ಪ್ರಶಂಸಿಸಿ ಆಕೆಯ ಕೃಪಾಕಟಾಕ್ಷಕ್ಕೆ ಪಾತ್ರರಾಗಲು ಈ ಬಿಳಿಯಟೋಪಿಗಳು ಅಪ್ಪಟ ಸುಳ್ಳು ಹೇಳಲೂ ಹಿಂಜರಿಯುತ್ತಿಲ್ಲ. ಮತ್ತೆ ಇವರೆಲ್ಲ ಸತ್ಯದ

ಅವಳು ಹಾಲಿಗೆ ಬರುತ್ತಲೂ ನೂರು ಬಯಕೆಯ ಕಣ್ಣುಗಳು ಅವಳತ್ತ ತಿರುಗಿದುವು. ರಾಣಿಯೊಬ್ಬಳಿಗೆ ದಾರಿ ಮಾಡಿಕೊಡುವಂತೆ ಕಾಂಗ್ರೆಸ್ಸಿಗರು ಅವಳಿಗೆ ದಾರಿ ಮಾಡಿಕೊಟ್ಟರು. ಕಾರಕೂನ ಶರಭಣ್ಣನೂ ನಗುತ್ತಲೇ ಕುರ್ಚಿಯಿಂದೆದ್ದು— "ಬರ್ರಿಬರ್ರಿ ಮಾಲಾದೇವಿಯವರೆ, ನಿಮಗೂ ಫಾರ್ಮ್ ಬೇಕಲ್ಲ ? " ಎಂದು ಕೇಳಿದ.

ಸುತ್ತಲೂ ನಿಂತ ಟೋಪೀಧಾರಿಗಳ ಮೇಲೆಲ್ಲ ಕುಡಿನೋಟ ಬೀರುತ್ತ ಕುಲುಕುಲು ನಗುತ್ತ ಮಾಲಾ ಕುರ್ಚಿಯಲ್ಲಿ ಕುಳಿತಳು,

"ನನಗೆ ಮಾತ್ರ ಫಾರ್ಮ್ ಕೊಡಬಾರದಂತ ಮಾಡೀರೇನ್ರೀ ಶರಭಣ್ಣ ?"

"ಅಯ್ಯೋ ! ನಿಮಗೆ ಕೊಡದೇ ಇನ್ನಾರಿಗೆ ಕೊಡೋದ್ರೀ ಮಾಲಾ ದೇವೀ ! ಇಕೋ ತಗೊಳ್ರಿ ಫಾರ್ಮ್. ಇಲ್ಲಿ ಸಹಿ ಹಾಕ್ರಿ, ಒಂದು ರೂಪಾಯಿ ಮಾತ್ರ ಕೊಡಬೇಕು ನೋಡ್ರಿ. ಒಂದೇ ಸಾಕೋ ? ಇನ್ನೊಂದು ಬೇಕೋ ?"

"ಏನು ?"

"ಆರ್ಜಿ ಫಾರ್ಮು. ಒಂದು ಕಾಪಿ ಪ್ರಾಂತಿಕ ಕಮಿಟಿಗೆ, ಇನ್ನೊಂದು ಜಿಲ್ಲಾ ಕಮಿಟಿಗೆ. ಮತ್ತೊಂದನ್ನ ನಿಮ್ಮ ಹತ್ತರ ಇಟ್ಟುಕೊಂಡಿದ್ದರೂ ಉತ್ತಮ."

"ಅಂದರೆ ? ಮೂರು ಕಾಪಿ ಬೇಕು ಅನ್ನಿರಿ."

"ನೀವು ಇಲ್ಲಿ ತಗೊಂಡರೂ ನಡೀತದ. ಅಥವಾ ಒಂದೇ ಕಾಪಿ ತಗೊಂಡು ಅದರಿಂದ ಬೇರೆ ಕಾಪಿ ತಯಾರಿಸಿಕೋಬಹುದು."

ಎರಡು ರೂಪಾಯಿ ತೆತ್ತು, ಎರಡು ಪ್ರತಿ ತೆಗೆದುಕೊಂಡಳು ಮಾಲಾ. ರವಕೆಯ ಮೇಲ್ಭಾಗದಿಂದ ಪೆನ್ ತೆಗೆದು ಸಹಿ ಹಾಕಿದಳು. ಅನಂತರ ಫಾರ್ಮನ್ನು ಓದಿನೋಡುತ್ತ—

"ಶಿಫಾರಸಿಗೆ ಯಾರ ಸಹಿ ಮಾಡಿಸಬೇಕ್ರೀ ?" ಎಂದು ಕೇಳಿದಳು.

"ಜಿಲ್ಲಾ ಕಾಂಗ್ರೆಸ್ ಕಮಿಟಿಯ ಐದು ಸದಸ್ಯರು ಅಥವಾ ಹತ್ತುಮಂದಿ ಸಕ್ರಿಯ ಸದಸ್ಯರ ಸಹಿ ಮಾಡಿಸಿದರಾಯ್ತು, ನಿಮಗೇನ್ರಿ ಅದರ ಚಿಂತೆ ? ನೂರುಮಂದಿ ನಗುನಗುತಾ ಸಹಿ ಮಾಡಿಯಾರು !"

"ತರ್ರಿ ಬೇಕಾದರ, ಇಲ್ಲೇ ಮಾಡಿಸಿಕೊಡುತೇನಿ," ಎಂದು ಹೇಳುತ್ತ

ಯುವಕನೊಬ್ಬ ಮುಂದೆ ಬಂದ. ಅವನನ್ನು ದೃಷ್ಟಿಯಿಂದಲೇ ದೂರವಿರಿಸಿ ಮಾಲಾ ಹೇಳಿದಳು :

" ಅದರದೆಲ್ಲಾ ಏನವಸರ ? ಮೊದಲು ಫಾರ್ಮು ತುಂಬಬೇಕಲ್ಲ ? ನಾವು ಮಾಡಿದ ಕೆಲಸಗಳ ವಿವರ ಪೂರೈಸಬೇಕಂತಲ್ಲ ? "

" ಸೋಶಿಯೆಲ್ ಕ್ಲಬ್, ಮಹಿಲಾ ಮಂಡಲ, ಕಲಾಸಂಘ, ನಾಟಕಸಂಘ, ಸಂಗೀತ ಸಂಘ, ಸಾಹಿತ್ಯ ಸಂಘ, ಶಿಶುವಿಹಾರ, ಕಾಂಗ್ರೆಸ್ ಸಂಘಟನೆ—ಒಂದೇ ಎರಡೇ ! ನೂರಾರು ಚಟುವಟಿಕೆ ನಿಮ್ಮವು ಮಾಲಾದೇವಿ. ಇನ್ನು ಮೇಲೆ ಎಂ. ಎಲ್. ಎ. ಯೂ ಆಗತಕ್ಕವರು ! " ಎಂದ ಆ ಯುವಕ, ಅವಳನ್ನು ಉಬ್ಬಿಸುತ್ತ.

" ಟಿಕೀಟಾದರೂ ಸಿಗಬೇಕಲ್ರೀ ಮೊದಲು ? ಹಾಲಿಲ್ಲ ಬಟ್ಟಲಿಲ್ಲ, ಗುಟುಕ್ ಅಂದರಂತೆ ! ನೀವೊಬ್ಬರು !" ಎನ್ನುತ್ತ ಕಿಸಕ್ಕನೆ ನಕ್ಕಳು ಮಾಲಾ.

" ನಿಮ್ಮಂಥ ಯೋಗ್ಯ ಮಹಿಳೆಗೆ ಟಿಕೀಟು ಕೊಡದೆ ಇನ್ನೆಂಥವರಿಗೆ ಕೊಡ್ತಾರ್ರೀ ? ಕಳೆದ ವರ್ಷ ಸದಾಸ್ಮಿತಪ್ಪನವರು ಬಂದಿದ್ದಾಗ ನೀವು ಆಭಾರ ಮನ್ನಣೆಯ ಭಾಷಣ ಮಾಡಿದ್ದು ಕೇಳಿ ಅವರು ಮೆಚ್ಚಿಕೊಂಡರಂತೆ.... "

" ಹೌದು. ನನ್ನ ಎದುರೂ ಹೇಳಿದರು ಮೊನ್ನೆ – ಬೆಂಗಳೂರಿಗೆ ಹೋಗಿದ್ದಾಗ. ಜಿಲ್ಲೆಯಲ್ಲಿ ಯಾರ್ಯಾರು ಅರ್ಜಿ ಹಾಕಬಹುದೆಂಬ ಬಗ್ಗೆ ಹರಟೆ ನಡೆದಿತ್ತು. ಮಾಲಾದೇವಿಯವರೂ ಹಾಕಬಹುದು ಅಂತ ನಾನಂದೆ. ಓ, ಅವರೇ ! ಸೊಗಸಾಗಿ ಭಾಷಣ ಮಾಡ್ತಾರೆ ಅಂತ ಸದಾಸ್ಮಿತಪ್ಪನವರಂದರು," ಎಂದು ಇನ್ನೊಬ್ಬ ರಸಿಕ ಕಾರ್ಯ ಕರ್ತಹೇಳಿದ.

ಸದಾಸ್ಮಿತಪ್ಪನವರು ಹಾಗೆ ಹೇಳಿದ್ದರೊ ಇಲ್ಲವೊ ದೇವರೇ ಬಲ್ಲ ! ಈ ದೇವಿಯ ನೆನಪಾದರೂ ಅವರಿಗಿದ್ದಿತೊ ಇಲ್ಲವೊ. ಹತ್ತೊಂಭತ್ತು ಜಿಲ್ಲೆಗಳಲ್ಲಿನ ಸಾವಿರಾರು ಕಾರ್ಯಕರ್ತರನ್ನು ಅವರು ನೋಡಿರುತ್ತಾರೆ. ಅವರೊಡನೆ ನಿಕಟ ಸಂಬಂಧವಿರುವ ಕೆಲವೇ ಜನರನ್ನು ಮಾತ್ರ ಧಟ್ಟನೆ ಗುರುತಿಸಲು ಸಾಧ್ಯವಾದೀತು. ಇಂಥ ದೇವಿಯರೆಷ್ಟು ಜನರೊ ಕರ್ನಾಟಕದಲ್ಲಿ ! ನಿಜವಾಗಿ ಸದಾಸ್ಮಿತಪ್ಪನವರಿಗೆ ಈಕೆಯ ನೆನವೂ ಇರಲಾರದು. ಆದರೂ, ಈ ದೇವಿಯನ್ನು ಪ್ರಶಂಸಿಸಿ ಆಕೆಯ ಕೃಪಾಕಟಾಕ್ಷಕ್ಕೆ ಪಾತ್ರರಾಗಲು ಈ ಬಿಳಿಯಟೋಪಿಗಳು ಅಪ್ಪಟ ಸುಳ್ಳು ಹೇಳಲೂ ಹಿಂಜರಿಯುತ್ತಿಲ್ಲ. ಮತ್ತೆ ಇವರೆಲ್ಲ ಸತ್ಯದ

ಆರಾಧಕರು ! ಸತ್ಯದ ಪ್ರವಾದಿ ಗಾಂಧೀಜೀಯ ಭಕ್ತರು ! ಡಾಂಭಿಕತನವೆ ! ಏನು ನಿನ್ನ ಲೀಲೆ ! ಎಂದು ಮನಸ್ಸಿನಲ್ಲಿಯೆ ಅಂದುಕೊಳ್ಳುತ್ತ ನಾನು ಅಲ್ಲಿಂದ ಹೊರಟು ಬಿಡುವ ವಿಚಾರದಲ್ಲಿದ್ದಾಗಲೆ ಒಳಗಿನ ಕೋಣೆಯಿಂದ ಬಂದ ಮಲ್ಲಿಕಾರ್ಜುನಪ್ಪ ಮಾಲಾದೇವಿಯತ್ತ ದೃಷ್ಟಿ ಹೊರಳಿಸಿ ಏನೋ ಸಂಜ್ಞೆ ಮಾಡಿದ. ಜಂಬದ ಚೀಲದಲ್ಲಿ ಫಾರ್ಮು ಹಾಕಿ ಅವಳೂ ಒಯ್ಯಾರದಿಂದ ಎದ್ದು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷನನ್ನು ಹಿಂಬಾಲಿಸಿಕೊಂಡು ನಡೆದಳು. ನಿಜ ವಾಗಿಯೂ ಆ ಜೋಡಿ ಯಾರಿಗಾದರೂ ಅಸೂಯೆ ಹುಟ್ಟಿಸುವಂತಿತ್ತು. ಮಲ್ಲಿಕಾರ್ಜುನಪ್ಪನೂ ಅಂದು ರೇಶಿಮೆಯ ನೆಹರುಶರ್ಟು ತೊಟ್ಟು ಅದೇ ತಾನೆ ಅಗಸನಿಂದ ಬಂದ ಶುಭ್ರವಾದ ದೋತರ ಉಟ್ಟುಕೊಂಡಿದ್ದ. ಕೊರಳಿ ನಲ್ಲಿ ಒಂದೆಳೆಯ ಬಂಗಾರದ ಸರಪಳಿ. ಕೈಯಲ್ಲಿಯೂ ಬಂಗಾರದ ಪಟ್ಟಿಯ ಗಡಿಯಾರ. ಜವಾಹರಲಾಲರ ರೀವಿಯನ್ನೂ ಮೀರಿಸುವಂತೆ ಓರೆಯಾಗಿರಿಸಿ ಕೊಂಡ ಗಾಂಧೀಟೋಪಿ. ಕೈಯಲ್ಲೊಂದು ಚರ್ಮದ ಚೀಲ. ಕಾಲುಗಳಲ್ಲಿ ಹೊಳೆಹೊಳೆವ ಪಂಪ್ ಶೂ.

ಮಲ್ಲಿಕಾರ್ಜುನಪ್ಪ ಮಾಲಾದೇವಿ ಬಾಗಿಲಿನಾಚೆ ಮರೆಯಾಗುತ್ತಲೂ ಹಾಲಿನಲ್ಲಿ ನಿಂತುಕೊಂಡಿದ್ದ ಜನರಲ್ಲಿ ಕೆಲವರು ನಕ್ಕರು. ಕೆಲವರು ಗುಜು ಗುಜುಮಾತನಾಡಿಕೊಂಡರು. ನಾನು ಹೊರಗೆ ಬಂದು ನೋಡಿದಾಗ ಮಾಲಾ ದೇವಿ ಮಲ್ಲಿಕಾರ್ಜುನಪ್ಪನ ಕಾರಿನಲ್ಲಿ ಅವನಿಗಂಟಿಕೊಂಡಂತೆಯೇ ಕುಂಡಿಸಿ ದ್ದುದು ಕಾಣಿಸಿತು. ರಸ್ತೆಯಲ್ಲಿ ಹೋಗಿ ಬರುತ್ತಿದ್ದ ಜನರೂ ಆ ಜೊತೆ ಯನ್ನು ನೋಡಿ ತುಟಿಗಳಲ್ಲಿಯೆ ನಗುತ್ತಿದ್ದರು. ಮಲ್ಲಿಕಾರ್ಜುನಪ್ಪ – ಮಾಲಾ ದೇವಿಯವರಿಗೆ ಮಾತ್ರ ಯಾವುದರ ಪರವೆಯೂ ಇರಲಿಲ್ಲ. ಪರಸ್ಪರರ ಸಹ ವಾಸದಲ್ಲಿ ಅವರು ಬಾಹ್ಯಲೋಕವನ್ನೇ ಮರೆತ ಹಾಗಿತ್ತು.

ನನ್ನಂತೆಯೇ ಅವರನ್ನು ನೋಡುತ್ತ ನಿಂತಿದ್ದ ಕಾಂಗ್ರೆಸ್ ಕಾರ್ಯಕರ್ತ ನೊಬ್ಬ ನನ್ನ ಬಳಿ ಬಂದು, ನನ್ನ ಗುರುತು ಹಿಡಿದು ತಾನಾಗಿಯೆ ಮಾತನಾ ಡಿಸಿದ :

" ಏನ್ರಿ ಸದಾಶಿವಪ್ಪ, ನೀವೂ ಬಂದೀರಲ್ಲ ? "

" ಯಾಕೆ ? ಬರಬಾರದೇನು ? "

" ಹೆ ಹೆ ಹೆ ! ಹಂಗಲ್ಲ....ಹಂಗಲ್ಲ....ಇಷ್ಟು ದಿವಸ ಇಲ್ಲಿ ಕಾಣಿಸದಿದ್ದ

ವರು ಇಂದೇ ಬಂದೀರಿ ಅಂತ ಕೇಳಿದಿ. ...ನಿಮ್ಮದೂ ಏನಾರ ವಿಚಾರ ಅದನೋ ಏನೋ ಅಂತ ... "

ಅವನೂ ನಮ್ಮ ತಾಲೂಕಿನವನೇ. ಮುದ್ದಪ್ಪ ಅಂತ ಹೆಸರು. ಯಾವುದೋ ಮಂಡಲ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನೋ ಕಾರ್ಯದರ್ಶಿಯೋ ಇನ್ನೇನೋ ಆಗಿದ್ದ. ನನಗೆ ಸರಿಯಾಗಿ ನೆನಪಿರಲಿಲ್ಲ. ಮಾದಾಪುರಕ್ಕೆ ಬಂದಾಗ ಲೆಲ್ಲ ಮುದ್ದಪ್ಪ ಕಾಂಗ್ರೆಸ್ ಕಚೇರಿಯಲ್ಲಿಯೆ ವಸತಿ ಮಾಡುತ್ತಿದ್ದ. ಸಹ ಕಾರೀ ಸಂಘದ ಕೆಲಸಕ್ಕೆಂದು ನಗರಕ್ಕೆ ಬಂದಾಗ ನಾನೂ ಒಂದೊಂದು ಬಾರಿ ಅಲ್ಲಿಯೆ ಇರುಳು ಕಳೆಯುತ್ತಿದ್ದುದಿತ್ತು. ಅಂಥದೊಂದು ಸಂದರ್ಭದಲ್ಲಿ ಮುದ್ದಪ್ಪನ ಪರಿಚಯುವಾಗಿತ್ತು. ಮತ್ತೆ ಆತ ಎಲ್ಲಿಯಾದರೂ ಭೆಟ್ಟಿಯಾದಾಗ ಲೆಲ್ಲ ನನ್ನನ್ನು ಮಾತನಾಡಿಸುತ್ತಿದ್ದ. ಇಬ್ಬರೂ ಸೇರಿ ಹಲವು ಬಾರಿ ಚಹ ವನ್ನೂ ಕುಡಿದಿದ್ದೆವು ಮುದ್ದಪ್ಪನೇನೂ ಸ್ಥಿತಿವಂತನಂತೆ ತೋರುತ್ತಿರಲಿಲ್ಲ. ಅವನ ಅಂಗಿಯೂ ದೋತರವೂ ಯಾವಾಗಲೂ ಕೊಳೆಯಾಗಿ ಬಣ್ಣಗೆಟ್ಟು ಮಾಸಿರುತ್ತಿದ್ದುವು. ತಲೆಯ ಮೇಲಿನ ಬಿಳಿಯ ಟೋಪಿಯೂ ಹಲವು ದಿನ ಗಳಿಂದ ನೀರು ಕಾಣದೆ ಎಣ್ಣೆ ಕುಡಿದು ವಿದ್ರೂಪವಾಗಿರುತ್ತಿತ್ತು. ಈಗಲೂ ಆತ ಅಂಥದೇ ವೇಷದಲ್ಲಿದ್ದ.

" ನಮ್ಮಂಥವರೆಲ್ಲಾ ಇಂಥಾ ವಿಚಾರಮಾಡಿ ಏನುಪಯೋಗ ಮುದ್ದಪ್ಪ? ಸುಮ್ಮನೆ ವೇಳೆ ಹಾಳು. ನಮಗೇನು ಹಣ ಅದೆಯೆ ? ಕಾರು ಅದೆಯೆ ? ಸಿಲ್ಕ್ ಷರ್ಟು, ಬಂಗಾರದೆಳೆ ಇವೆಯೆ ? ನಮ್ಮನ್ಯಾರು ಕೇಳಬೇಕು ?" ಎಂದೆ ನಾನು

" ಬರಾಬ್ಬರಿ ಹೇಳಿದಿರಿ. ಬರಾಬ್ಬರಿ, ನಾನೂ ನಿಮ್ಮಂಗೇ ವಿಚಾರ ಮಾಡುತಾ ನಿಂತಿದ್ದಿನಿ. ಈಗ ಕಾರಿನಾಗ ಕುಂತು ಡೌಲಿನಿಂದ ಹೋದರಲ್ಲ ಅವರಿಬ್ಬರೂ ! ಅಂಥವರದೇ ಕಾಲ ಇದು ! ಮೇಲಿನ ಮುಖಂಡರೂ ಇಂಥವ ರಿಗೇ ಮಣೆ ಹಾಕುತಾರ. ಇವರು ನಿಜವಾಗಿ ಹೆಂಗ ಅದಾರನ್ನೂದನ್ನ ಯಾರೂ ನೋಡುವದಿಲ್ಲ. ನಮ್ಮಂಥಾ ಬಡ ಕಾರ್ಯಕರ್ತರು ಬರೀ ಕಸಾ ಹೊಡೀತಾ ಕೊಳಿಯಬೇಕು. ಏನೂ ಕಷ್ಟ ಪಡದಿದ್ದರೂ ಮಲ್ಲಿಕಾರ್ಜುನಪ್ಪನಂಥವರು ಅಧ್ಯಕ್ಷ ಆಗಿ ಮಾಲಾದೇವಿಯಂಥಾ ದೇಶಸೇವಕಿಯರ ಸಂಗಡ ತಿರುಗುತ್ತ ಮಜಾ ಮಾಡಬೇಕು !"

ಮಾತನಾಡುತ್ತಲಿದ್ದಂತೆಯೆ ನಾವು ಬೀದಿಗುಂಟ ಹೊರಟೆವು. ಅದೇ ತಾನೆ ಊಟವಾಗಿದ್ದಿತಾದುದರಿಂದ ನನ್ನ ಮನಸ್ಸು ಪ್ರಸನ್ನವಾಗಿತ್ತು. ಮುದ್ದಪ್ಪ ಮಾತ್ರ ಇನ್ನೂ ಊಟ ಮಾಡಿದಂತಿರಲಿಲ್ಲ. ಮೊದಲೇ ಮಲಿನವಾಗಿದ್ದ ಅವನ ಮೊಗ ಈಗ ಇನ್ನೂ ಕಳಾಹೀನವಾಗಿತ್ತು.

" ಚಾ ಕುಡಿಯೂಣು ಬರ್ತೀರಾ ಸದಾಶಿವಪ್ಪ ? "

" ನಡೀರಲ್ಲ ! "

ಮಧ್ಯಾಹ್ನದ ಸಮಯವಾದುದರಿಂದ ಚಹದಂಗಡಿಯಲ್ಲಿ ವಿಶೇಷ ಗದ್ದಲವೇನೂ ಇರಲಿಲ್ಲ. ಮೂಲೆಯೊಂದರಲ್ಲಿ ಕುಳಿತ ಬಳಿಕ ನಾನು ಪುರಿ-ಪಲ್ಯಕ್ಕೆ ಹೇಳಿದೆ.

" ಬೇಡ ಬೇಡ. ಅದೇನು ಮಾಡೂದು ? ನಾ ಬರೀ ಚಾ ಕುಡಿತೀನಿ "

" ಇರಲಿ ತಿನ್ನಿರಿ. ನನ್ನದು ಇದೇ ಈಗ ಊಟ ಆಯ್ತು. "

ನಾಲ್ಕು ಪುರಿ ತಿಂದು ಚಹ ಕುಡಿದ ತರುವಾಯ ಮುದ್ದಪ್ಪನ ಮುಖದ ಮೇಲೆ ಅಷ್ಟೇ ರಕ್ತವೇರಿದಂತಾಯಿತು. ನಾನು ಕೊಟ್ಟ ಸಿಗರೇಟು ಹೊತ್ತಿಸುತ್ತ ಆತನೆಂದ :

" ನಿಮ್ಮ ಭೆಟ್ಟಿಯಾಗಿ ಬಹಳ ದಿನ ಆತು ನೋಡ್ರಿ. ಇಷ್ಟು ದಿನ ಎಲ್ಲಿದ್ರಿ ? ಇಲ್ಲಿಗೆ ಬಂದೇ ಇಲ್ಲವೋ ಏನು ? "

" ಇಲ್ಲ. ಯಾಕೆ ? ನಾನೀಗ ಇರೂದೇ ಈ ಊರಲ್ಲಿ "

" ಹಿಂಗೇನು ? ಮೂಸೂರು ಬಿಟ್ಟು ಬಿಟ್ಟಿರಾ ? "

" ಅಂತೂ ನಿಮಗೇನೂ ಗೊತ್ತಿಲ್ಲ ಅನ್ನಿರಿ. "

ಅವನಿಗೇನೂ ಗೊತ್ತಿಲ್ಲವೆಂದ ಮೇಲೆ ಒಳ್ಳೆಯದೇ ಆಯಿತಲ್ಲ ? ನಾನಾಗಿಯೇ ನನ್ನ ದುರದೃಷ್ಟದ ಕಥೆಯನ್ನು ಹೇಳುವ ಅಗತ್ಯವಾದರೂ ಏನಿತ್ತು ?

" ಏನಿಲ್ಲ. ನಾನು ಊರು ಬಿಟ್ಟು ಸದ್ಯಕ್ಕೆ ಇಲ್ಲೇ ಇದೀನಿ ಅಷ್ಟೆ. "

" ಏನ್ಮಾಡ್ತಿದೀರಿ ? "

" ಏನೋ ಒಂದು ಬಿಜಿನೆಸ್, ಹೊಟ್ಟೆಗಾಗುವಷ್ಟೇ ಬರ್ತದ, ಏನೂ ತೊಂದರೆಯಿಲ್ಲ. ನಿಮ್ಮದೆಲ್ಲಾ ಹ್ಯಾಗದ ? "

" ಏನ ಹೇಳೂದ್ರೀ ರೈತರಾದ ನಮ್ಮ ಕಥಿ ? ಮೂರು ವರ್ಷದಿಂದ ಬೆಳಿ ಬರಲಿಲ್ಲ. ಬಹಳ ಗೋಳು ಅದ. ನಮ್ಮದೇ ಸರಕಾರ ಇದ್ದರೂ ಯಾರೂ

ದಾದು ಮಾಡೂದಿಲ್ಲ. ಮಂತ್ರಿಗಳು ಬಂದಾಗಲೆಲ್ಲಾ ಸುಳ್ಳು ಆಶ್ವಾಸನ ಕೊಟ್ಟು ಹೋಗ್ತಾರ. ಬೆಂಗಳೂರಿಗೆ ಹೋದ ಕೂಡಲೇ ಮರತುಬಿಡ್ತಾರ. ಅಂತೂ ಇಂತೂ ಕುಂತೀಮಕ್ಕಳಿಗೆ ರಾಜ್ಯವಿಲ್ಲ ಅಂದಂತೆ ರೈತರಿಗೇನೂ ಸುಖವಿಲ್ಲ. ಸುಖ ಇರೂದು ನಮ್ಮನ್ನ ಸುಲಿದು ತಿನ್ನುವ ಮಲ್ಲಿಕಾರ್ಜುನಪ್ಪನಂಥಾ ವ್ಯಾಪಾರಿಗಳಿಗೆ ! "

" ಕಮ್ಯುನಿಸ್ಟರಂತೆ ಮಾತಾಡಹತ್ತಿದಿರಲ್ಲ ಮುದ್ದಪ್ಪ ?"

" ಇರುವ ವಿಷಯ ಹೇಳಬೇಕಾದರ ಕಮ್ಯೂನಿಸ್ಟೇ ಆಗಬೇಕಾಗ್ತದೇನು? ಸ್ವಾತಂತ್ರ್ಯಕ್ಕಾಗಿ ದುಡಿದವರ್ಯಾರು ? ಮನೆಮಾರು ಹಾಳುಮಾಡಿಕೊಂಡವ ರ್‍ಯಾರು ? ನಮ್ಮಂಥವರು, ನಿಮ್ಮಂಥವರು. ಹದಿನೆಂಟು ವರ್ಷದ ಹುಡುಗ ಇದ್ದಾಗಿನಿಂದ ಕಾಂಗ್ರೆಸ್, ದೇಶಸೇವೆ ಅಂತ ಕತ್ತೆಯ ಹಂಗ ದುಡಕೊಂತ ಬಂದೀನಿ, ನಲವತ್ತೆರಡರ ಚಳವಳಿಯ ಕಾಲಕ್ಕೆ ನಮ್ಮ ಮನೆಮಂದಿಯೆಲ್ಲಾ ಉಪವಾಸ ವನವಾಸ ಮಾಡಿದರು. ಸ್ವಾತಂತ್ರ್ಯ ಬಂದ ಮ್ಯಾಲಾದರೂ ಏನಾರ ಸ್ವಲ್ಪ ಆರಾಮ ಇದ್ದೀನಿ ಅಂದರ ಈಗ ಬರೀ ಮಲ್ಲಿಕಾರ್ಜುನಪ್ಪನಂಥಾ ವ್ಯಾಪಾರಿಗಳ ರಾಜ್ಯ. ೧೯೪೭ರ ಮೊದಲು ಎಲ್ಲಿದ್ದ ಈ ಮಲ್ಲಿಕ್ಯಾ ? ಅಂಗಡೀ ಬಿಟ್ಟು ಹೊರಗ ಬರ್ತಿರಲಿಲ್ಲ. ಒಂದು ಸಲಾನೂ ಜೇಲಿಗೆ ಹೋದವನಲ್ಲ. ಕಾಂಗ್ರೆಸ್ಸಿಗೂ ಏನೂ ಸಹಾಯ ಮಾಡಿದವನಲ್ಲ. ಅಂಥಾವ ಈಗ ಜಿಲ್ಲಾ ಧ್ಯಕ್ಷ. ಕಾಂಗ್ರೆಸ್ಸಿಗಾಗೇ ಕೂದಲು ಬೆಳ್ಳಗೆ ಮಾಡಿಕೊಂಡ ನನ್ನಂಥವರನ್ನ ಯಾರೂ ಮಾತಾಡಿಸೂದಿಲ್ಲ. ಮುಖ್ಯ ಮಂತ್ರಿ ಬರಲಿ, ಸದಾಸ್ಮಿತಪ್ಪ ಬರಲಿ, ಯಾರೇ ಬಂದರೂ ಅವರ ಸಂಗಡ ಮೆರೆಯುವಾತ ಈ ಮಲ್ಲಿಕಪ್ಪನೇ.... "

" ಅವನಲ್ಲವಾದರೆ ಬಸೆಟ್ಟಿ.... "

" ಹುಂ....ಅವನೂ ಒಬ್ಬ ಮಲ್ಲಿಕಪ್ಪನಂಥಾ ಸ್ವಾರ್ಥಿಯೇ. ಇವರಿಗೋ ರೀತಿಯಿಲ್ಲ, ನೀತಿಯಿಲ್ಲ. ನಮ್ಮಂಥಾ ಬಡವರನ್ನ ಮುರಿದು ಹಣಾ ಗಳಿಸಿ ಶ್ರೀಮಂತರಾಗ್ತಾರೆ, ಸಂಘ ಸಂಸ್ಥೆಗಳನ್ನ ಬ್ಯಾಂಕುಗಳನ್ನ ಮುಳುಗಿಸಿ ಲಕ್ಷಾ ಧೀಶ ರಾಗ್ತಾರ. ದೊಡ್ಡ ದೊಡ್ಡ ಮನೆ ಕಟ್ಟಿಸ್ತಾರ, ಬಂಗಲೆ ಕಟ್ಟಿಸ್ತಾರ, ಕಾರು ಕೊಳ್ಳತಾರ. ಅದರಾಗ ಮಾಲಾನಂಥಾ ಸೂಳೇರನ್ನ ಕುಂಡ್ರಿಸಿಕೊಂಡು ಚಕ್ಕಂದ ಹೊಡೀತಾರ. ಮತ್ತ ಗಾಂಧೀ ಶಿಷ್ಯರಂತೆ! ಕಾಂಗ್ರೆಸ್ ಮುಖಂಡ ರಂತೆ ! ಇಂಥಾ ಢೋಂಗೀ ಮಂದಿ ಹೆಚ್ಚಾಗಿಯೇ ಕೆಟ್ಟಿತು ಕಾಂಗ್ರೆಸ್...."

" ಮಾಲಾ ಸೂಳೆ ಅಂದಿರಲ್ಲರಿ ? "

" ಸೂಳೆ ಅಲ್ಲವಾದರಿನ್ನೇನು ಅಂತೀನಿ. ಸೂಳೇರೂ ಸ್ವಲ್ಪ ಮರ್ಯಾದಿಯಿಂದ ಇರತಾರ. ಇವಳು ಮಾತ್ರ ಮಾನಮರ್ಯಾದಿ ನಾಚಿಕಿ ಎಲ್ಲಾ ಎಲ್ಲಾ ಬಿಟ್ಟು ಬಿಟ್ಟಿದಾಳ. "

" ಅಂಥಾದ್ದು ಏನು ಕಂಡಿರಿ ? "

" ಸ್ವತಃ ನೋಡದೆ ನಾನೆಂದೂ ಒಬ್ಬರ ಬಗ್ಗೆ ಆಡುವವ ಅಲ್ಲ ನೋಡಿರಿ. ಮಾಲಾ ಬಗ್ಗೆ ಮೊದಲಿಂದಲೂ ಮಂದಿ ಅದೂ ಇದೂ ಆಡುತಿತ್ತು. ಹೊಟ್ಟೀಕಿಚ್ಚಿಗೆ ಏನೇನೋ ಅಂತಿರಬೇಕಂತ ತಿಳಿದು ನಾ ಲಕ್ಷ್ಯ ಕೊಟ್ಟಿರಲಿಲ್ಲ. ಆದರ, ಮೊನ್ನೆ ಮೊನ್ನೆ ಬೆಂಗಳೂರಾಗ ಕಾಂಗ್ರೆಸ್ ಅಧಿವೇಶನ ಆಯ್ತಲ್ಲರಿ, ನಮ್ಮ ಪ್ರಾಂತದಾಗ ಆಗುವ ಅಧಿವೇಶನ ತಪ್ಪಿಸಬಾರದಂತ ನಾನೂ ಹೋಗಿದ್ದಿನಿ ನೋಡಲಿಕ್ಕೆ. ಅಲ್ಲಿ ಮಲ್ಲಿಕಾರ್ಜುನಪ್ಪ ಅಂತೂ ಇದ್ದೇ ಇದ್ದ. ಸ್ತ್ರೀಯರ ತಂಡದ ಲೀಡರ್ ಆಗಿ ಮಾಲಾನೂ ಬಂದಿದ್ದಳು. ಆಗ ಗೊತ್ತಾಯ್ತು ನೋಡ್ರಿ ಅವಳ ನಿಜವಾದ ಕಥಿ. ಬೆಂಗಳೂರಿನಾಗ ಮಲ್ಲಿಕಪ್ಪನ ಸಂಗಡ ಕಾರಿನಲ್ಲಿ ಅವಳು ಮೆರೆದಿದ್ದೇ ಮೆರೆದಿದ್ದು ! ಸಿನಿಮಾ, ನಾಟಕಾ, ಪಾರ್ಕು, ಹೊಟೇಲು—ಚೈನಿಯೋ ಚೈನಿ ! ಒಂದು ರಾತ್ರೆ ಒಂದಕ್ಕೆ ಹೋಗಲಿಕ್ಕಾಗಿ ಬಿಡಾರದ ಹೊರಗೆ ಬಂದಾಗ, ಮಲ್ಲಿಕಪ್ಪನ ಕಾರಿನಲ್ಲಿ ಅವನ್ನ ಅಪ್ಪಿಕೊಂಡು ಮಾಲಾ ಅರೆಬತ್ತಲೆಯಾಗಿ ಬಿದ್ದಿದ್ದು ಕಾಣಿಸಿತು. ಅವರಿಬ್ಬರಿಗೂ ಎಚ್ಚರವೇ ಇರಲಿಲ್ಲ. ಕುಡಿದಿದ್ದರೊ ಏನೊ .. "

" ಇರಬಹುದು. ಬೆಂಗಳೂರಿನಲ್ಲಿ ಪಾನಪ್ರತಿಬಂಧ ಏನೂ ಇಲ್ಲ. "

" ಗಂಡಸರು ಕುಡಿದದ್ದು ನಾ ನೋಡಿದ್ದಿನಿ. ಮಲ್ಲಿಕಪ್ಪ ಸೆರೆ ಕುಡೀತಾನ. ನನಗೂ ಗೊತ್ತಿತ್ತು. ಆದರ ಮಾಲಾನಂಥಾ ಕಲಿತ ಹೆಂಗಸು ಕುಡಿದದ್ದು ನೋಡಿ ತಿರಸ್ಕಾರ ಬಂತು...."

" ಕಲಿತ ಹೆಂಗಸರೇ ಕುಡಿಯೂದು ಹೆಚ್ಚು ಮುದ್ದಪ್ಪ. ಚಾ ಕಾಫಿಗಳಂತೆ ಅದೂ ಒಂದು ಫ್ಯಾಶನ್ ಆಗ್ಯದ ಬೆಂಗಳೂರಿನಲ್ಲಿ. "

" ಹಿಂಗೇನು ? ನಮ್ಮಂಥಾ ಹಳ್ಳೀ ಮುಕ್ಕರಿಗೆ ಅದೆಲ್ಲಾ ಹೆಂಗ ಗೊತ್ತಾಗಬೇಕು ಬಿಡಿರಿ. ಅಂದಿನಿಂದ ಮಾಲಾ ಅಂದರ ವಾಕರಿಕೆ ಬರುವಂಗ ಆಗ್ತದ.

ಮಲ್ಲಿಕಪ್ಪ ಒಬ್ಬನನ್ನೇ ನಂಬಿಕೊಂಡಿದಾಳ ಅನ್ನಲಿಕ್ಕೂ ಬರೂದಿಲ್ಲ. ಬಸೆಟ್ಟಿ, ಕೇಶವರಾವ್, ಶಾಮಣ್ಣ—ಹತ್ತಿಪ್ಪತ್ತು ಮಂದಿ ಆಗಿ ಹೋಗೇದರಂತ. "

"ಇವಳ ಗಂಡನಿಗೆ ಇದೆಲ್ಲಾ ಗೊತ್ತಿರಲಿಕ್ಕಿಲ್ಲೇನು? ಅವ ಹೆಂಗ ಸುಮ್ನ ನಿರತಾನ ?"

"ಸುಮ್ನನಿರದೇನು ಮಾಡುತಾನ ? ಏನು ಮಾಡೂದಕ್ಕೂ ಅವಗ ಶಕ್ತಿಯಿಲ್ಲಂತೆ !"

"ನೋಡಿದರೆ ಒಳ್ಳೆ ಪೈಲವಾನನಂತೆ ಕಾಣುತಾನಲ್ಲ !"

"ಪೈಲವಾನ !" ಮುದ್ದಪ್ಪ ನಕ್ಕು ನುಡಿದ : "ಅದೂ ಖರೆ ಎಲ್ಲವ್ವನ ಪೈಲವಾನ ಅವ !"

ನನಗೂ ನಗು ಬಾರದಿರಲಿಲ್ಲ. ಮಾಲಾದೇವಿಯ ಬಗೆಗೆ ನನಗೆ ತಿರಸ್ಕಾರವೇನೂ ಉತ್ಪನ್ನವಾಗಲಿಲ್ಲ. ಪ್ರತಿಯಾಗಿ ಕನಿಕರವುಂಟಾಯಿತು. ಶಕ್ತನಲ್ಲದ ಆ ಗಂಡನನ್ನು ಬಿಟ್ಟು ಇನ್ನೊಬ್ಬನನ್ನು ಮಾಡಿಕೊಂಡು ಅವಳು ಸುಖವಾಗಿರಲು ಸಾಧ್ಯವಿದ್ದರೂ ಅವಳೇಕೆ ಹಾಗೆ ಮಾಡುತ್ತಿಲ್ಲವೊ ತಿಳಿಯದು. ಮನೆಯಲ್ಲಿ ದೊರಕದ ಸುಖವನ್ನು ಅವಳು ಈ ರೀತಿಯಾಗಿ ಸ್ವೈರಾಚಾರದಲ್ಲಿ ದೊರಕಿಸುತ್ತಿರುವಳೊ ಏನೊ.

"ಇಂಥವರೇ ಕಾಂಗ್ರೆಸ್ಸಿನಲ್ಲಿ ಹೆಚ್ಚಾಗಿ ಎಲ್ಲಾ ಕೆಟ್ಟುಹೋಯ್ತು !

ನಿಮ್ಮ ಬಸೆಟ್ಟಿಯೂ ಅರ್ಜಿ ಕೊಡ್ತಾನಂತಲ್ಲ ?"

"ನಮ್ಮ ಬಸೆಟ್ಟಿ ? ಈಗ ನನಗೂ ಅವಗೂ ಸಂಬಂಧವೇನಿಲ್ಲ. ಅವನ್ನ ಬಿಟ್ಟು ಬಹಳ ದಿನವಾಯ್ತು, " ಎಂದೆ ನಾನು.

"ಹಿಂಗೇನು ? ಚಲೋ ಮಾಡಿದಿರಿ. ಅಂಥಾ ಲಫಂಗರ ಸಂಗಡ ಇದ್ದರ ಯಾರಿಗೇನು ಕಿಮ್ಮತ್ತು ? ಈ ಸಲ ಅವಗ ಟಿಕೀಟು ಸಿಗಬಹುದು ಅಂತಾರಪಾ. ಹೌದೇನು ?"

"ಸಿಕ್ಕರೂ ಸಿಗಬಹುದಲ್ಲ ? ರೊಕ್ಕ ಅದ, ಕಾರು ಅದ, ಮಂತ್ರಿಗಳ ವ್ಯಾಲೂ ಮುಖಂಡರ ವ್ಯಾಲೂ ಪ್ರಭಾವ ಅದ.... "

"ಇಂಥವರು ಎಂ. ಎಲ್. ಎ ಗಳಾಗಿ ಎಂಥಾ ಸಮಾಜವಾದ ತರುವವರು ?"

“ ಅರ್ಥಾತ್—ಅವರ ಧನದೌಲತ್ತು ಕಾಯಂ ಇರುವಂಥಾ ಸಮಾಜ ವಾದ ! ”

“ ಸಮಾಜವಾದೀ ಸ್ವರೂಪದ ಸಮಾಜ ಮಾಡುತೀವಿ ಅಂತ ಬಾಯಲ್ಲಿ ಹೇಳುವ ಬಸವಣ್ಣನ ಚಿತ್ರ ತೋರಿಸಿ ಭೋಳೇ ರೈತರನ್ನು ಮರುಳುಮಾಡಿ ವೋಟು ತಗೊಳ್ಳೂದು ... ಎಂ. ಎಲ್. ಎ. ಆಗುವವರು ಮಾತ್ರ ಬಸೆಟ್ಟಿ—ಮಲ್ಲಿಕಪ್ಪರಂಥಾ ತುಡುಗರೇ. ರೈತರ ಬಾಯಾಗ ಮಣ್ಣು ಹಾಕಿ, ಅವರಿಗೆ ಮೋಸಾ ಮಾಡಿ ಶ್ರೀಮಂತರಾಗುವ ಇಂಥಾ ಜನರಿಂದ ಬಡ ರೈತರ ಕಲ್ಯಾಣ ಆಗೂದು ಹೆಂಗ ಶಕ್ಯ ?”

“ ರೈತರಿಗೆ ಮೋಸಾ ಮಾಡೇ ಅವರು ಶ್ರೀಮಂತರಾಗ್ತಾರ ಅಂತ ಯಾವ ಆಧಾರದ ಮ್ಯಾಲ ಹೇಳ್ತೀರಿ ? ” ನಮ್ಮ ಹಿಂದಿನ ಕುರ್ಚಿಯಲ್ಲಿದ್ದ ಇನ್ನೊಬ್ಬ ಕಾಂಗ್ರೆಸ್ಸಿಗ ನಡುವೆ ಬಾಯಿ ಹಾಕಿದ.

“ ಮೋಸ ಮಾಡದಿದ್ದರೆ ಅವರಿಗೆ ಹಣಾ ಆದರೂ ಎಲ್ಲಿಂದ ಬರಬೇಕು? ವ್ಯಾಪಾರ ಅಂದರೇನು ? ರೈತರಾದ ನಾವು ಇವರ ಅಂಗಡಿಗೆ ಮಾಲು ಒಯ್ದು ಇಡುತೀವಿ. ಅವರು ಇನ್ನೊಬ್ಬರಿಗೆ ಮಾರುತಾರ. ಅದರಾಗ ರೇಟು ಹೆಚ್ಚು ಕಡಮಿ ಮಾಡಿ ಹಣಾ ಗಳಿಸ್ತಾರ. ರೇಟು ಹೆಚ್ಚು ಕಡಮೆ ಮಾಡದಿದ್ದರೆ ಇವ ರೆಲ್ಲಿ ಶ್ರೀಮಂತರಾಗುತ್ತಿದ್ದರು ?”

“ ರೇಟು ಮಾಡೂದ ಸರಕಾರ ..”

“ ಅಲ್ಲೇ ತಪ್ಪುತೀರಿ ನೀವು, ಸರಕಾರ ರೇಟು ನಿಶ್ಚಯಮಾಡಿದ್ದರ, ಆ ರೇಟಿನಂತೆ ವ್ಯಾಪಾರ ನಡೀತಿದ್ದರ ರೈತರಾದ ನಾವು ವ್ಯಾಪಾರಿಗಳಂತೇ ಸುಖದಿಂದ ಇರಬಹುದಾಗಿತ್ತು. ಸರಕಾರ ರೇಟಿನ ತಂಟೆಗೆ ಬರೂದಿಲ್ಲ. ಯಾಕಂದರೆ ವ್ಯಾಪಾರಿಗಳ ಬೊಕ್ಕಸ ಬೆಳೀಬೇಕಲ್ಲ ? ಸರಕಾರ ನಡಸುವವರೂ ವ್ಯಾಪಾರಿಗಳೇ ಅಲ್ಲಾ ? ಇಂದು ಮುಖ್ಯ ಮುಂತ್ರಿಯಾಗಿದಾರಲ್ಲ, ಅವರು ಎಂಟು ಹತ್ತು ವರ್ಷದ ಹಿಂದೇ ಕೈಯಾಗ ತಕ್ಕಡಿ ಹಿಡುಕೊಂಡು ಹಳ್ಳಿ ಹಳ್ಳಿ ತಿರುಗಿ ಹತ್ತೀ ತೂಗಿಸುವ ವ್ಯಾಪಾರಿ ಆಗಿದ್ದರು. ಇಂಥಾ ವ್ಯಾಪಾರಿಯೊಬ್ಬ ಮುಖ್ಯಮಂತ್ರಿ ಆದ ನಂತರ ಅವ ತನ್ನ ವರ್ಗದ ಸುಖ ನೋಡೂದು ಸ್ವಾಭಾ ವಿಕ. ರೈತರನ್ನ ಸುಲಿಯದಿದ್ದರ ಈ ವ್ಯಾಪಾರಿಗಳು ಸಾವುಕಾರರಾಗೂದಿಲ್ಲ. ಸರಿ. ನಡದದಲ್ಲ ಸುಲಿಗೆಗಾರರ ರಾಜ್ಯ ! ”

" ಕಾಂಗ್ರೆಸ್ಸಿನವರೇ ಆಗಿ ನೀವು ಇಂಥಾ ಮಾತಾಡೂದು ಸರಿಯಲ್ಲ !"

" ಕಾಂಗ್ರೆಸ್ಸಿನವನಾದ್ದರಿಂದಲೇ ಇಂಥಾ ಮಾತಾಡುತಿದೀನಿ. ನಿಜವಾದ ಕಾಂಗ್ರೆಸ್ಸಿಗರೆಂದರೆ ನಮ್ಮಂಥವರೇ. ಈ ಸುಲಿಗೆಗಾರರೆಲ್ಲಾ ಈಚೆಗೆ ಬಂದು ಸೇರಿಕೊಂಡವರು, " ಎಂದು ಆವೇಶದಿಂದ ಹೇಳಿದ ಮುದ್ದಪ್ಪ.

" ಅವರು ಹೆಂಗೇ ಇದ್ದರೂ ನಮ್ಮ ಪಾರ್ಟಿಯವರೇ. ಹಿಂಗ ಚಹ ದಂಗಡಿಯೊಳಗ ಕುಂತು ನಾವು ಅವರನ್ನ ಬೈಯಬಾರದು ಅಂತೀನಿ !" ಎಂದು ಆ ಗೃಹಸ್ಥ ವಾದಕ್ಕಾರಂಭಿಸಿದ.

ಮುದ್ದಪ್ಪನಿಗೂ ಸಿಟ್ಟು ಬಂದಿತು. ಆತನೆಂದ·

" ಚಹದಂಗಡಿಯೊಳಗಷ್ಟೇ ಯಾಕೆ ? ರಸ್ತೇದ ಮ್ಯಾಲ ನಿಂತು ಬಯ್ಯು ತೀನಿ. ಸತ್ಯ ಹೇಳೂದಕ್ಕ ಯಾರಪ್ಪನದೇನು ಅಂಜಿಕೆ ? "

" ನಿಮ್ಮಂಥವರು ಕಾಂಗ್ರೆಸ ಬಿಟ್ಟು ಹೊರಗೆ ಹೋಗಿ ಆ ನಂತರ ಬಯ್ಯ ಬಹುದು. "

" ಬಡವರನ್ನ ಮುರಿದು ತಿನ್ನುವ ಈ ರಾಕ್ಷಸರಿಗೇ ಕಾಂಗ್ರೆಸ್ ಬಿಟ್ಟು ನಾವು ಹೊರಟು ಹೋಗಬೇಕಂತೀರೇನು ? ಕಾಂಗ್ರೆಸ್ಸನ್ನು ನಮ್ಮ ರಕ್ತ ಸುಟ್ಟು ನಾವು ಕಟ್ಟೀವಿ. ಅದು ನಮ್ಮ ಸಂಸ್ಥೆ. ಈ ವ್ಯಾಪಾರಿಗಳ ಆಸ್ತಿ ಅಲ್ಲ ಅದು"

" ವ್ಯಾಪಾರಿಗಳ ಮ್ಯಾಲ ಯಾಕ ಸಿಟ್ಟು ಮಾಡುತೀರಿ ? ಒಂದು ದೇಶ ನಡೀಬೇಕಾದರೆ ರೈತರು—ಕೂಲಿಕಾರರು—ವ್ಯಾಪಾರಿಗಳು ಎಲ್ಲರೂ ಬೇಕು. "

" ಸಮಾಜವಾದದಲ್ಲಿ ಈ ದಲ್ಲಾಲಿ ವ್ಯಾಪಾರಿಗಳ ಅಗತ್ಯವೇನೂ ಇಲ್ಲ. ಕೊಳ್ಳೂದ ಮಾರೂದು ಎಲ್ಲಾ ಸರಕಾರವೇ ಮಾಡಬೇಕು. ಅದಕ್ಕೇ ಅಂತಾರ ಸಮಾಜವಾದ ಅಂತ !"

" ಬಹಳ ತಿಳುಕೊಂಡವರು ಬಿಡಿರೀ. ಬಡಿವಾರ ಮಾಡ್ಬ್ಯಾಡ್ರಿ ! " ಎಂದು ಆ ಗೃಹಸ್ಥ ಅಣಕಿಸಿ, ಅಲ್ಲಿಂದೆದ್ದು ಹೋದ.

" ಇವ ಯಾರು ಗೊತ್ತದೇನು ?" ಎಂದು ಮುದ್ದಪ್ಪ.

" ಇಲ್ಲಲ್ಲ . "

" ಬಸೆಟ್ಟಿಯ ಒಬ್ಬ ಹಸ್ತಕ. ಸೆಟ್ಟಿಗೆ ಏನೋ ತಂದು ಕೊಡ್ತಿರ್‍ತಾನ. ಆದರಿಂದ ಬರುವ ರೊಕ್ಕದಿಂದ ಇವನ ಜೀವನ ... "

ಬಸೆಟ್ಟಿಯ ಬಗೆಗೆ ಮಾಹಿತಿ ದೊರೆಯುವ ಸಂದರ್ಭ ತಾನಾಗಿಯೇ ಬಂತೆಂದು ಹರ್ಷಿಸುತ್ತ ನಾನು ವಿಚಾರಿಸಿದೆ :

" ಹಿಂಗೇನು ? ಸೆಟ್ಟಿಗೆ ಏನು ತಂದು ಕೊಡ್ತಾನಿವ ? "

" ನಿಮಗೆ ಗೊತ್ತಿರಬೇಕಲ್ಲ ? ಈ ಊರಿಗೆ ಓ ಸಿ.ಯ ಚೀಫ್ ಎಜಂಟ್ ಆದಾನ ಬಸೆಟ್ಟಿ. ಈ ಕಲ್ಲಪ್ಪ ಅವನ ಬ್ರ್ಯಾಂಚ್ ಎಜಂಟ್. ಜಿಲ್ಲೆಯ ಬೇರೆ ಬೇರೆ ಕಡೆ ಕೂಡಿದ ಓ. ಸಿ. ರೊಕ್ಕ ವಸೂಲು ಮಾಡಿಕೊಂಡು ಬಂದು ಕೊಡ್ತಾನ..."

ನಿಜವಾಗಿ ನನಗೆ ಆಶ್ಚರ್ಯದ ಆಘಾತವಾದಂತಾಯಿತು. ಬಸೆಟ್ಟಿ ದುಷ್ಟ ನೆಂಬುದಷ್ಟೇ ನನಗೆ ತಿಳಿದಿತ್ತು. ಆದರೆ ಆತನ ವ್ಯವಹಾರ ಓ. ಸಿ. ಯನ್ನೂ ಒಳಗೊಂಡಿರಬಹುದೆಂದು ಅದುವರೆಗೂ ಹೊಳೆದಿರಲಿಲ್ಲ.

" ಇವನ್ಯಾರು ಈ ವಸೂಲಿಗಾರ ? ಎಲ್ಲಿಯವ ?"

" ಎಲ್ಲಿಯವನೊ ಏನೊ. ಕಾಂಗ್ರೆಸ್ ಕಚೇರಿಗೂ ಬರ್ತಿರ್ತಾನ ಆಗಾಗ. ಅಲ್ಲೇ ಗುರುತಾದದ್ದು. " ಎಂದ ಮುದ್ದಪ್ಪ.

" ಇಂಥವರೂ ಕಾಂಗ್ರೆಸ್ಸಿಗರೇ ! "

ಖಾದೀ ಅರಿವೆ ಒಂದು ಚಲೋ ಸಿಕ್ಕದ ಇವರಿಗೆ, ಅದನ್ನ ಹಾಕಿ ಕೊಂಡು ಬೇಕಾದಂಥಾ ನೀಚ ಕೆಲಸ ಮಾಡಿದರೂ ಮುಚ್ಚಿ ಹೋಗ್ತದಲ್ಲ ! ಎಲ್ಲಾ ಕಡೆಗೂ ಇಂದು ಇಂಥವರೇ ತುಂಬಿಕೊಂಡಾರ....ಹೊರಡೂಣೇನು ಸದಾಶಿವಪ್ಪ ? ಬಹಳ ಹೊತ್ತಾತು ಬಂದು... "

ಅವನನ್ನು ಬೀಳ್ಕೊಂಡು ಹೊರಟಿದ್ದಂತೆ ನನಗನ್ನಿಸಿತು. ಬಸೆಟ್ಟಿಯ ಆ ಹಸ್ತಕ ಕಾಂಗ್ರೆಸ್ ಕಚೇರಿಯಿಂದಲೂ ನಮ್ಮನ್ನು ಹಿಂಬಾಲಿಸಿಕೊಂಡು ಬಂದಿದ್ದರೂ ಇರಬಹುದು. ನಾನು ಹೊಸ ಅರಿವೆ ಹಾಕಿಕೊಂಡು ಕಾಂಗ್ರೆಸ್ ಕಚೇರಿಗೆ ಹೋದುದನ್ನು ನೋಡಿ ಅವರ ಕುತೂಹಲ ಕೆರಳಿರಲು ಸಾಕು. ಬಸೆಟ್ಟಿಯ ವಿರುದ್ಧವಾಗಿ ನಾನು ಯಾವುದೋ ಹೊಸ ಹಂಚಿಕೆ ಹೂಡುತ್ತಿರ ಬಹುದೆಂದೂ ಅವರು ಭಾವಿಸಿರಬಹುದು.

ಆ ಬಗೆಗೆ ವಿಚಾರ ಮಾಡುತ್ತ ಹೋದಂತೆ, ನನ್ನ ಊಹೆ ನಿಜವಾಗಿರ ಬೇಕೆಂದೇ ನನಗೆ ಮನವರಿಕೆಯಾಗತೊಡಗಿತು.

## ೪

ಬಸೆಟ್ಟಿ ಓ. ಸಿ. ಯ ಎಜಂಟನಾಗಿದ್ದುದಂತೂ ಗೊತ್ತಾಗಿತ್ತು. ಆದರೆ ಅದನ್ನು ಸಿದ್ಧಗೊಳಿಸುವುದೇನೂ ಸುಲಭಕಾರ್ಯವಾಗಿರಲಿಲ್ಲ. ಆತ ಓ. ಸಿ. ವ್ಯವಹಾರದಲ್ಲಿ ತೊಡಗಿದ್ದುದರ ಬಗೆಗೆ ಸಾಕ್ಷಿ ಹೇಳುವವರು ಸಿಕ್ಕಬೇಕಲ್ಲವೆ ? ಸಾಕ್ಷಿ ಪುರಾವೆಗಳಿಲ್ಲದೆ ಯಾರೂ ಯಾವುದನ್ನೂ ನಂಬುವುದಿಲ್ಲ ಈ ಕಾಲದಲ್ಲಿ. ಲಂಚನಿರೋಧ ಶಾಖೆ ಮನಸ್ಸು ಮಾಡಿದರೆ, ಬಸೆಟ್ಟಿಯ ನಾಲ್ಕು ಜನ ಹಸ್ತಕರನ್ನು ಬಂಧಿಸಿ ಹಲವು ಉಪಾಯ ಯೋಜಿಸಿ ಸಾಕ್ಷಿ–ಪುರಾವೆ ತಯಾರಿಸಲು ಶಕ್ಯವಾದೀತು. ಆದರೆ, ನನಗೆ ಗೊತ್ತಿದ್ದ ಮಟ್ಟಿಗೆ ನಮ್ಮ ಜಿಲ್ಲೆಯ ಪೋಲೀಸ್ ಅಧಿಕಾರಿಗಳಾರೂ ಬಸೆಟ್ಟಿಯ ವಿರುದ್ಧ ಏನನ್ನೂ ಮಾಡಲು ಸಿದ್ಧರಿರಲಿಲ್ಲ. ಲಂಚನಿರೋಧ ಶಾಖೆಯ ವಿಷಯ ಮಾತ್ರ ನನಗೆ ಸರಿಯಾಗಿ ತಿಳಿದಿರಲಿಲ್ಲ. ಅವರು ಬಸೆಟ್ಟಿಯ ಕಿಸೆಯಲ್ಲಿರುವರೋ ಇಲ್ಲವೊ ಎಂಬುದೂ ಗೊತ್ತಿರಲಿಲ್ಲ. ಆದರೂ, ಅಗುಳಿನ ಮೇಲಿಂದ ಅನ್ನದ ಪರೀಕ್ಷೆ ಮಾಡುವಂತೆ ಸಬ್‌ಇನಸ್ಪೆಕ್ಟರ್ ಸೋಮಯ್ಯನ ಉದಾಹರಣೆಯಿಂದ ಜಿಲ್ಲೆಯ ಪೋಲೀಸ್ ದಳದ ಬಣ್ಣ ತಿಳಿದುಕೊಳ್ಳಬಹುದಾಗಿತ್ತು.

ಅಂದು ಸಂಜೆ ನಾನು ಚಹ ಕುಡಿದು ಸ್ಟೇಶನ್ ರಸ್ತೆಯಲ್ಲಿ ನಡೆದಿದ್ದಂತೆ ತನ್ನ ಮನೆಗೆ ಹೋಗಲು ಬಸ್ಸಿಗಾಗಿ ಕಾದಿದ್ದ ಲೀಲಾವತಿಯ ಭೆಟ್ಟಿಯಾಯಿತು,

" ಬಹಳ ಸುಧಾರಣೆಯಾದಂತೆ ಕಾಣ್ತದಲ್ಲ ! " ಎಂದವಳು, ನನ್ನ ಹೊಸ ಬಟ್ಟೆಬರೆ ದಿಟ್ಟಿಸುತ್ತ.

" ಅದಕ್ಕೆ ಕಾರಣರು ನೀವೇ. "

" ನಾನೇ ? "

" ಹೌದು. ನಿನ್ನೆ ಭೆಟ್ಟಿಯಾದಾಗ ನಿರಾಶೆಯನ್ನ ಬಿಟ್ಟು ಉತ್ಸಾಹ

ಶಾಲಿಯಾಗಬೇಕಂತ ಉಪದೇಶ ಮಾಡಿದಿರಲ್ಲ ? ರಾತ್ರಿ ಯಿಡೀ ನಾನೂ ಅದೇ ವಿಚಾರ ಮಾಡಿದೆ. ಬೆಳಗಾಗುತ್ತಲೂ ಒಂದು ನಿಶ್ಚಯಕ್ಕೆ ಬಂದು–ಇಂದಿನಿಂದ ಹೊಸ ಜೀವನ ಷುರು ಮಾಡಬೇಕಂತ ಖಾದಿ ಭಾಂಡಾರಕ್ಕೆ ಹೋಗಿ ಬಟ್ಟೆ ತೆಗೆದುಕೊಂಡೆ."

"ಬಹಳ ಚಲೋ ಆಯ್ತು, ಸಂತೋಷ," ಎಂದಳು ಲೀಲಾವತಿ

"ಬರೀ ಡ್ರೆಸ್ಸಿಗೇ ಮುಗಿಯುವದಿಲ್ಲ ಸುಧಾರಣೆ ಲೀಲಾ. ರಾತ್ರಿಯೇ ನಾನೊಂದು ಪ್ರತಿಜ್ಞೆ ಮಾಡಿದೀನಿ. ಬಸೆಟ್ಟಿಯ ಗುಪ್ತ ವ್ಯವಹಾರಗಳನ್ನೆಲ್ಲಾ ಬಯಲಿಗೆಳೆದು ಅವನ ನಿಜಸ್ವರೂಪವನ್ನ ಜನರ ಮುಂದಿಡೂದು. ನಿಮ್ಮಿಂ-ದಲೂ ಸ್ವಲ್ಪ ಸಹಾಯವಾಗಬೇಕು, ನೋಡಿರಿ"

ಬಸೆಟ್ಟಿಯ ಪ್ರಸ್ತಾಪ ಬಂದೊಡನೆಯೆ ಅವಳು ಬೆಚ್ಚಿದಂತೆ ತೋರಿತು.

"ಆತ ಸಾಧಾರಣ ಇಸಮಲ್ಲ ಸದಾಶಿವ, ಹುಷಾರಾಗಬೇಕು ನೋಡಿರಿ."

"ಆತ ಅಸಾಧಾರಣ ಆಸಾಮಿ ಅನ್ನೂದಂತೂ ನನಗೆ ಚೆನ್ನಾಗಿ ಗೊತ್ತದ. ಮೈಯೆಲ್ಲಾ ಕಣ್ಣಾಗಿ ಈ ಕೆಲಸ ಮಾಡಬೇಕು ನಿಜ ನೀವೂ ಸ್ವಲ್ಪ ಸಹಾಯ ಮಾಡುತೀರಾ ?"

"ನನ್ನಿಂದೇನಾಗಬೇಕು ?"

"ಒಂದು ವಿಷಯ ತಿಳುಕೊಳ್ಳಬೇಕು"

"ಹೂಂ. ಹೇಳಿರಿ, ಆಗ್ತದೇನೋ ನೋಡೋಣ."

"ಬಸೆಟ್ಟಿಯ ಮೊದಲನೆಯ ಹೆಂಡತಿ ಈ ಊರಲ್ಲೇ ಎಲ್ಲೋ ಇದಾಳಂತಲ್ಲ ? ನಿಮಗೆ ಗೊತ್ತದೇನು ?"

"ಮೊದಲನೆಯ ಹೆಂಡತಿ ? ಅಂದರೆ ? ಈಗ ಇರುವವಳು ಎರಡನೆಯ ಹೆಂಡತಿಯೋ ?"

"ಹೌದು. ಮೂರು ವರ್ಷಗಳ ಕೆಳಗೆ ಇವಳನ್ನ ಮಾಡಿಕೊಂಡಾನ"

"ಒಳ್ಳೇದು. ನಾಳೆ ಅಲ್ಲಿ ಇಲ್ಲಿ ಕೇಳಿ ಶಕ್ಯವಾದರೆ ತಿಳುಕೊಂಡು ಹೇಳುತೀನಂತೆ."

"ನಿಮ್ಮನ್ನ ಎಲ್ಲಿ ಭೆಟ್ಟಿಯಾಗಬೇಕು ?"

"ಇಲ್ಲೇ–ಇದೇ ವೇಳೆಗೆ ಕಾದಿರಿ. ನಾ ಬರ್ತೀನಿ. ಸ್ವಲ್ಪ ತಡವಾದರೂ ಅಡ್ಡಿಯಿಲ್ಲ. ಬರುವ ತನಕ ಕಾಯುತ್ತಾ ಇರಿ."

ಮಾರನೆಯ ದಿನ ಸಂಜೆ ಭೆಟ್ಟಿಯಾಗುತ್ತಲೂ ಲೀಲಾವತಿ ಹೇಳಿದಳು :

" ಬಸೆಟ್ಟಿಯ ಮೊದಲ ಹೆಂಡತಿ ಕಾಮಾಕ್ಷಿ ನಾನಿರುವ ವಿಸ್ತರಣದಲ್ಲೇ ಒಂದು ಬಂಗಲೆಯಲ್ಲಿದಾಳೆ. ಆದರ ನಂಬರ್ ೨೫. "

" ಥ್ಯಾಂಕ್ಸ್ ಲೀಲಾವತಿ. "

" ನೀವೇನೋ ಒಂದು ಭಯಂಕರ ಕೆಲಸಕ್ಕ ಕೈಹಾಕುವಂತೆ ಕಾಣ್ತದ. ಕಾಮಾಕ್ಷಿಯ ಸಂಗಡ ಹುಡುಗಾಟ ಒಳ್ಳೇದಲ್ಲ ನಿಮ್ಮ ಒತಕ್ಕಂದೇ ನಾ ಹೇಳುತೀನಿ. ಬಸೆಟ್ಟಿಯವರಿಗೆ ಗೊತ್ತಾದರೆ ನಿಮ್ಮ ಜೀವದ ಮೇಲೇ ಬಂದೀತು. "

" ಅದೆಲ್ಲಾ ತಿಳುಕೊಂಡೇ ಈ ಕೆಲಸಕ್ಕ ನಿಂತೀನಿ ಲೀಲಾ ನೀವೇನೂ ಚಿಂತಿಸಬೇಡಿರಿ. ಕಾಮಾಕ್ಷಿಗೆ ನಾನೇನೂ ಅಪಾಯ ಮಾಡುವದಿಲ್ಲ. ಕೆಲವೊಂದು ವಿಷಯ ತಿಳಕೋಬೇಕು ಅಷ್ಟೆ. "

" ಅವಳು ಹೇಳುತಾಳೋ ಇಲ್ಲೋ. ಬಸೆಟ್ಟಿ ಅವಳನ್ನು ಬಿಟ್ಟು ಬಿಟ್ಟಿದ್ದರೂ ಈಗಲೂ ಅವಳ ಖರ್ಚಿಗೆ ಕೊಡ್ತಿದಾನಂತೆ. "

" ಇರಲಿರಲಿ. ನಾ ನೋಡಿಕೊಳ್ತೀನಿ. "

ರಾತ್ರೆ ಎಂಟರ ಸುಮಾರಿಗೆ ವಿಸ್ತರಣಕ್ಕೆ ಹೋಗಿ ೨೫ನೆಯ ನಂಬರಿನ ಮನೆಯನ್ನು ಪತ್ತೆ ಮಾಡಿದೆ. ಜಮೀನುದಾರ್–ಜಾಗೀರದಾರರ ಸುಖವಸತಿಗೆಂದೇ ಕಟ್ಟಿಸಲ್ಪಟ್ಟ ಬಂಗಲೆ. ಮೇಲೆ ಒಂದು ಮಹಡಿಯೂ ಇತ್ತು. ಒಳಗೆ ವಿದ್ಯುದ್ದೀಪಗಳು ಉರಿಯುತ್ತಿದ್ದುವು. ಮಹಡಿಯ ಮೇಲಿನ ಒಂದು ಕೊಟಡಿಯಲ್ಲೂ ಬೆಳಕಿತ್ತು.

ಅಲ್ಲಿ ಪ್ರವೇಶ ದೊರಕಿಸುವ ಉಪಾಯವನ್ನು ನಾನು ಮೊದಲೇ ಯೋಜಿಸಿಟ್ಟುಕೊಂಡಿದ್ದೆ. ಆ ಪ್ರಕಾರ, ನೇರವಾಗಿ ಮುಂಬಾಗಿಲಿಗೆ ಹೋಗಿ " ಬಾಯಿಸಾಹೇಬ್ " ಎಂದು ಕೂಗಿದೆ.

ಒಂದು ನಿಮಿಷ ಯಾರೂ ' ಓ ' ಕೊಡಲಿಲ್ಲ. ನಾನು ಮತ್ತೊಮ್ಮೆ ಕೂಗಿದ ತರುವಾಯ ಸೇವಕಿಯೊಬ್ಬಳು ಬಂದು ಬಾಗಿಲು ತೆಗೆದಳು.

" ಯಾರು ನೀವು ? ಏನು ಬೇಕು ? "

" ಬಾಯಿಸಾಹೇಬರನ್ನ ಭೆಟ್ಟಿಯಾಗಬೇಕಾಗ್ಯದ. "

" ಇಂಥಾ ವೇಳೆಯೊಳಗ ಭೆಟ್ಟಿಯಾಗೂದಿಲ್ಲ ಅವರು. ಮುಂಜಾನೆ ಬರ್ರಿ. "

" ಊಹೂಂ. ಈಗಿಂದೀಗ ಭೆಟ್ಟಿಯಾಗಬೇಕಾಗ್ಯದ. ಬಹಳ ಅರ್ಜಂಟ್, ಅವರನ್ನ ಕೇಳಿ ಬಾ. "

ಸೇವಕಿ ಒಳಗೆ ಹೋದ ಮೂರು ನಾಲ್ಕು ನಿಮಿಷಗಳ ಬಳಿಕ ಸಾಕಷ್ಟು ದುಂಡಗೆ ಬೆಳೆದ, ನಲವತ್ತರ ಪ್ರಾಯದ ಕಾಮಾಕ್ಷಿ, ತಲೆಯ ಮೇಲೆ ಸೆರಗು ಹೊದೆದುಕೊಳ್ಳುತ್ತ ಬಾಗಿಲ ಬಳಿ ಬಂದಳು.

" ಯಾರ್ರೀ ನೀವು ? ಇಂಥಾ ವೇಳೆಯೊಳಗ ಏನು ಕೆಲಸ ?" ಎಂದು ಸಿಡುಕಿನಿಂದಲೇ ಆರಂಭಿಸಿದ ಕಾಮಾಕ್ಷಿ, ವಿದ್ಯುದ್ದೀಪದ ಪ್ರಖರ ಬೆಳಕಿನಲ್ಲಿ ಎದ್ದು ಕಾಣುತ್ತಿದ್ದ ನನ್ನ ಸುಪುಷ್ಟವಾದ ಶರೀರವನ್ನೂ ಆ ಶರೀರಕ್ಕೆ ಒಪ್ಪುವಂತಿದ್ದ ಬಟ್ಟೆಗಳನ್ನೂ ದಿಟ್ಟಿಸಿ ನೋಡುತ್ತಿದ್ದಂತೆ, ಧ್ವನಿ ಬದಲಿಸಿ, "ಬರ್ರಿಲಾ ಒಳಗ ! ಯಾವೂರವರು ?" ಎಂದು ಪ್ರಶ್ನಿಸಿದಳು.

ನಾನು ಲೆಕ್ಕ ಹಾಕಿಕೊಂಡಿದ್ದಂತೆಯೆ ನಡೆಯುತ್ತಿತ್ತು ಎಲ್ಲವೂ. ನನ್ನ ರೂಪಿನ ಬಗೆಗೆ ನನಗೇ ಅಭಿಮಾನವೆನ್ನಿಸದಿರಲಿಲ್ಲ. ಮೂರು ವರ್ಷಗಳಿಂದ ಏಕಾಂಗಿನಿಯಾಗಿರುವ, ಸಾಕಷ್ಟು ಸುಖ ಕಂಡ ಪ್ರೌಢ ಸ್ತ್ರೀಯೊಬ್ಬಳು ನನ್ನಂಥ ಕಟ್ಟುಮಸ್ತಾದ ಯುವಕನನ್ನು ಸಂತೋಷದಿಂದ ಸ್ವಾಗತಿಸಬಹುದೆಂದೇ ನಾನು ಭಾವಿಸಿದ್ದೆ. ನನ್ನ ಭಾವನೆಯಂತೆ ಕಾಮಾಕ್ಷಿ ಆನಂದದಿಂದಲೇ ನನ್ನನ್ನು ಬರಮಾಡಿಕೊಳ್ಳುತ್ತಿದ್ದಳು !

" ನಮ್ಮದು ಬೆಂಗಳೂರು," ಎಂದೆ ನಾನು, ಅಲ್ಲಿದ್ದ ಕುರ್ಚಿಯೊಂದರಲ್ಲಿ ಕುಳಿತುಕೊಳ್ಳುತ್ತ.

ಕಾಮಾಕ್ಷಿ ಹೊರಗೆ ಮುಖ ಹಾಕಿ ಅತ್ತಿತ್ತ ನೋಡಿ, ಸುತ್ತಮುತ್ತ ಯಾರೂ ಇಲ್ಲವೆಂದು ಮನವರಿಕೆ ಮಾಡಿಕೊಂಡು ನಿಧಾನವಾಗಿ ಬಾಗಿಲು ಮುಚ್ಚಿ, ನನ್ನೆದುರಿನ ವಿರಾಮ ಕುರ್ಚಿಯಲ್ಲಿ ಕುಳಿತುಕೊಂಡಳು. ಅವಳೇನೂ ಅಶಿಕ್ಷಿತ, ಅನನುಭವಿಕ ಸ್ತ್ರೀಯಾಗಿರಲಿಲ್ಲವೆಂಬುದನ್ನು ಅವಳ ದೃಷ್ಟಿಯೇ ಸಾರಿ ಹೇಳುತ್ತಿತ್ತು. ಮತ್ತೊಮ್ಮೆ ನನ್ನನ್ನು ತಲೆಯಿಂದ ಕಾಲಿನವರೆಗೆ ದಿಟ್ಟಿಸಿ ನೋಡಿ ತುಟಿಗಳ ಮೇಲೆ ಮುಗುಳುನಗೆ ತುಳುಕಿಸುತ್ತ ಅವಳೆಂದಳು.

" ಬೆಂಗಳೂರು ? ಬಹಳ ದೂರ ಬಂದಂತಾಯಿಲ್ಲ ? "

" ನಮ್ಮ ಕೆಲಸವೇ ಹಾಗಿದೆ ಬಾಯಿಸಾಹೇಬ್. ನಾನೊಬ್ಬ ಪತ್ರಿಕೋದ್ಯೋಗಿ. ಜರ್ನಲಿಸ್ಟ್. " ವೀರವಾಣಿ " ಡೇಲಿ ಪೇಪರಿನ ವರದಿಗಾರ– ವಿಶ್ವನಾಥ ಅಂತ ಹೆಸರು. "

" ಹೀಗೇನು ? ಪೇಪರಿನವರಿಗೆ ನನ್ನಂಥವಳ ಹತ್ತಿರ ಏನು ಕೆಲಸ ? " ಎಂದು ಕಾಮಾಕ್ಷಿ ಕಣ್ಣರಳಿಸಿ, ಹುಬ್ಬೇರಿಸಿ ಕೇಳಿದಳು.

" ಕೆಲಸ ಇಲ್ಲದಿದ್ದರೆ ಇಂಥಾ ಅವೇಳೆಯಲ್ಲಿ ನಿಮಗೆ ತೊಂದರೆ ಕೊಡ್ತಿದ್ದೇನೇ ? ಕ್ಷಮಿಸಬೇಕು ಬಾಯಿಸಾಹೇಬ್. ಪತ್ರಿಕೋದ್ಯೋಗಿಗಳಾದ ನಮಗೆ ವೇಳೆಯ ಅರಿವೇ ಇರೋದಿಲ್ಲ. ನಮ್ಮ ಕೆಲಸವಿದ್ದರಾಯಿತು, ಮಧ್ಯರಾತ್ರಿಯಲ್ಲೂ ಕೂಡಾ ಮುಖ್ಯಮಂತ್ರಿಗಳನ್ನೂ ಎಬ್ಬಿಸುತ್ತೇವೆ. ಈಗ ನಾನೇಕೆ ಬಂದೆ ಅಂದರೆ ಇವತ್ತು ರಾತ್ರಿಯೇ ನಾನೊಂದು ಲೇಖನ ಬರೆದು ಕಳಿಸಬೇಕಾಗಿದೆ. ನಮ್ಮ ಪೇಪರಿಗೆ, ಬಸೆಟ್ಟಿಯುವರ ಬಗ್ಗೆ ... "

ಬಸೆಟ್ಟಿಯ ಹೆಸರು ಹೊರಡುತ್ತಲೂ ಕಾಮಾಕ್ಷಿಯ ಮುಖ ಬಣ್ಣ ಕಳೆದುಕೊಂಡಿತು. ಅವಳು ಅಸ್ವಸ್ಥಳಾಗಿ ಕುರ್ಚಿಯಲ್ಲಿ ಹೊರಳಿ ಕೇಳಿದಳು.

" ಎಂಥಾ ಲೇಖ ? "

"ಇಲೆಕ್ಶನ್ ಹತ್ತಿರ ಬಂದಿದೆಯಲ್ಲ ಬಾಯಿಸಾಹೇಬ್ ಬಸೆಟ್ಟಿಯುವರು ಕಾಂಗ್ರೆಸ್ ಟಿಕೀಟಿಗಾಗಿ ಅರ್ಜಿ ಹಾಕುವವರಿದ್ದಾರೆ. ನಿಮಗೂ ಗೊತ್ತಿರಬೇಕು.."

" ಇಲ್ಲ. ನನಗೇನು ಗೊತ್ತಿಲ್ಲ. "

" ಇಲ್ಲದಿದ್ದರಿಲ್ಲ. ನನಗಂತೂ ಗೊತ್ತಾಗಿದೆಯಲ್ಲ ! ಕಾಂಗ್ರೆಸ್ ಟಿಕೀಟಿಗಾಗಿ ಅರ್ಜಿ ಹಾಕುವವರ ವಿಸ್ತೃತ ಪರಿಚಯ ಮಾಡಿಕೊಡಬೇಕಂತ ನಮ್ಮ ಪೇಪರಿನವರು ನಿಶ್ಚಯಿಸಿ ಅದಕ್ಕಾಗಿ ನನ್ನ ಕಳಿಸಿದಾರೆ. ಹದಿನೈದು ದಿನದಿಂದ ನಾನು ಬೇರೆ ಬೇರೆ ಜಿಲ್ಲೆ ತಿರುಗಾಡಿ ಈಗ ಇಲ್ಲಿಗೆ ಬಂದಿದೀನಿ.. "

" ಅವರೂ ಭೆಟ್ಟಿಯಾಗಿದ್ದರೇನು ? "

" ಇಂದು ಮಧ್ಯಾಹ್ನ ಬಸೆಟ್ಟಿಯುವರ ಇಂಟರ್‌ವ್ಯೂ ತೆಗೆದುಕೊಂಡೆ. ಪರಿಚಯಲೇಖನ ಅಂದರೆ ಅವರ ಕೌಟುಂಬಿಕ ಸಮಾಚಾರವೂ ಬೇಕಾಗುತ್ತೆ. ಆ ವಿಚಾರ ಕೇಳಿದಾಗ ತಾವು ಇಲ್ಲಿಯೇ ಇರೋದು ಗೊತ್ತಾಯಿತು. ಬಸೆಟ್ಟಿಯುವರ ಬಗ್ಗೆ ತಮ್ಮಿಂದಲೂ ಮಾಹಿತಿ ಸಿಕ್ಕುವದು ಅಂತ ಬಂದೆ. ಕತ್ತಲಾಗುವದರೊಳ

ಗಾಗಿ ಬರಬೇಕೆಂದರೆ ಬೇರೆ ಏನೇನೋ ಕೆಲಸದಿಂದ ಆಗಲಿಲ್ಲ. ನಿಮಗೆ ತೊಂದರೆಯಾಗಲಿಲ್ಲವಷ್ಟೆ ? "

"ಅದೇನಿಲ್ಲ ಬಿಡಿರಿ. ಆದರೆ, ಅವರ ಬಗ್ಗೆ ನಾನೇನು ಹೇಳಲಿ ? ಏನೂ ಹೇಳುವಂತಿಲ್ಲ."

"ಇಷ್ಟು ದೂರದಿಂದ ಬಂದವನನ್ನ ನಿರಾಶಗೊಳಿಸಬಾರದು ಬಾಯಿಸಾಹೇಬ್, ಏನಾದರೂ ಹೇಳಲೇಬೇಕು."

"ಸರಿ. ನಾನಿನ್ನೂ ಊಟ ಮಾಡಿಲ್ಲ. ನೀವು ? "

"ಎಲ್ಲಿಯ ಊಟ ಬಾಯಿಸಾಹೇಬ್ ? ನಿಮ್ಮ ಇಂಟರ್‌ವ್ಯೂ ಮುಗಿಸಿಕೊಂಡೇ ಹೋಗಬೇಕಂತ ಬಂದೆ."

"ಬರ್‍ರಿ ಹಾಗಾದರೆ. ನೀವೂ ಊಟ ಮಾಡುವಿರಂತೆ." ಎಂದು ಅವಳು ಕುರ್ಚಿಯಿಂದೆದ್ದಳು.

"ಥ್ಯಾಂಕ್ಸ್ ಬಾಯಿಸಾಹೇಬ್. ಊಟದ ತೊಂದರೆ ತೆಗೆದುಕೊಳ್ಳಬೇಡಿ. ನಾನು ಆಮೇಲೆ ಮಾಡ್ತೀನಂತೆ."

"ಇರಲಿ ಏಳಿರಿ. ನನ್ನಿಂದ ನಿಮಗೆ ಸುದ್ದಿಯಂತೂ ಸಿಗುವಂತಿಲ್ಲ. ಊಟ ಆದರೂ ಆಗಲಿ."

ನಾನು ಮತ್ತೆ ಸಂಕೋಚ ವ್ಯಕ್ತಗೊಳಿಸದೆ ನಗುನಗುತ್ತ ಎದ್ದು ಹೊರಟೆ. ನಡುಮನೆಯಲ್ಲಿ ಮಹಡಿಗೆ ಹೋಗುವ ಮೆಟ್ಟಲಿದ್ದವು. ನನ್ನನ್ನು ಅಟ್ಟದ ಕೊರಡಿಗೇ ಕರೆದೊಯ್ದು, ಕಪಾಟಿನಿಂದ ದೋತರವೊಂದನ್ನು ತೆಗೆದುಕೊಡುತ್ತ ಕಾಮಾಕ್ಷಿಯೆಂದಳು :

"ಇದನ್ನುಟ್ಟುಕೊಂಡು ಇಲ್ಲೇ ಕೂತಿರ್‍ರಿ. ಐದು ಮಿನಿಟಿನಲ್ಲಿ ಬಂದುಬಿಡ್ತೀನಿ."

"ದೋತರ ಉಡಲೇಬೇಕೇನು ? ನಾನೇನು ಈಗ ಹೋಗುವವ..."

"ಇನ್ನೇನು ಹೋಗುತೀರಿ ಇಂಥಾ ರಾತ್ರಿಯೊಳಗ ? ಇಳಕೊಂಡಿರೂದೆಲ್ಲಿ ? "

"ಸಿಟಿಯ ಹೋಟಲಲ್ಲಿ."

"ಅಷ್ಟು ದೂರ ನಡೆದು ಏನು ಹೋಗುತೀರಿ ಬಿಡಿರಿ. ರಾತ್ರಿ ಇಲ್ಲಿ

ಟಾಂಗಾಗಳೂ ಸಿಕ್ಕುವದಿಲ್ಲವಲ್ಲ ? ” ಎಂದು ನುಡಿದು ನವಯುವತಿಯಂತೆ ವೈಯ್ಯಾರ ಮಾಡುತ್ತ ಅವಳು ಕೆಳಗೆ ಹೋದಳು.

ಪ್ಯಾಂಟು ತೆಗೆದು ಕುರ್ಚಿಯ ಮೇಲಿರಿಸಿ ದೋತರ ಉಟ್ಟುಕೊಂಡೆ. ಖಾದಿಯದೇ ದೋತರ. ಬಸೆಟ್ಟಿಯ ಕುರುಹಾಗಿ ಅದು ಅವಳ ಹತ್ತಿರವೇ ಬಿದ್ದುಕೊಂಡಂತಿತ್ತು. ಕೊಟಡಿಯಲ್ಲಿ ಸಾಕಷ್ಟು ಅಗಲವಾಗಿದ್ದ, ಸೊಳ್ಳೆಯ ಪರದೆಯಿಂದ ಆವೃತವಾಗಿದ್ದ ಮಂಚವಿತ್ತು. ಅದರ ಎದುರು ಒಂದು ಸೋಫಾ, ಮಂಚದ ಪಕ್ಕದಲ್ಲಿದ್ದ ಪುಟ್ಟ ಮೇಜಿನ ಮೇಲೆ ರೇಡಿಯೊ. ಬಾಗಿಲು ಕಿಟಕಿಗಳಿಗೆಲ್ಲ ತೆಳ್ಳನೆಯ ಪರದೆಗಳಿದ್ದುವು. ಗೋಡೆಯೊಂದರ ಮೇಲೆ ರಾಧಾ ಕೃಷ್ಣರ ಪ್ರಣಯಕೇಳಿಯ ಆಕರ್ಷಣೀಯವಾದ ಚಿತ್ರವಿತ್ತು ಇಂದಿನವುಟ್ಟಿಗೆ ನಾನೇ ಕೃಷ್ಣ, ಕಾಮಾಕ್ಷಿಯೇ ರಾಧೆ—ಎಂದುಕೊಳ್ಳುತ್ತ ನನ್ನ ಬೆನ್ನು ನಾನೇ ತಟ್ಟಿಕೊಂಡೆ.

ಮೈಸೂರಿಗರ ಹಾಗೆ ದೋತರವನ್ನು ಅಡ್ಡವಾಗಿ ಸುತ್ತಿಕೊಂಡು, ಒಂದು ಸಿಗರೇಟು ಹೊತ್ತಿಸಿ ಸೋಫಾದ ಮೇಲೆ ವಿರಾಮವಾಗಿ ಕುಳಿತಿದ್ದಂತೆಯೆ ಕಾಮಾಕ್ಷಿ ಆಗಮಿಸಿದಳು. ಮೆಟ್ಟಲೇರಿ ಬಂದುದರಿಂದ ಅವಳ ಎದೆ ಏರಿ ಇಳಿಯುತ್ತಿತ್ತು; ಅವಳ ವಯಸ್ಸಿಗೂ ಶರೀರ ಪ್ರಕೃತಿಗೂ ತಕ್ಕಹಾಗಿದ್ದ ತುಂಬಿದ ಎದೆ.

“ ಇನ್ನೊಂದು ಐದು ಮಿನಿಟು ಕೂತಿರ್ರಿ. ಸ್ವಲ್ಪ ಅಡಿಗೆ ಉಳಿದದ, ” ಎಂದಳವಳು: ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ.

“ ಐದೇ ಮಿನಿಟು ಯಾಕೆ ? ಐದು ದಿವಸವೂ ಕೂತಿರಬಲ್ಲೆ ನೀವು ಹೇಳಿ ದರೆ... ” ಎಂದೆ ನಾನು, ಅವಳ ಮೇಲೆ ಕಡೆಗಣ್ಣ ಬಾಣ ಪ್ರಯೋಗಿಸುತ್ತ.

“ ಬೆಂಗಳೂರಿನವರು ಬಹಳ ಬೆರಿಕೀ ಮಂದಿ ಹಾಗಾದರೆ ! ” ಎಂದ ಳವಳು, ಕುಲುಕುಲು ನಗುತ್ತ.

“ ಮಾದಾಪುರದವರಾದರೂ ಏನು ಕಮ್ಮಿ ? ” ಎಂದೆ ನಾನು.

“ ನಿಜವಾಗಿ ನೀವು ಬೆಂಗಳೂರಿನವರಲ್ಲವೇ ಅಲ್ಲ ! ಸುಳ್ಯಾಕೆ ಆಡ್ತೀರಿ ? ” ಎಂದಳು ಕಾಮಾಕ್ಷಿ.

ನನಗೆ ಕೊಂಚ ಗಾಬರಿಯಾಗದಿರಲಿಲ್ಲ. ನಾನು ಊಹಿಸಿದ್ದುದಕ್ಕಿಂತಲೂ

ಹೆಚ್ಚಾಗಿಯೇ ಘಾಟಿಯಾಗಿದ್ದಳು ಆ ಹೆಣ್ಣು ! ನನಗಿಂತ ಒಂದು ಕೈ ಮೇಲೆಯೇ ಎನ್ನುವಂತಿತ್ತು.

" ಅದನ್ನ ಹ್ಯಾಗೆ ಹೇಳ್ತೀರಿ ? " ಎಂದು ಕೇಳಿದೆ.

" ಬೆಂಗಳೂರಿನವರು ಮಾತಾಡುವ ರೀತಿಯೇ ಬೇರೆ ಇರ್ತದ. ಅವರ ಮಾತಿನ ಧಾಟಿಯ ಮೇಲೇ ಗುರುತಿಸಬಹುದು. ನೀವು ಮಾತ್ರ ಇತ್ತ ಕಡೆಯವರೇ. ಏನೇನೂ ಸಂಶಯವಿಲ್ಲ."

" ನಿಮ್ಮ ಮಾತು ನಿಜ. ನಾನೂ ಇತ್ತ ಕಡೆಯವನೇ. ಆದರೆ ಕೆಲ ವರ್ಷಗಳಿಂದ ಬೆಂಗಳೂರಿನಲ್ಲಿ ಕೆಲಸಕ್ಕಿದೀನಿ. ಅದನ್ನಾದರೂ ನಂಬುತೀರೋ ಇಲ್ಲವೊ ? "

" ಹೀಗೆ ಬರ್ರಿ ಹಾದಿಗೆ. ನನಗೆ ಆಗಲೇ ಅನಿಸಿತ್ತು—ಇವರು ಬೆಂಗಳೂರಿನವರಲ್ಲ ಅಂತ. ಯಾವೂರು ಹಾಗಾದರೆ ? "

" ಹುಬ್ಬಳ್ಳಿಯ ಹತ್ತರ ಒಂದು ಹಳ್ಳಿ."

" ಅಯ್ಯ ! ಹುಬ್ಬಳ್ಳಿಯೆ ? ನಾನೂ ಹುಬ್ಬಳ್ಳಿಯವಳೇ ! " ಎಂದಳು ಕಾಮಾಕ್ಷಿ. ತವರೂರಿನವರನ್ನು ಕಂಡರೆ ಎಲ್ಲ ಸ್ತ್ರೀಯರಿಗೂ ಸಂತೋಷವಾಗುತ್ತದೆ; ಅವರು ಪೂರ್ತಿಯಾಗಿ ಅಪರಿಚಿತರಾಗಿದ್ದರೂ ಸರಿಯೆ.

" ನನ್ನ ಹೈಸ್ಕೂಲ್ ಶಿಕ್ಷಣವೆಲ್ಲಾ ಹುಬ್ಬಳ್ಳಿಯಲ್ಲೇ ಆಯ್ತು, ಅಲ್ಲಿ ಅನೇಕರ ಪರಿಚಯವೂ ಉಂಟು. ಯಾರೋ ಪ್ರಸಿದ್ಧ ವ್ಯಾಪಾರಸ್ಥರ ಮನೆಯವರಿರಬೇಕು ನೀವು ? "

" ಎಳ್ಳಂಗಡಿ ಸೆಟ್ಟರು ಅಂತದಾರಲ್ಲ ? ಅವರು ನಮ್ಮ ಅಣ್ಣ ಆಗಬೇಕು."

ಎಳ್ಳಂಗಡಿ ಸೆಟ್ಟರೊ ! ಕಳ್ಳಂಗಡಿ ಸೆಟ್ಟರೊ ! ನಾನು ಅವರ ಹೆಸರೂ ಕೇಳಿರಲಿಲ್ಲ. ನಾನು ಹುಬ್ಬಳ್ಳಿಯಲ್ಲಿ ಓದಿದ್ದುದೂ ದೊಡ್ಡ ಸುಳ್ಳಾಗಿತ್ತು. ಆದರೂ ಆ ಹೆಣ್ಣಿನ ವಿಶ್ವಾಸ ಸಂಪಾದಿಸಲು ಅಂಥ ಸುಳ್ಳಿನ ಹಾದಿಯಲ್ಲಿಯೇ ಮುನ್ನಡೆಯುವುದು ಅಗತ್ಯವಾಗಿತ್ತು.

" ಎಳ್ಳಂಗಡಿ ಸೆಟ್ಟರೇ? ದೊಡ್ಡ ಶ್ರೀಮಂತರು ! ಅವರ ಪರಿಚಯವಿಲ್ಲ—ಆದರೂ ಎಷ್ಟೋ ಬಾರಿ ನೋಡಿದೀನಿ. ಹುಬ್ಬಳ್ಳಿಯಲ್ಲೆಲ್ಲಾ ಬಹಳ ಗೌರವವಿದೆ ಅವರ ಬಗ್ಗೆ ! "

ಕಾಮಾಕ್ಷಿ ದೀರ್ಘವಾದ ಉಸಿರೊಂದನ್ನು ಬಿಟ್ಟಳು.

"ಏನಿದ್ದರೂ ನಾ ಮಾತ್ರ ಅವರಿಗೆರವಾದೆ. ನನ್ನ ದೈವವೇ ನೆಟ್ಟಗಿರದಿದ್ದರೆ ಯಾರೇನು ಮಾಡಬೇಕು ? ಅತ್ಲೂ ಇಲ್ಲ, ಇತ್ಲೂ ಇಲ್ಲದಂತಾಯಿತು ನನ್ನ ಬಾಳ್ವೆ."

"ಯಾಕೆ ? ಏನಾಯ್ತು?" ಸಹಾನುಭೂತಿ ತುಂಬಿದ ಧ್ವನಿಯಲ್ಲಿ ನಾನು ವಿಚಾರಿಸಿದೆ.

"ನಮ್ಮ ತಂದೆಗೆ ನಾನೊಬ್ಬಳೇ ಮಗಳು. ಅಣ್ಣನಿಗೆ ನಾನೊಬ್ಬಳೇ ತಂಗಿ ಅಪ್ಪ ಇರುವವರೆಗೂ ವರ್ಷಕ್ಕೆ ನಾಲ್ಕೈದು ಸಲ ಬಂದು ನೋಡಿಕೊಂಡು ಹೋಗ್ತಿದ್ದರು. ನಾನೂ ತವರು ಮನೆಗೆ ಹೋಗಿಬರ್ತಿದ್ದೆ, ಅಪ್ಪ ತೀರಿಕೊಂಡಂದಿನಿಂದ ಅದೆಲ್ಲಾ ನಿಂತುಹೋಯ್ತು. ಅತ್ತಿಗೆಗೆ ನನ್ನ ಕಂಡರಾಗದು...." ಎಂದು ಹೇಳಿ ಮಾತನ್ನು ನಡುವೆಯೆ ತಡೆದು. ತುಟಿಗಳ ಮೇಲೆ ನಾಲಗೆ ಆಡಿಸಿ ಅವಳೆಂದಳು. "ಇದೆಲ್ಲಾ ನಾ ಹೇಳಬಾರದು. ಆದರೂ ಮನಸು ತಡೀಲಾರದೆ ಹೇಳಿಬಿಟ್ಟೆ.... ನೀವೇನು ತಿಳಕೊಂಡಿರೊ.... "

"ಏನಿಲ್ಲ. ನಿಮ್ಮ ಬಗ್ಗೆ ತುಂಬಾ ಸಂತಾಪವಾಗುತ್ತೆ।" ಎಂದು, ಅಚ್ಚ ಮೈಸೂರೀ ಶೈಲಿಯಲ್ಲಿ ಹೇಳಿದೆ.

ಕಾಮಾಕ್ಷಿಯ ಧ್ವನಿ ಗದ್ಗದಿತವಾಯಿತು. "ನಾನು ಬದುಕಿದ್ದೇನೋ ಸತ್ತಿದ್ದೇನೋ ಅಂತ ವಿಚಾರಿಸುವವರು ಕೂಡಾ ಯಾರೂ ಇಲ್ಲ ನೋಡಿರಿ. ತಿಂಗಳು ತಿಂಗಳೂ ಇವರಿಂದ ಖರ್ಚಿಗೆ ರೊಕ್ಕ ಸಿಗ್ತದ. ಊಟ ಉಡಿಗೆಯ ಚಿಂತೆ ಇಲ್ಲ. ಆದರೆ, ಹೆಣ್ಣು ಹೆಂಗಸಿಗೆ ಇಷ್ಟಾದರೆ ಸಾಕೇ ? "

"ಸಾಲದು. ಗಂಡಿನ ಜೊತೆ ಬೇಕೇ ಬೇಕು !" ಎಂದ ನಾನು ದಿಟ್ಟತನದಿಂದ ಹೇಳಿದೆ.

ಕಾಮಾಕ್ಷಿ ಲಜ್ಜಿತಳಾಗಿ ತಲೆ ಬಾಗಿಸಿದಳು. ಅವಳ ಬೆರಳುಗಳು ಸೆರಗಿನೊಡನೆ ಆಟವಾಡತೊಡಗಿದುವು.

"ಬಸೆಟ್ಟಿಯವರಂತೂ ಇನ್ನೊಂದು ಮದುವೆ ಮಾಡಿಕೊಂಡರು. ನೀವೇಕೆ ಪುನರ್ವಿವಾಹ ಮಾಡಿಕೊಳ್ಳಲಿಲ್ಲ ? "

"ಮಾಡಿಕೊಳ್ಳಲಿಲ್ಲ," ಎಂದು ಅವಳು ಉದಾಸವಾಣಿಯಲ್ಲಿ ಹೇಳಿದಳು.

"ಯಾಕೆ ? ಒಂಟಿಯಾಗಿರುವ ವಯಸ್ಸೇ ಇದು ? ತುಂಬು ತಾರುಣ್ಯ. ನಿಮಗೀಗ ಬಹಳವಾದರೆ ಮೂವತ್ತು ವರ್ಷ ಆಗಿರಬಹುದು ?"

ಕಾಮಾಕ್ಷಿಯ ಔದಾಸೀನ್ಯ ಮಾಯವಾದಂತಾಯಿತು. ಅವಳು ಕತ್ತೆತ್ತಿ ನನ್ನನ್ನು ಸಲುಗೆಯಿಂದ ದಿಟ್ಟಿಸುತ್ತ—

" ಸುಳ್ಳು ಹೇಳುವದರಲ್ಲಿ ತರಬೇತು ಆದೀರಿ ನೀವು ! " ಎಂದಳು.

" ನಾನೇನು ಸುಳ್ಳು ಹೇಳಿದೆ? ನಿಜವಾಗಿಯೂ ನೀವು ಈಗಲೂ ತರುಣಿಯಂತೆ ಕಾಣಸ್ತೀರಿ ! ಮಕ್ಕಳು?"

" ಇಲ್ಲರೀ, ಆ ಭಾಗ್ಯವೂ ಬರೆದಿಲ್ಲ ನನ್ನ ಹಣೆಯಲ್ಲಿ ! "

" ಈಗ ಇಲ್ಲವಾದರೆ ಮುಂದೆಯೂ ಇಲ್ಲ ಅಂತಲ್ಲ. ನೀವೇಕೆ ಮತ್ತೆ ಮದುವೆಯಾಗಬಾರದು ? ಈ ಜಗತ್ತಿನಲ್ಲಿ ಮನುಷ್ಯರೂಪದಲ್ಲಿ ಬರೋದು ಅಪರೂಪ. ಎಲ್ಲರಂತೆ ಸುಖಪಡೋದು ಬಿಟ್ಟು ಆಯುಷ್ಯ ಏಕೆ ಹಾಳುಮಾಡಿಕೋಬೇಕು ? "

ಕಾಮಾಕ್ಷಿ ಕಿಲಕಿಲನೆ ನಗುತ್ತ ಹೇಳಿದಳು :

" ಒಳ್ಳೇ ತತ್ವಜ್ಞಾನಿಗಳ ಹಾಗೇ ಮಾತಾಡ್ತೀರಲ್ಲ ? "

" ಬದುಕಿರುವ ತನಕ ಸುಖಪಡುತ್ತಿರಬೇಕು. ಇದೇ ನನ್ನ ತತ್ವಜ್ಞಾನ. ನಿಮ್ಮದು ? "

" ನನಗೇನು ಗೊತ್ತು ! ನಾನೇನು ನಿಮ್ಮಂತೆ ತತ್ವಜ್ಞಾನಿಯಲ್ಲ ! " ಎಂದು ಅವಳು ಹೇಳಿದಳಾದರೂ " ನನ್ನದೂ ನಿಮ್ಮಂತೆಯೆ ! " ಎಂದು ಅವಳ ದೃಷ್ಟಿಯೇ ಸಾರುತ್ತಿತ್ತು. ನಾನು ಸ್ವಲ್ಪ ಕೈ ಮುಂದೆ ಮಾಡಿದ್ದರೆ ಸಾಕು, ಅವಳು ಸಂತೋಷದಿಂದ ನನ್ನ ತೋಳತೆಕ್ಕೆಯಲ್ಲಿ ಬಂದು ಬೀಳುತ್ತಿದ್ದಳು. ಅದರಲ್ಲೇನೂ ಸಂಶಯವಿರಲಿಲ್ಲ.

" ಎಲ್ಲಾ ತಯಾರಾಯ್ತು, ಬಾಯಿಸಾಹೇಬ್, " ಕೆಳಗಿನಿಂದ ಸೇವಕಿಯ ಧ್ವನಿ ಕೇಳಬಂದಿತು.

" ಏಳಿರಿ. ಮೊದಲು ಊಟ ಮುಗಿಸೂಣು, " ಎಂದಳು ಕಾಮಾಕ್ಷಿ.

" ಕೆಲಸದಾಕೆ ಏನೂ ತಿಳಿದುಕೊಳ್ಳೋಲ್ಲವೊ ? "

" ಅವಳು ಯಾತಕ್ಕೂ ತಲೆ ಓಡಿಸೂದಿಲ್ಲ. ಅಲ್ಲದೆ, ಅವಳಿಗೆ ಕಿವಿಯೂ

ಸರಿಯಾಗಿ ಕೇಳಿಸೂದಿಲ್ಲ. ನಾವು ಮಾತಾಡುವದೊಂದೂ ತಿಳಿಯೂದಿಲ್ಲ ಅವಳಿಗೆ. "

" ನಾನು ಯಾರು ಅಂತ ಕೇಳಲಿಲ್ಲೇನು ?"

" ನನ್ನ ಚಿಕ್ಕಪ್ಪನ ಮಗ, ಬೆಂಗಳೂರಿಂದ ಬಂದಾರ ಅಂತ ಹೇಳಿದೀನಿ. ಅವಳು ನಂಬುತಾಳ. "

ನನಗಾಗಿ ಸೇವಿಗೆ ಪಾಯಸ ಸಿದ್ಧವಾಗಿತ್ತು. ಅದರೊಡನೆ ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ಲಿಂಬೇಕಾಯಿ ಹೋಳು, ಬಟಾಟೆ ಪಲ್ಯ, ಕೊಬ್ಬರಿ ಚಟ್ನಿ ಎಲ್ಲವೂ ಭರ್ಜರಿಯಾಗಿತ್ತು. ಹಾಲು-ತುಪ್ಪ ಯಾವುದಕ್ಕೂ ಕೊರತೆಯಿರಲಿಲ್ಲ. ಅನೇಕ ದಿನಗಳಿಂದ, ಅಂದರೆ ನನ್ನ ತಾಯಿ ತೀರಿಕೊಂಡಂದಿನಿಂದ ಅಂಥ ಭಾರಿ ಊಟ ಉಂಡಿರಲಿಲ್ಲ. ಹೋಟಲಿನ ಸಪ್ಪೆ ಊಟ ತಿಂದು ತಿಂದು ಬೇಸರವಾಗಿ ಹೋಗಿತ್ತು. ಆ ಬೇಸರವೆಲ್ಲವನ್ನೂ ಒಂದು ಗಂಟೆಯಲ್ಲಿಯೇ ನಿವಾರಿಸುವಂತೆ ಕಾಮಾಕ್ಷಿ ಒತ್ತಾಯ ಮಾಡಿ ಮಾಡಿ ಊಟ ಮಾಡಿಸಿದಳು.

" ಇನ್ನಿಷ್ಟು ಶ್ಯಾವಿಗೆ ನೀಡೇ ಇವರಿಗೆ ! "

" ಸಾಕ್ರೀ. ಇಷ್ಟೆ ಸಾಕು. "

" ತಗೋರಿ. ಬೆಂಗಳೂರಾಗ ಇಂಥಾ ಶ್ಯಾವಿಗೆ ಎಲ್ಲಿ ಸಿಕ್ಕಾವು ? ಅಲ್ಲಿ ಸಿಗೂದಂದರೆ ಬರೀ ಅನ್ನ ...ಅನ್ನ ...ಅನ್ನ ...ಹುಳಿ ಸಾರು....ಅಲ್ಲಾ ? "

" ಹೌದು. ಇನ್ನೇನು ? " ಎಂದು ಹೇಳಿದೆ, ಬಸವನಂತೆ ಕೊರಳು ತೂಗುತ್ತ. ವಾಸ್ತವವಾಗಿ, ಬೆಂಗಳೂರಿನ ಊಟ ಹೇಗಿರುವುದೆಂಬುದರ ಕಲ್ಪನೆಯೂ ನನಗಿರಲಿಲ್ಲ. ಅಲ್ಲಿಗೆ ಹೋಗಿದ್ದರಲ್ಲವೆ ಗೊತ್ತಾಗುವುದು ?

" ಅರ್ಥಾತ್ – ನೀವು ನೋಡಿರಬೇಕಲ್ಲ, ಬೆಂಗಳೂರು ಮೈಸೂರು ಎಲ್ಲಾ ?" ಎಂದು ಕೇಳಿದೆ.

" ನಮ್ಮನ್ಯಾರು ಕರಕೊಂಡು ಹೋದಾರ್ರೀ ? "

" ಯಾಕೆ ? ಸೆಟ್ಟರು ಕರೆದೊಯ್ಯಲಿಲ್ಲೇನು ಒಮ್ಮೆಯೂ ? "

" ಅವರೇನು ಕರೆದೊಯ್ಯಾರ ? ಅವರಾಯ್ತು, ಅವರ ವ್ಯಾಪಾರ ಆಯ್ತು " ಎಂದು ಹೇಳುತ್ತಿದ್ದಂತೆ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಕಾಮಾಕ್ಷಿ ತಲೆ ತಗ್ಗಿಸಿ ಊಟ ಮಾಡತೊಡಗಿದಳು.

ಮಾತಿನ ಲಹರಿಯಲ್ಲಿ ಅವಳನ್ನೆಳೆದೊಯ್ದು ಬಸೆಟ್ಟಿಯ ವ್ಯವಹಾರದ ರಹಸ್ಯಗಳನ್ನರಿತುಕೊಳ್ಳುವುದೇ ನನ್ನ ಏಕಮಾತ್ರ ಉದ್ದೇಶವಾಗಿತ್ತು. ಎಂತಲೇ ಅವಳಿಗೆ ಉತ್ತೇಜನವೀಯುತ್ತ ನಾನೆಂದೆ :

" ವ್ಯವಹಾರ-ವ್ಯವಹಾರ ಅಂದರೆ ಅಂಥಾ ಭಾರಿ ವ್ಯವಹಾರ ಆದರೂ ಏನು ಮಾಡ್ತಾರೆ ಅವರು ? ಕೈಹಿಡಿದ ಹೆಂಡತಿಯನ್ನೂ ಮರೆಯುವಂಥಾ ವ್ಯವಹಾರ ಎಂಥಾದ್ದು ಅದು ? "

" ಅಂಥಾವೇ ಅವ—ಎಷ್ಟೋ. ಹೋಗಲಿ ಬಿಡ್ರಿ. ಅವರು ಏನಾರೆ ಮಾಡಿಕೊಳ್ಳಲಿ, " ಎಂದಿಷ್ಟೆ ನುಡಿದು ಅವಳು ಕೈ ತೊಳೆದುಕೊಂಡಳು.

ಈ ವಿಚಾರದಲ್ಲಿ ಅವಸರ ಮಾಡುವುದು ಉಪಯುಕ್ತವಲ್ಲವೆಂದು ಬಗೆದು ನಾನೂ ಸುಮ್ಮನಾದೆ. ಮೊದಲು ಅವಳ ವಿಶ್ವಾಸ ಸಂಪಾದಿಸುವುದು—ಅನಂತರ ಅವಳ ಬಾಯಿ ಮುಚ್ಚುವುದೇನೂ ದೊಡ್ಡ ವಿಷಯವಲ್ಲ—ಎಂದುಕೊಂಡೆ.

ಮತ್ತೆ ಅವಳ ಬೆಡ್‌ರೂಮಿಗೆ ಬಂದುದಾಯಿತು. ಎಲೆ-ಅಡಕೆ-ಏಲಕ್ಕಿ-ಲವಂಗ ಮೆಲ್ಲುತ್ತಾ ಒಂದು ಸಿಗರೇಟು ಹೊತ್ತಿಸಿ ಅವಳತ್ತ ನೋಡಿದೆ. ಮಂಚದ ಮೇಲೆ ಕುಳಿತುಕೊಂಡು ಅವಳೂ ತಾಂಬೂಲ ಮೆಲ್ಲುತ್ತಿದ್ದಳು.

" ಇಂಟರ್‌ವ್ಯೂ ಷುರು ಮಾಡಲೇ ? " ಎಂದೆ ನಾನು.

" ಆಗಲೇ ಹೇಳಿದೆನಲ್ಲ ಅವರ ಬಗ್ಗೆ ನಾನೇನೂ ಹೇಳಲಾರೆ ಅಂತ. ಒತ್ತಾಯ ಮಾಡಬೇಡಿರಿ. "

" ನಾನು ಬಂದದ್ದೇ ಆದಕ್ಕಾಗಿ. ಇಂದು ರಾತ್ರಿಯೇ ಲೇಖನ ಬರೆಯುವ ದಿತ್ತು... "

"ಎಲ್ಲಾ ಸುಳ್ಳು. ಇಂಥಾ ವೇಳೆಯಲ್ಲಿ ಯಾರಾದರೂ ಬರೀತಾರೇನು?"

" ಪತ್ರಿಕೋದ್ಯೋಗಿಗಳ ವಿಷಯ ನಿಮಗೇನು ಗೊತ್ತಾದೀತು ? ನಾವು ಬರೆಯುವದೇ ರಾತ್ರಿಯಲ್ಲಿ...."

" ಬಲ್ಲೆ...ಬಲ್ಲೆ.... ! " ಎಂದು ಅವಳು ಅಣಕಿಸಿದಳು.

" ಏನು ಬಲ್ಲಿರಿ ? " ಎನ್ನುತ್ತ ನಾನು ಎದ್ದು ಮಂಚದ ಬಳಿ ಹೋಗಿ ಅವಳ ಸಮೀಪದಲ್ಲಿ ಕುಳಿತುಕೊಂಡೆ, ಅವಳ ತಲೆಯ ಮೇಲೆ ಕೈಯಾಡಿಸುತ್ತ ಅವಳನ್ನು ಉದ್ರೇಕಿಸಲು ಪ್ರಯತ್ನಿಸಿದೆ. ಆದರೆ ನಿಜವಾಗಿ ಅಂಥ ಪ್ರಯ

ತ್ರದ ಅಗತ್ಯವೇನೂ ಇರಲಿಲ್ಲ. ಅಂಥ ಸಂದರ್ಭಕ್ಕಾಗಿಯೆ ಕಾದಿದ್ದಂತೆ ಅವಳು ತನ್ನ ತಲೆಯನ್ನು ನನ್ನ ಎದೆಯ ಮೇಲಿಟ್ಟಳು : ಅನಂತರ ಕೇಳಿದಳು :

" ನೀವು ಎಂದಾರೆ ಜೇಲು ಕಂಡೀರೇನು ? "

" ಇಲ್ಲವಲ್ಲ. ಯಾಕೆ ? "

" ನಾ ಮಾತ್ರ ಮೂರು ವರ್ಷದಿಂದ ಜೇಲಿನಲ್ಲೇ ಇದೀನಿ ನೋಡ್ರಿ. ಎಲ್ಲಿಗೂ ಹೋಗುವಂತಿಲ್ಲ. ಯಾರನ್ನೂ ಭೆಟ್ಟಿಯಾಗುವಂತಿಲ್ಲ. ಇಲ್ಲಿಗೂ ಯಾರೂ ಬರುವಂತಿಲ್ಲ... "

" ಅದ್ಯಾಕೆ ? ನೀವ್ಯಾಕೆ ಹೀಗೆ ಈ ಬಂಗಲೆಯಲ್ಲಿಯೇ ಕೊಳೆಯಬೇಕು? ಸೆಟ್ಟರಂತೂ ನಿಮ್ಮನ್ನ ಬಿಟ್ಟುಬಿಟ್ಟಿದಾರಂತ ಕೇಳೀನಿ. ಮತ್ತೆ ಇಂಥಾ ನಿರ್ಬಂಧ ಯಾಕೆ ? "

" ಯಾಕೆ ? ಯಾಕೆ ಅಂದರೇನು ಹೇಳೂದು ?... ಹುಂ.... ಹೋಗಲಿ ಅದು.... "

" ಊಹೂಂ...ಇದೆಲ್ಲಾ ಸರಿಯಲ್ಲ ಕಾಮಾಕ್ಷಿ, ಹೀಗೆ ಇನ್ನೂ ಕೆಲ ದಿವಸ ನೀವಿದ್ದರೆ ನಿಮಗೆ ಹುಚ್ಚು ಹಿಡೀಬಹುದು. ಹೊರಗೆ ಹೋಗಬೇಕು, ತಿರುಗಾಡ ಬೇಕು, ಸಿನಿಮಾ ನಾಟಕ ನೋಡಬೇಕು. ನಾನೂ ಇಲ್ಲಿ ಒಬ್ಬೊಂಟಿಗ. ಯಾರದೂ ಪರಿಚಯವಿಲ್ಲ. ನಾಳೆ ಸಿನಿಮಾಕ್ಕೆ ಹೋಗೋಣ, ಬರ್ತೀರಾ ? "

" ಎಲ್ಲಿಯ ಸಿನಿಮಾ? ಏನು ಕಥೆ ? ನಾ ಹೊರಗ ಬರೂದೇ ಶಕ್ಯ ಇಲ್ಲ."

" ಯಾಕೆ ? ನೀವ್ಯಾಕೆ ಅಂಜುತೀರಿ ? ಕಾಮಾಕ್ಷಿ, ಇದು ಸ್ವತಂತ್ರ ದೇಶ. ನೀವೂ ಸ್ವತಂತ್ರರಿದೀರಿ. ನಿಮ್ಮ ಇಷ್ಟ ಬಂದಂತೆ ನೀವು ಮಾಡಬಹುದಲ್ಲ?"

" ಊಹೂಂ. ಅದೆಲ್ಲಾ ಶಕ್ಯವೇ ಇಲ್ಲ....ನಾನೊಬ್ಬ ಕೈದೀ. ಕಾಯಂ ಕೈದೀ.... " ಎಂದು ಹೇಳುತ್ತ ಅವಳು ಬಿಕ್ಕಳಿಸತೊಡಗಿದಳು.

ಅವಳ ಕಂಬನಿಗಳನ್ನು ತೊಡೆಯುತ್ತ, ಬೆನ್ನ ಮೇಲೆ ಮೆಲ್ಲನೆ ಕೈಯಾಡಿ ಸುತ್ತ ನಾನು ಸಂತವಿಸುವ ಸ್ವರದಲ್ಲಿ ಹೇಳಿದೆ :

" ಅಳಬೇಡಿರಿ ಕಾಮಾಕ್ಷಿ, ಅಳಬೇಡಿರಿ. ಈ ಜೇಲಿನಿಂದ ನಾ ನಿಮ್ಮನ್ನ ಬಿಡುಗಡೆ ಮಾಡ್ತೀನಿ. ದೂರ ದೂರ ಎಲ್ಲಿಗಾದರೂ ಹೋಗೋಣ ನಾವಿಬ್ಬರೂ.... "

"ಅದು ಶಕ್ಯವಾದರೆಷ್ಟು ಚಲೋ ಆದೀತು! ಆದರೆ....ಆದರೆ....ಸೆಟ್ಟರು ಹ್ಯಾಗಿದಾರನ್ನೂದು ನಿಮಗ್ಗೊತ್ತಿಲ್ಲ...ಅಂತೂ ನಾನು ಈ ಸೆರೆಮನೆಯಿಂದ ಪಾರಾಗೂದೇ ಸಾಧ್ಯವಿಲ್ಲ...."

"ನಿಮ್ಮ ಸೆಟ್ಟರೆಂದರೆ ಒಬ್ಬ ಸರ್ವಾಧಿಕಾರಿಯೋ ಏನು? ನಿಮ್ಮನ್ನ ಬಂಧನದಲ್ಲಿಡಲು ಅವರಿಗೇನು ಅಧಿಕಾರ? ಈ ಊರಲ್ಲಿ ಕೋರ್ಟಿಲ್ಲವೇನು? ಪೋಲೀಸರಿಲ್ಲವೇನು?"

"ಪೋಲೀಸರು ...ಅವರೂ ಅಂಜುತಾರ ಸೆಟ್ಟರಿಗೆ...."

"ಅಂದರೇನು? ಸರಕಾರ ಇದ್ದೂ ಇಲ್ಲದಂತಾಯ್ತಲ್ಲ? ಈಗಿಂದೀಗ ನಾನು ಬೆಂಗಳೂರಿಗೆ ಫೋನು ಮಾಡಿ ಗೃಹಮಂತ್ರಿಗಳಿಗೆ ಕಂಪ್ಲೇಂಟ್ ಕೊಡು ತೀನಿ, ಆಯಿತೇ?"

"ಯಾರಿಗೆ ಕಂಪ್ಲೇಂಟ್ ಕೊಟ್ಟರೂ ಏನೂ ಉಪಯೋಗ ಇಲ್ಲ... ವ್ಯರ್ಥ....ಎಲ್ಲಾ ವ್ಯರ್ಥ...." ಎನ್ನುತ್ತ ಅವಳು ನನ್ನನ್ನು ತಬ್ಬಿಕೊಂಡಳು. "ಸೆಟ್ಟರ ವಿರುದ್ಧ ನೀವು ಏನೂ ಮಾಡಲಿಕ್ಕೆ ಹೋಗಬೇಡಿರಿ. ನಿಮ್ಮ ಜೀವವೂ ಉಳೀಲಿಕ್ಕಿಲ್ಲ"

"ಹಾಗಾದರೆ ಅವನೊಬ್ಬ ದೊಡ್ಡ ಗುಂಡಾನೇ ಇದ್ದಂತಾಯ್ತಲ್ಲ?"

"ಗುಂಡಾ ಅಷ್ಟೇ ಅಲ್ಲ– ಗುಂಡಾಗಳ ರಾಜಾ ಅನ್ನಬಹುದು. ಪುಂಡರು ಪೋಕರಿಗಳು- ಕೊಲೆಗಡುಕರು ಎಲ್ಲಾ ಅವರ ಕೈಯಾಗಿದಾರ. ಅವರ ವಿರುದ್ಧ ಧ್ವನಿಯೆತ್ತಿದವರ ತಲೀನೇ ಉಳಿಯೂದಿಲ್ಲ ."

ನಾನು ಒಳಗೊಳಗೇ ಹರ್ಷಿಸುತ್ತ ಅವಳನ್ನು ಬಿಗಿಯಾಗಿ ಅಪ್ಪಿಕೊಂಡೆ. ನಾನು ಅಪೇಕ್ಷಿಸಿದ್ದ ಮಾತುಗಳೆಲ್ಲ ಒಂದೊಂದಾಗಿ ಹೊರಬರುತ್ತಿದ್ದುವು ಕಾಮಾಕ್ಷಿಯ ಮುಖದಿಂದ. ಇವಳನ್ನು ಬೆಂಗಳೂರಿಗೆ ಕರೆದೊಯ್ದು ಸದಾಶಿವಪ್ಪ ನವರೆದುರು ನಿಲ್ಲಿಸಿ ಈ ಮಾತುಗಳನ್ನು ಹೇಳಿಸಿದರೆ ಸಾಕು....ಬಸೆಟ್ಟಿಯ ಭವಿ ತವ್ಯವೆಲ್ಲ ಮಣ್ಣುಪಾಲಾಗುವುದು ಖಂಡಿತವೆಂದೇ ನನಗನ್ನಿಸಿತು.

ಬಸೆಟ್ಟಿಯ ಮೊದಲ ಪತ್ನಿಯನ್ನು ತಬ್ಬಿಕೊಂಡು ಕುಳಿತಿದ್ದಂತೆ ನನ್ನ ಎದೆಯಲ್ಲಿ ಕುದಿಯುತ್ತಿದ್ದ ಸೇಡಿನ ಭಾವನೆಯೂ ಕೃತಕೃತ್ಯವಾದಂತೆ ತೋರಿ ಅಪಾರವಾದ ಆನಂದವೂ ತೃಪ್ತಿಯೂ ಉಕ್ಕಿಬರುತ್ತಿತ್ತು. ಈ ವಿಷಯ

ಗೊತ್ತಾದಾಗ ಸೆಟ್ಟಿಗೆ ಎಷ್ಟು ಸಂತಾಪವಾಗಬಹುದು ? ಎಷ್ಟು ತಳಮಳವಾಗ ಬಹುದು ? ಎಂದೆಲ್ಲ ಯೋಚಿಸುತ್ತ ಕಾಮಾಕ್ಷಿಯನ್ನು ಸ್ವರ್ಗಸುಖದ ಹಾದಿ ಯಲ್ಲಿ ಕೊಂಡೊಯ್ಯತೊಡಗಿದೆ.

ಆ ಸ್ವರ್ಗದ ತುಟ್ಟ ತುದಿಯಲ್ಲಿ ಜೀಕವಾಡುತ್ತ ಅವಳೆಂದಳು :

" ಇಷ್ಟು ದಿವಸ ನನಗೇಕೆ ನೀವು ಭೆಟ್ಟಿಯಾಗಲಿಲ್ಲ ವಿಶ್ವನಾಥ ?"

" ಭೆಟ್ಟಿಯಾಗೂದಾದರೂ ಹ್ಯಾಗೆ ಕಾಮಾಕ್ಷಿ ? ನಾನಿಲ್ಲಿದ್ದರಲ್ಲೇನು ?"

" ಸುಳ್ಳು. ನೀವು ಇಲ್ಲೇ ಇದ್ದಿರಿ. ಬೆಂಗಳೂರು–ಪೇಪರು–ಗೀಪರು ಎಲ್ಲಾ ಸುಳ್ಳು .." ಎನ್ನುತ್ತ ಅವಳು ಧಟ್ಟನೆ ಎದ್ದು ಕುಳಿತಳು. " ಯಾರಿ ಗ್ಗೊತ್ತು ! ನಿಮ್ಮನ್ನ ಅವರೇ ಕಳಿಸಿರಬೇಕು...."

" ಅವರು ? " ಎಂದು ನಾನು ತೊದಲಿದೆ, ದಿಗಿಲುಗೊಂಡು.

" ಅವರೇ ಕಳಿಸಿರಬೇಕು. ನನ್ನನ್ನ ಈ ಜಗತ್ತಿನಿಂದಲೇ ದೂರಮಾಡೂ ದಕ್ಕ ಇದೊಂದು ತಂತ್ರ....ನೀವೂ ಅವರ ಹಸ್ತಕರು....ಎಷ್ಟು ರೂಪಾಯಿ ಕೊಟ್ಟಾರ ನಿಮಗವರು ಇದಕ್ಕಾಗಿ ? "

ಅವಳ ತೋಳುಗಳನ್ನು ಹಿಡಿದೆಳೆದು, ಮಂಚದ ಮೇಲೆ ಕೂಡ್ರಿಸುತ್ತ ನಾನೆಂದೆ :

" ಹುಚ್ಚಿಯಂತೆ ಮಾಡಬೇಡ ಕಾಮಾಕ್ಷಿ. ನಾನು ಅಂಥಾ ನೀಚನಲ್ಲ. ನಿಮ್ಮ ಸೆಟ್ಟರೊಡನೆ ಹೆಚ್ಚು ಪರಿಚಯವೂ ನನಗಿಲ್ಲ. ನಿಜವಾಗಿ ನಾನಿಲ್ಲಿ ಬಂದದ್ದು ನಿನ್ನಿಂದ ಮಾಹಿತಿ ಪಡೆಯೂದಕ್ಕಾಗಿಯೆ. ನಂಬುವಿಯೋ ಇಲ್ಲೋ ?"

" ಗಂಡಸರನ್ನ ನಂಬೂದೇ ಕಷ್ಟ... " ಎಂದಳು ಕಾಮಾಕ್ಷಿ, ಥರಥರನೆ ನಡುಗುತ್ತ.

ಅವಳ ಶರೀರದ ಸುತ್ತ ತೋಳು ಚಾಚಿ ಅವಳನ್ನು ಸಂತೈಸಲು ಯತ್ನಿ ಸುತ್ತ ನಾನೆಂದೆ :

" ಕಾಮಾಕ್ಷಿ, ಇಷ್ಟ್ಯಾಕೆ ಅಂಜುತ್ತೀ ಅವನಿಗೆ? ನಿನ್ನ ಕೊಲೆ ಮಾಡಿಸುವ ದಕ್ಕಾದರೂ ಅವನ್ಯಾಕೆ ಯತ್ನಿಸಬೇಕು ? ಅವನಂತೂ ಇನ್ನೊಬ್ಬಳನ್ನು ಮಾಡಿ ಕೊಂಡಿದಾನಲ್ಲ ? "

" ತಿಂಗಳು ತಿಂಗಳೂ ನನ್ನ ಖರ್ಚಿಗೆ ಕೊಡಬೇಕಾಗ್ತದಲ್ಲ ? ಕೊಟ್ಟು ಬೇಸರ ಬಂದಿರಬೇಕು. ಅದಕ್ಕೇ . "

" ಅದಕ್ಕೇ— ಒಮ್ಮೆ ನಿನ್ನ ತೀರಿಸಿಬಿಟ್ಟರೆ ಹಣ ಕೊಡುವ ತೊಂದರೆ ತಪ್ತದ ಅಂತಲೋ ? "

" ಹೂಂ. "

" ಹಾಗೇನಾದರೂ ಇದ್ದರೆ ನಾನೇ ಅವನ್ನ ಕೇಳಿಬಿಡಲೇ ? "

" ಅವ ಭಯಂಕರ ಇದಾನಂತ ಆಗಲೇ ಹೇಳಿದೀನಿ. "

" ಭಯಂಕರ ಅಂದರೆ.... ನನ್ನೇನು ನುಂಗಿಬಿಡ್ತಾನೇನವ ? "

" ನಿಮಗೊತ್ತಿಲ್ಲ ಅವ ಎಂಥಾವ ಅನ್ನೂದು. ಅದಕ್ಕೇ ಹೀಗಾಡ್ತೀರಿ."

" ನನಗೇನೂ ತಿಳಿಯದಂತಾಗಿದೆ ಕಾಮಾಕ್ಷಿ ಅಲ್ಲ, ನಿನ್ನಂಥಾ ಸುಂದರಿಯನ್ನ ಬಿಟ್ಟು ಅವನ್ಯಾಕೆ ಎರಡನೆಯ ಮದುವೆ ಮಾಡಿಕೊಂಡ ಅಂತೀನಿ ... "

" ಯಾಕೆಂದರೆ— ನನ್ನಿಂದ ಮಕ್ಕಳಾಗಲಿಲ್ಲ.... ಅಲ್ಲದೆ.... ನನ್ನ ಶರೀರ ಹೀಗೆ ಉಬ್ಬಿಕೊಂಡಿತು.... ಹತ್ತು ಹನ್ನೆರಡು ವರ್ಷಗಳ ಹಿಂದೆ ನಾನು ಹೀಗಿರಲಿಲ್ಲ. ತೆಳ್ಳಗೆ ಸಿನಿಮಾನಟಿಯ ಹಾಗಿದ್ದೆ.... ತಿನ್ನುಣ್ಣುವದಕ್ಕೆ ಕೊರತೆಯಿರಲಿಲ್ಲ. ತಿಂದು ತಿಂದು ಕೂತು ಕೂತು ಬೊಜ್ಜು ಬೆಳೀತು. ಅವನ ಲಕ್ಷ್ಯ ಬೇರೆ ಕಡೆ ಹೊರಳಿತು.... ಛೆ... ಛೆ.... ನಾನು ಇದೆಲ್ಲಾ ಹೇಳಬಾರದು. ಹೇಳಬಾರದು.... ಅವಗೆ ಗೊತ್ತಾದರೆ ... "

" ಹ್ಯಾಗೆ ಗೊತ್ತಾಗ್ತದೆ ? "

" ಹ್ಯಾಗೋ ! ಊರಲ್ಲೆಲ್ಲಾ ಅವನ ಸಿ. ಐ. ಡಿ. ಗಳಿದಾರ ವಿಶ್ವನಾಥ. ಇನ್ನೂ ಕತ್ತಲೆಯಿದ್ದಾಗಲೇ ನೀವು ಇಲ್ಲಿಂದ ಹೋಗಿಬಿಡೂದು ಉತ್ತಮ. ಅವಗೆ ಗೊತ್ತಾದರೆ ನಾನೂ ಉಳಿಯೂದಿಲ್ಲ.... ನೀವೂ ಉಳಿಯೂದಿಲ್ಲ..."

" ಇದೊಳ್ಳೇ ಪೀಕಲಾಟ ! ನಾಳೆಯೋ ಇದಕ್ಕೇನಾದರೂ ಮಾಡತೀನಿ. ನೀನು ಅಂಜಬೇಡ ! " ಎಂದು ಅವಳನ್ನು ಆ ಕ್ಷಣದ ಮಟ್ಟಿಗಾದರೂ ಸಮಾಧಾನಗೊಳಿಸಿದೆ.

೫

ಬೆಳಗಿನ ಐದು ಗಂಟೆಗೇ ಕಾಮಾಕ್ಷಿ ನನ್ನನ್ನೆಬ್ಬಿಸಿದಳು. ಅಷ್ಟು ಬೇಗ ನಾನೆಂದೂ ಎದ್ದವನಲ್ಲ. ಮಧ್ಯರಾತ್ರಿಯ ವರೆಗೂ ಅವಳೊಡನೆ ಸರಸವಾಡುತ್ತ ನಿದ್ರೆಗೆಟ್ಟಿದ್ದೆನಾದುದರಿಂದ ಆ ದಿನವಂತೂ ನಾನು ಒಂಬತ್ತು-ಹತ್ತು ಗಂಟೆಗೆ ಏಳುವವನಿದ್ದೆ. ಆದರೂ ಆಕೆ ನನ್ನನ್ನು ಮಲಗಲು ಬಿಡದೆ, ಮತ್ತೆಮತ್ತೆ ಒತ್ತಾಯ ಮಾಡಿ ಎಬ್ಬಿಸಿದಳು. ಅಷ್ಟರೊಳಗಾಗಿ ಸೇವಕಿಯೂ ಎದ್ದು ಕಾಫಿ ತಯಾರಿಸಿದ್ದಳು. ಅದನ್ನು ಕುಡಿದು ಒಂದು ಸಿಗರೇಟು ಹೊತ್ತಿಸಿದಾಗ ನಿದ್ರೆಯ ಗುಂಗು ಕೊಂಚ ದೂರವಾದಂತಾಯಿತು.

" ಬೆಳಕಾಗ್ತಾ ಬಂತು. ನೀವು ಆದಷ್ಟು ಲಗೂ ಇಲ್ಲಿಂದ ಹೊರಡಬೇಕು. ಮತ್ತೆ ಬರ್ತೀರಲ್ಲ ರಾತ್ರೆ ? " ಎಂದಳು ಕಾಮಾಕ್ಷಿ.

" ಆ ಸೆಟ್ಟಿಯನ್ನ ತೀರಿಸಿದ ಮೇಲೇ ಬರೂದು ಇಲ್ಲಿ. ಸುಮ್ಮನೆ ನನಗೂ ತೊಂದರೆ. ನಿನಗೂ ತೊಂದರೆ. "

" ನನಗೇನು ತೊಂದರೆ ? ನಾವು ಸ್ವಲ್ಪ ಎಚ್ಚರಿಕೆಯಿಂದಿದ್ದರಾಯ್ತು. ಅದಕ್ಕಾಗೇ ಇಷ್ಟು ಲಗೂ ಎಬ್ಬಿಸಿದೆ. ಸಿಟ್ಟಾಗಬೇಡಿರಿ. "

" ಸಿಟ್ಟು ನಿನ್ನ ಮೇಲಲ್ಲ— ಆ ಸೆಟ್ಟಿಯ ಮೇಲೆ. ಇವತ್ತು ನೋಡಿ ಕೋತೀನಿ ಅವನ್ನ ! "

" ಅವರ ತಂಟೆಗೆ ಹೋಗದಿರೋದೇ ಒಳ್ಳೇದು. "

" ನಾನೇನು ಅಂಥಾ ಹೇಡಿಯಲ್ಲ ಕಾಮಾಕ್ಷಿ. ಒಂದು ಕೈ ನೋಡೇ ಬಿಡ್ತೇನಿ. ಬರಲೇ ? ಬೈ ! ಬೈ ! " ಎಂದು ಹೇಳಿ ಅವಳನ್ನೊಮ್ಮೆ ಮುದ್ದಿಸಿ ಬಂಗಲೆಯಿಂದ ಹೊರಗೆ ಬಂದೆ. ಸುತ್ತಮುತ್ತ ಯಾರ ಸುಳುವೂ ಇರಲಿಲ್ಲ. ಫಳ

ಗಿದ ಸಿ.ಐ.ಡಿ. ಗಳೂ ಸಹ ಇಂಥ ಸಮಯದಲ್ಲಿ ಹಾಸಿಗೆ ಬಿಟ್ಟು ಹೊರಬೀಳುವ ದಿಲ್ಲವೆಂದುಕೊಳ್ಳುತ್ತ ನಗರದತ್ತ ಸಾಗಿದೆ.

ನಾನು ಊಹಿಸಿದ್ದ ಮೇರೆಗೆ ರಾಧೆಯಿನ್ನೂ ಮಲಗಿಕೊಂಡೇ ಇದ್ದಳು. ಒಂದೆರಡು ಬಾರಿ ಕೂಗಿದ ತರುವಾಯ ಅವಳು ಕಣ್ಣುಜ್ಜಿಕೊಳ್ಳುತ್ತ ಬಂದು ಬಾಗಿಲು ತೆರೆದಳು.

" ನೀವೇ ? ಈಗ ಬಂದಿರೇನು ? ಇಷ್ಟೊತ್ತು ಎಲ್ಲಿ ಹೋಗಿದ್ದಿರಿ ? "

" ಸ್ವರ್ಗಕ್ಕೆ. "

" ಸ್ವರ್ಗಕ್ಕೆ? ಕುಡುಕರ ಸ್ವರ್ಗಕ್ಕಿರಬೇಕು. ಯಾವ ಓಣಿಯೊಳಗ ಯಾವ ಗಟಾರದಾಗ ಬಿದ್ದುಕೊಂಡಿದ್ದಿರಿ?" ಎಂದು ಕೇಳುತ್ತಿದ್ದಂತೆ ನನ್ನ ಬಟ್ಟೆಗಳನ್ನು ದಿಟ್ಟಿಸುತ್ತ ಅವಳೆಂದಳು : " ಅರಿವೆ ಅಂತೂ ಹೊಲಸಾಗಿಲ್ಲ. ಅಂದಮ್ಯಾಲ ನೀವು ಗಟಾರದ ಸಂಗ ಮಾಡಿದಂಗ ಕಾಣೂದಿಲ್ಲ. "

" ಸುರಸುಂದರಿಯೊಬ್ಬಳ ಸಂಗಡ ಸ್ವರ್ಗಕ್ಕೆ ಹೋಗಿಬಂದೆ, " ಎನ್ನುತ್ತ ನಾನು ಹಾಸಿಗೆಯ ಮೇಲೆ ಬಿದ್ದುಕೊಂಡೆ.

" ನಿಮ್ಮ ಸುರಸುಂದರಿಯೊ ! ನೀವೊ ! ದೊಡ್ಡ ಬುರುಡೆ ಎಲ್ಲಾ ! ಸೋಮಯ್ಯ ಭೆಟ್ಟಿಯಾಗಿದ್ದಂತ ಕಾಣತೈತಿ ! "

" ಸೋಮಯ್ಯ ? "

" ಒಂಭತ್ತು ಹತ್ತರ ಸುಮಾರಿಗೆ ಇಲ್ಲಿ ಬಂದಿದ್ದ. ನನ್ನನ್ನೂ ಕೇಳಿದ. ನನಗೆ ಗೊತ್ತಿದ್ದರೂ ಹೇಳ್ತಿರಲಿಲ್ಲ ಅನ್ನಿರಿ. ಮನಸೇಚ್ಛೆ ಬಯ್ದು ಹೊರಟು ಹೋದ. ಆಮ್ಯಾಲ ಎಲ್ಲೋ ಸಿಕ್ಕಿರಬೇಕು ನೀವು ಅವನ ಕೈಯಾಗ. "

" ಇಲ್ಲ ರಾಧಾ. ನಿಜವಾಗಿ ನಾನು ಸ್ವರ್ಗಕ್ಕೇ ಹೋಗಿದ್ದೆ. ರಾತ್ರಿಯೆಲ್ಲಾ ನಿದ್ರೆಯೂ ಇಲ್ಲ. ಸ್ವಲ್ಪ ಚಾ ಮಾಡ್ತೀಯಾ ?

ಒಲೆಯಲ್ಲಿ ಉರಿ ಹೊತ್ತಿಸುತ್ತ ಅವಳು ಕೇಳಿದಳು :

" ನೀವು ಹೇಳೂದು ಕೇಳಿದರ ಮತ್ತೇನೋ ನಡಸೀರಿ ಅಂತನಿಸುತ್ತೈತಿ. ಆ ಸೋಮ್ಯಾನೂ ಅದೇ ಕೇಳತಿದ್ದ — ಸದ್ಯಾ ಏನ ನಡಸ್ಯಾನ ಅಂತ. "

" ಅವರಪ್ಪನಿಗೂ ತಿಳಿಯೂ ಹಂಗಿಲ್ಲ ಅದು ! "

" ಅವ್ವಯ್ಯ ! ಅಂಥಾದ್ದೇನ ನಡಸೀರಿ ಅಷ್ಟು ಗುಟ್ಟಿಂದು ? ನನಗೂ ಹೇಳೂದಿಲ್ಲಾ ? "

" ಸಮಯ ಬಂದಾಗ ಹೇಳತೀನಂತೆ ರಾಧಾ. ಹೆಂಗಸರ ಬಾಯಾಗ ಮಾತು ಉಳಿಯೂದಿಲ್ಲ. ಸುಮ್ಮನೆ ಒಟಒಟ ಮಾಡಬ್ಯಾಡ ! "

" ಅಂತೂ ನಿಮಗಿನ್ನೂ ನನ್ನ ಮ್ಯಾಲ ನಂಬಿಕೆ ಬರಲಿಲ್ಲ. ಆತು. ನಿಮ್ಮ ಗುಟ್ಟು ನೀವೇ ಇಟ್ಟುಕೊಂಡು ಅರಾಮ ಇರ್ರಿ, " ಎಂದು ನೊಂದ ಧ್ವನಿಯಲ್ಲಿ ನುಡಿದು ಅವಳು ಚಹ ಮಾಡತೊಡಗಿದಳು.

ವಿನಾಕಾರಣ ಅವಳ ಮನಸ್ಸು ನೋಯಿಸುವ ಇಚ್ಛೆ ನನಗಿರಲಿಲ್ಲ. ಎಂತಲೇ ಅವಳನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳುತ್ತ ನಾನು ಹೇಳಿದೆ :

" ಸ್ವಲ್ಪಾದರೂ ಹೊಡೆದಾಡಬೇಕು ಅಂತ ನೀನೇ ಹುರುಪು ಕೊಟ್ಟಿದ್ದಿಯಲ್ಲ ರಾಧಾ ? ಆ ಪ್ರಕಾರ ಈಗ ಹೊಡೆದಾಡಲಿಕ್ಕೆ ನಿಂತೀನಿ. "

" ಯಾರ ಸಂಗಡ ? ಬಸೆಟ್ಟಿ ? "

" ಹುಮ್. ಅವನ ಮಗ್ಗಲು ಮುರಿದುಬಿಡ್ತೀನಿ. ಅದಕ್ಕೇ ನಿನ್ನೆ ರಾತ್ರಿಯೆಲ್ಲಾ ಅಲೆದದ್ದು. "

" ಅಂದರೇನು ? ಅವನ ಖೂನಿ ಮಾಡುವವರೋ ಏನು ? "

" ಅಂಥಾ ಪ್ರಸಂಗ ಬಂದರೆ ಅದಕ್ಕೂ ಹೇಸುವದಿಲ್ಲ. ಅವ ನನಗೆ ಮಾಡಿದ್ದು ನೋಡಿದರೆ ಅವನ್ನ ಜೀವಸಹಿತ ಬಿಡಬಾರದು. "

" ಏನೇ ಮಾಡಿದರೂ ಖೂನಿ ಮಾತ್ರ ಮಾಡಬ್ಯಾಡ್ರಿ. ಸರಕಾರದವರು ನಿಮ್ಮನ್ನ ಸುಮ್ಮನೆ ಬಿಡ್ತಾರೇನು ? ಮತ್ತ ಜೇಲಿಗೆ ಹೋಗಿ ಕೂಡ್ರೂದು ಯಾಕ ? "

" ನಾನು ಎಲ್ಲಿಗೆ ಹೋಗಿ ಕೂತರ ನಿನಗೇನು ? ನೀನ್ಯಾಕೆ ಇಷ್ಟು ಕಳವಳಿಸಬೇಕು ? "

"ಯಾಕೋ! ನಿಮ್ಮಂಥವರಿಗೆ ಏನ ಹೇಳೂದು ಹೋಗ್ರಿ!" ಎಂದಳವಳು, ಸೆರಗನ್ನು ಕಣ್ಣಿಗೊತ್ತಿಕೊಳ್ಳುತ್ತ

ದೇಹವಿಕ್ರಯದಿಂದ ಬದುಕುತ್ತಿದ್ದ ಆ ಹೆಣ್ಣಿನ ಹೃದಯದಲ್ಲಿಯೂ ಮಾಯೆ-ಮಮತೆ ಅಳಿದಿರಲಿಲ್ಲ. ಆ ವ್ಯವಸಾಯದಲ್ಲಿ ತೊಡಗಿಕೊಂಡವರ ಮನಸ್ಸು ಅತ್ಯಂತ ಕಠೋರವಾಗುವುದೆಂದು ನಾನು ಕೇಳಿದ್ದೆ. ಆದರೆ ಅದು ಒಮ್ಮೊಮ್ಮೆ ಅತ್ಯಂತ ಕೋಮಲವೂ ಆಗಬಲ್ಲದೆಂಬುದನ್ನು ರಾಧೆಯಿಂದ ಈಗ ಕಂಡುಕೊಂಡೆ.

ಅವಳು ತಂದು ಕೊಟ್ಟ ಚಹವನ್ನು ಒಂದೇ ಗುಟುಕಿಗೆ ಕುಡಿದು ಮುಗಿಸಿ ಕಪ್ಪನ್ನು ಅತ್ತ ಇಟ್ಟು ಅವಳನ್ನು ಬರಸೆಳೆದು ಮುದ್ದಿಸುತ್ತ ಮಾತ ನಾಡಿದೆ;

" Do you love me Radha ? "

" Yes dear ! " ಎಂದಳು ರಾಧೆ.

" But, our love is hopeless ! " ಎಂದೆ ನಾನು,

" ಯಾಕೆ ? ಒಮ್ಮೆ ಜಾರಿದ ಮಾತ್ರಕ್ಕೆ ನನ್ನಂಥವರಿಗೆ ಉಳಿಗಾಲವೇ ಇಲ್ಲೇನು ? " ಎಂದು ಅವಳು ನಿಜವಾದ ಕಳವಳದಿಂದ ಕೇಳಿದಳು. " ಆ ದೇಶ ಭಕ್ತ ಬೋಳೀಮಗ ನನ್ನ ಕೆಡಿಸದೆ ಇದ್ದಿದ್ದರೆ ನಾನೂ ಇಂದು ಮರ್ಯಾದೆ ಯಿಂದ ಇರುತ್ತಿದ್ದೆ. "

" ಆ ನೀಚ ಯಾರು ರಾಧಾ ? "

" ಕಾಡಗೌಡ ಅಂತದಾನಲ್ಲ ? ಅನಾಥ ಬಾಲಕಾಶ್ರಮ ನಡಸುತಾನ... "

" ಗಾಂಧೀ ಅನಾಥಾಶ್ರಮ ? "

" ಹೌದು. ಮಹಾತ್ಮರ ಹೆಸರಿಟ್ಟು ಎಂಥಾ ಅನಾಚಾರ ಕೂಡಾ ಮಾಡಿ ಪಚನ ಮಾಡಿಕೋಬಹುದು. ಈ ಕಾಂಗ್ರೆಸ್ ಮಂದಿಗೆಲ್ಲಾ ಗಾಂಧೀದೊಂದು ಆಸರ ಸಿಕ್ಕದ. ನಾನಿನ್ನೂ ಎಂಟು ವರ್ಷದವಳಿದ್ದಾಗ ಆ ಅನಾಥಾಶ್ರಮಕ್ಕ ಸೇರಿರಬೇಕು. ಶಹರದ ವ್ಯಾಪಾರಿಗಳೆಲ್ಲಾ ಆಶ್ರಮಕ್ಕ ವರ್ಗಣಿ ಕೊಡುತ್ತಿದ್ದರು ಸುಗ್ಗಿಯ ಕಾಲಕ್ಕೆ ನಮ್ಮನ್ನೆಲ್ಲಾ ಕರಕೊಂಡು ಹಳ್ಳಿಹಳ್ಳಿ ತಿರುಗಿ ಅನಾಥರಾದ ನಮ್ಮ ಹೆಸರಿನಾಗ ಕಾಳುಕಡಿ ವಸೂಲು ಮಾಡುತ್ತಿದ್ದ ಗೌಡ. ಪಾಪ, ಪರದೇಶಿ ಮಕ್ಕಳು ತಿನ್ನಲೀ ಅಂತ ಉದಾರಿಗಳಾದ ರೈತರು ಕೊಡುತ್ತಿದ್ದರು. ಕಾಡ ಗೌಡಗ ಬ್ಯಾರೆ ಏನೂ ಉದ್ಯೋಗ ಇರಲಿಲ್ಲಲ್ಲ ? ಸಮಾಜಸೇವೆಯ ಸೋಗು ಹಾಕಿ ಅವ ಸಂಸಾರ ಸಾಗಿಸುತ್ತಿದ್ದ ಹೆಂಡತಿ, ನಾಲ್ಕು ಮಂದಿ ಮಕ್ಕಳು. ಅವ ರೆಲ್ಲರ ಹೊಟ್ಟೇನೂ ಆಶ್ರಮದ ಕಾಳಿನ ಮ್ಯಾಲೇ ನಡೀತಿತ್ತು. ಅಷ್ಟೇಅಲ್ಲ, ಕೂಡಿಸಿದ ಹಣದಲ್ಲೂ ಎಷ್ಟೋ ನುಂಗಿಬಿಟ್ಟು ಹೆಂಡತಿಯ ಮೈಗೆ ಬಂಗಾರದ ವಸ್ತು ಮಾಡಿಸಿದ್ದ. ಗೌಡನ ಕೈಯಾಗೂ ಉಂಗುರ ಬಂದವು. ಕೊರಳಾಗ ಚೇನು ಬಂತು....

"ನಾ ಹೈಸ್ಕೂಲಿಗೂ ಹೋಗುತಿದ್ದೆ ಅಂತ ಹೇಳಿದ್ದೆನಲ್ಲ—ಆಗಲೇ ಪ್ರಾಯ ಆರಂಭವಾಗಿತ್ತು. ನಾ ದೊಡ್ಡಾಕೆಯಾದ ಕೂಡಲೇ ನನ್ನ ಮ್ಯಾಲ ಗೌಡನ ಕಣ್ಣು ಬಿದ್ದಿರಬೇಕು. ನನಗ ಚಲೋಚಲೋ ಸೀರೀ ಬ್ಲೌಜು ಕೊಂಡು ಕೊಡತೊಡಗಿದ. ಅವನ ದುಷ್ಟತನಕ್ಕ ಅವನ ಹೆಂಡತೀನೂ ಬೆಂಬಲ ಇದ್ದಳೇನೋ. ಅವಳೂ ನನ್ನ ಮನಿಯೊಳಗ ಕರದು ಸವಿಸವಿ ತಿಂಡಿ ಕೊಡತೊಡಗಿದಳು ಮೊದಮೊದಲು ನನಗ ಏನೂ ತಿಳೀಲಿಲ್ಲ, ಪರದೇಶಿ ಹುಡುಗಿ ಅಂತ ಕನಿಕರದಿಂದಲೇ ಅವರು ಇಷ್ಟೆಲ್ಲಾ ಮಾಡುತಿರಬೇಕು ಅಂದುಕೊಂಡೆ. ಆದರೆ-ಲಗೂನೇ ಗೊತ್ತಾತು ಗೌಡನ ಗುಟ್ಟು . .

" ಒಂದು ದಿನ ಸಂಜೀ ಕಡೆ ಗೌಡನ ಹೆಂಡತಿ ಸಿನಿಮಾಕ್ಕ ಹೋಗಿದ್ದ ಸಮಯ ಸಾಧಿಸಿ ಗೌಡ ನನ್ನ ಒಳಗೆ ಕರೆದ. ಆರೆಂಟು ವರ್ಷದಿಂದ ಅವನನ್ನೇ ಅಪ್ಪ ಅಂತ ತಿಳಿದಿದ್ದ ನಾನು ಏನೂ ಸಂಶಯ ಇಲ್ಲದೆ ಹೋದೆ ಗೌಡ ರೂಮಿನಾಗ ಮಲಗಿದ್ದವನು ಥಟ್ಟನೇ ಎದ್ದು ಬಂದು ನನ್ನ ಹಿಡುಕೊಂಡು ರೂಮಿನ ಬಾಗಿಲು ಹಾಕಿದ. ನಾನು ಕೂಗಿಕೊಳ್ಳಬೇಕೆಂದೆ ಆಗಲಿಲ್ಲ ಅಪ್ಪನಂತಿದ್ದ ಆ ಮನುಷ್ಯ ಅಂಥಾ ಹೇಸಿ ಕೆಲಸಕ್ಕ ಬಿದ್ದದ್ದು ನೋಡಿ ನನ್ನ ಬುದ್ಧಿಯೇ ಕೆಟ್ಟು ಹೋದಂತಾಗಿತ್ತು.

" ಎಲ್ಲಾ ಮುಗಿದು ಅವನ ಕಾಮಶಾಂತಿಯಾದ ಮ್ಯಾಲ ಗೌಡ ನನ್ನ ರಮಿಸುತ್ತಾ ಹೇಳಿದ. " ನಿನ್ನ ಮ್ಯಾಲ ನನಗ ಬಹಳ ದಿನದಿಂದ ಮನಸಿತ್ತು ರಾಧಾ. ಸಿಟ್ಟಾಗಬ್ಯಾಡ. ನೀ ಬೇಡಿದ್ದು ಕೊಡುತೀನಿ."

" ನಾನೇನು ಹೇಳಲಿ ಆ ಮಾತಿಗೆ ? ಏನೂ ಹೇಳಲಿಲ್ಲ.

" ಮತ್ತೆ ನಾಲ್ಕಾರು ಬಾರಿ ನಾನು ಆ ದುಷ್ಟನ ವಾಸನಾತೃಪ್ತಿ ಮಾಡಲೇಬೇಕಾಯಿತು. ಬೇರೆ ವಿಧಿಯೇ ಇರಲಿಲ್ಲ. ಆ ಜಾಗಾ ಬಿಟ್ಟು ಹೋಗಬೇಕಂತ ಮನಸಿನಾಗ ಬರುತ್ತಿತ್ತು. ಆದರೆ ಹೋಗೂದಾದರೂ ಎಲ್ಲಿಗೆ ? ಊರಾಗ ನನಗೆ ಯಾರದೂ ಗುರುತಿರಲಿಲ್ಲ, ಪರಿಚಯ ಇರಲಿಲ್ಲ. ಗುರುಗಳ ಎದುರಿಗೆ ಅಂಥಾ ವಿಷಯ ಹೇಳಲಿಕ್ಕೆ ನಾಚಿಕೆ. ಸಾಲೆಯಲ್ಲಿಯ ಗೆಳತಿಯರ ಮುಂದೂ ಹೇಳುವ ಹಂಗಿರಲಿಲ್ಲ. ಪರದೇಶಿಗಳಾದ ನಮ್ಮ ಬಾಳೇನೇ ಹಿಂಗಂತ ಕಾಣತದ—ಅಂದುಕೊಂಡು ಎಲ್ಲಾ ಸಹಿಸಿಕೊಂಡು ಸುಮ್ಮನಿದ್ದೆ.

" ನಾಲ್ಕಾರು ತಿಂಗಳು ಹಿಂಗ ಕಳೆದ ಮ್ಯಾಲ ಆಗಬೇಕಾದ್ದೇ ಆತು. ನಾ ಬಸಿರಿಯಾದೆ. ಆಗ ಮಾತ್ರ ಗೌಡ ಅಂಜಿದ. ಆ ಪ್ರಸಂಗದಿಂದ ಪಾರಾಗಲಿಕ್ಕೆ ಒಂದು ಯುಕ್ತಿ ಹುಡುಕಿ, ನಮ್ಮ ಆಶ್ರಮದೊಳಗೇ ಇದ್ದ ಒಬ್ಬ ವಿದ್ಯಾರ್ಥಿಗೆ ನನ್ನ ಮದುವೆ ಮಾಡಿದ. ನನ್ನಕಿಂತ ನಾಲ್ಕು ವರ್ಷಕ್ಕೆ ದೊಡ್ಡವನಾಗಿದ್ದ ಆ ಹುಡುಗ, ಆ ವರ್ಷ ಮ್ಯಾಟ್ರಿಕ್‌ನಲ್ಲಿದ್ದ. ನಿಜವಾಗಿ ಅವನಿಗೇನು ಮದುವೆ ಬೇಕಾಗಿರಲಿಲ್ಲ. ಗೌಡನ ಒತ್ತಾಯದಿಂದ ಆಗಬೇಕಾತು. ಹೆಂಗೂ ಒಂದು ಗಂಡಿನ ಆಧಾರ ಸಿಕ್ಕಿತು, ಅವ ಮ್ಯಾಟ್ರಿಕ್ ಮುಗಿಸಿ ಯಾವದಾದರೊಂದು ನೋಕರಿ ಹಿಡಿದರೆ ಇಬ್ಬರೂ ಮರ್ಯಾದೆಯಿಂದ ಬಾಳೇ ಮಾಡಬಹುದು ಅಂತ ಸಮಾಧಾನ ಮಾಡಿಕೊಂಡೆ.

" ಗೌಡನಿಂದ ನಾ ಬಸಿರಾದದ್ದು ನನ್ನ ಗಂಡಗ ತಿಳಿಯಲಿಕ್ಕೆ ತಡ ಆಗ ಲಿಲ್ಲ. ಅವ ಓದೂದನ್ನ ಬಿಟ್ಟು ಒಬ್ಬ ವ್ಯಾಪಾರಸ್ಥರ ಅಂಗಡಿಯೊಳಗ ಕೆಲಸ ಹಿಡಿದು ಬ್ಯಾರೆ ಮನೆ ಮಾಡಿ ನನ್ನ ಕರಕೊಂಡು ಹೋಗಬೇಕಂತ ಮಾಡಿದ. ಆದರೆ ಗೌಡ ನನ್ನ ಕಳಿಸಲಿಕ್ಕೆ ಒಪ್ಪಲಿಲ್ಲ. ನಿನ್ನ ಅನಾಥಾಶ್ರಮದ ಮ್ಯಾನೇಜರ್ ಮಾಡುತೀನಿ, ಗಂಡಹೆಂಡರಿಬ್ಬರೂ ಇಲ್ಲೇ ಇರ್ರಿ ಅಂತ ಹೇಳಿದ. ನನ್ನ ಗಂಡ ಅದಕ್ಕ್ಯಾಕೆ ತಯಾರಾದಾನು ? ಯಾರದೋ ಬೆಂಬಲದ ಮ್ಯಾಲ ಅವ ಪೋಲೀ ಸರಿಗೆ ಫಿರ್ಯಾದಿ ಕೊಟ್ಟ ಫೌಜದಾರರು ಬಂದರು ವಿಚಾರಣಾ ಮಾಡಲಿಕ್ಕೆ. ಗೌಡ ಅವರನ್ನ ಒಳಗ ಕರಕೊಂಡು ಹೋಗಿ ಉಂಡೀ ತಿನ್ನಿಸಿ ಕೈ ಬೆಚ್ಚಗೆ ಮಾಡಿದ. ಫೌಜದಾರ ಏನೂ ಮಾಡದೆ ಹೊಂಟು ಹೋದ. ನನ್ನ ಗಂಡನೂ ಅಷ್ಟಕ್ಕೇ ಬಿಡಲಿಲ್ಲ ಆಶ್ರಮಕ್ಕ ಬಂದು ಗದ್ದಲಾ ಮಾಡಿದ. ಅವನ ಸಂಗದ ಕಳಿಸಿಬಿಡಿರಿ ಅಂತ ನಾನೂ ಹೇಳಿಕೊಂಡೆ. ಗೌಡ ಭಯಂಕರ ಸಿಟ್ಟಾಗಿ ದೊಡ್ಡದೊಂದು ಬಡಿಗೆಯಿಂದ ನಮ್ಮಿಬ್ಬರನ್ನೂ ದನ ಬಡಿಯುವಂತೆ ಬಡಿದ. ನನ್ನ ಗಂಡ ಓಡಿಹೋದ. ನಾನು ನೋವಿನಿಂದ ನರಳುತ್ತಾ ಹಾಸಿಗೆ ಹಿಡಿದೆ. ಮುಂದೆ ಒಂದೆರಡು ದಿನಗಳಲ್ಲೇ ಗರ್ಭ ಇಳಿದು ಹೋತು. ಮತ್ತೆ ನಾ ನೆಟ್ಟ ಗಾಗಬೇಕಾದರೆ ಆರು ತಿಂಗಳು ಬೇಕಾಯಿತು.

" ಆಗಲಾದರೂ ಗೌಡ ನನ್ನ ನಾದ ಬಿಟ್ಟಾನು, ನಾನು ನನ್ನ ಗಂಡನ ಹತ್ತರ ಹೋದೇನು ಅಂತ ಆಸೆ ಇತ್ತು. ಕಡೆಗೂ ಗೌಡ ಕಳಿಸಲೇ ಇಲ್ಲ. ನನ್ನ ಪ್ರಕೃತಿ ಚಲೋ ಆದಮ್ಯಾಲ ಮತ್ತೆ ರಮಿಸಲಿಕ್ಕೆ ಬಂದ. ಆಗ ಮಾತ್ರ

ನಾ ಸುಮ್ಮನಿರದೆ ಆಶ್ರಮ ಬಿಟ್ಟು ಓಡಿಹೋದೆ. ಗಂಡನ್ನ ಹುಡುಕಿದರೆ ಅವ ಆ ಊರೇ ಬಿಟ್ಟು ಬ್ಯಾರೆ ಎಲ್ಲೋ ಹೋಗಿ ಬಿಟ್ಟಿದ್ದನಂತೆ. ಮುಂದೆ ಕೆಲ ದಿನದ ಮ್ಯಾಲ ಜೀವಕ್ಕ ಬೇಸತ್ತು ಕೆರೆಯೊಳಗ ಬಿದ್ದು ಆತ್ಮಹತ್ಯೆ ಮಾಡಿಕೊಂಡ. ಅದೂ ಪೇಪರಿನಲ್ಲಿ ಬಂದಿತ್ತು.

"ಆಶ್ರಮ ಬಿಟ್ಟಮ್ಯಾಲ ನನ್ನಂಥವರಿಗೆ ಆಸರ ಎಲ್ಲಿ ಸಿಕ್ಕೀತು ? ಈ ಓಣಿಗೆ ಬಂದು ಒಬ್ಬ ಮುದುಕಿಯ ಸಹಾಯದಿಂದ ಈ ವ್ಯವಸಾಯಕ್ಕ ನಿಂತೆ. ಬ್ಯಾರೆ ಹಾದಿ ಏನಿತ್ತು ? ನೀವೇ ಹೇಳಿರಿ."

"ನಾನೇನು ಹೇಳಲಿ ನನ್ನ ತಲೆ ? ನೀನು ಈ ರೀತಿ ಆಗಲು ಆ ಬದ್ಮಾಷ ಕಾಡಗೌಡನೇ ಕಾರಣ. ನಾನು ಈ ರೀತಿ ಆಗಲು ಆ ಹಲ್ಕಟ ಬಸೆಟ್ಟಿ ಕಾರಣ. ನಾವಿಬ್ಬರೂ ಒಂದೇ ರೀತಿಯ ಅನ್ಯಾಯದಿಂದ ಹೀಗಾದೆವು ರಾಧಾ ನಮ್ಮ ಮೇಲೆ ಇಂಥಾ ಅತ್ಯಾಚಾರ ಮಾಡಿದವರ ಮೇಲೆ ಸೇಡು ತೀರಿಸಿಕೋಬೇಕು. ನಾನೀಗ ಅದೇ ಕೆಲಸಕ್ಕ ನಿಂತೀನಿ."

"ಹೌದೇನು ? ಬಹಳ ಚಲೋ ಆತು," ಎನ್ನುತ್ತಾ ನನ್ನನ್ನು ತಬ್ಬಿಕೊಂಡಳು ರಾಧೆ.

೬

ಆ ದಿನವೆಲ್ಲ ನಾನು ಮನೆಯಿಂದ ಹೊರಬಿದ್ದಿರಲಿಲ್ಲ ರಾತ್ರಿಯಾಗುತ್ತಲೂ ಮತ್ತೆ ಕಾಮಾಕ್ಷಿಯಲ್ಲಿಗೆ ಹೋಗುವುದೆಂದು ನಿಶ್ಚಯಿಸಿಕೊಂಡು, ಊಟ ಮುಗಿಸಿ, ಇನ್ನೇನು ಹೊರಡುವದರಲ್ಲಿದ್ದಾಗಲೇ ಸೋಮಯ್ಯನ ಸವಾರಿ ಆಗಮಿಸಿತು. ಅವನೊಡನೆ ಬಂದ ಪೋಲೀಸ ಹೊರಗೆ ನಿಂತುಕೊಂಡಿದ್ದ. ಸೋಮಯ್ಯ ಕೊಟಡಿಯಲ್ಲಿ ಪ್ರವೇಶಿಸಿ ಬಾಗಿಲು ಮುಚ್ಚಿ, ಹಾಸಿಗೆ ಸುರುಳಿಯ ಮೇಲೆ ಕುಳಿತುಕೊಳ್ಳುತ್ತ ವ್ಯಂಗ್ಯವಾಗಿ ಪ್ರಶ್ನಿಸಿದ :

" ಏನು ? ಜೋರಾಗಿ ಚಟುವಟಿಕೆ ನಡೆಸಿದಂತೆ ಕಾಣುತ್ತಲ್ಲ ? ನೀನೂ ಅರ್ಜಿ ಹಾಕುವವನೋ ಏನು ಟಿಕೀಟಿಗೆ ? "

ನಾನು ಕಾಂಗ್ರೆಸ್ ಕಚೇರಿಗೆ ಹೋಗಿಬಂದದ್ದು ಅವನಿಗೆ ಗೊತ್ತಾಗಿತ್ತು ಹಾಗಾದರೆ ! ಅದೊಂದು ಆಶ್ಚರ್ಯದ ಸಂಗತಿಯೂ ಆಗಿರಲಿಲ್ಲ. ಸಿ. ಐ ಡಿ. ಗಳಿಗೇನು ಕೊರತೆ ಕಾಂಗ್ರೆಸ್ ಕಚೇರಿಯಲ್ಲಿ ?

" ಯಾಕೆ ಹಾಕಬಾರದು ? "

" ನಿನ್ನಂಥವರಿಗೆಲ್ಲಾ ಟಿಕೀಟು ಕೊಡಲಿಕ್ಕೆ ಕಾಂಗ್ರೆಸ್ ಲೀಡರುಗಳೇನೂ ಮೂರ್ಖರಲ್ಲ. ದೊಡ್ಡ ದೇಶಭಕ್ತನ ಸೋಗು ಹಾಕಿದಾನೆ ಮಗ ! ವಾಹವ್ವಾ ! ಹೊಸ ಖಾದೀ ಅರಿವೆಗಳೂ ಬಂದಿವೆಯಲ್ಲ ? ಇದಕ್ಕೆಲ್ಲಾ ರೊಕ್ಕಾ ಎಲ್ಲಿಂದ ಬಂತು ಅಂತೀನಿ.... "

" ಕೊಟ್ಟಳು ನಿನ್ನ ಹೆಂಡತಿ ! "

ಮೊದಲೇ ಕೆಂಪಗಿದ್ದ ಸೋಮಯ್ಯನ ಮುಖ ಮತ್ತಷ್ಟು ಕೆಂಪಾಯಿತು. ನನ್ನನ್ನು ಹೊಡೆಯಲೆಂದು ಆತ ಕೈ ಎತ್ತಿದ. ಅವನನ್ನು ಥಳಿಸಲು ನನ್ನ

ಮುಷ್ಟಿಯೂ ಆತುರವಾಗಿತ್ತು. ಆದರೆ ಸೋಮಯ್ಯ ಸಂಯಮ ವಹಿಸಿ ಹೊಡೆಯಲು ಮುಂದಾಗದೆ ಹಾಗೆಯೇ ಕುಳಿತುಕೊಂಡ.

" ಏನು ನಡಸಿದ್ದೀ ಇತ್ತೀಚೆಗೆ? ನಿನ್ನೆ ರಾತ್ರಿ ಎಲ್ಲಿ ಹೋಗಿದ್ದೆ ? ಒಳ್ಳೇ ಮಾತಿನಲ್ಲಿ ಹೇಳುತೀಯೋ ಇಲ್ಲೋ ? " ಎಂದು ಆತ ಬೆದರಿಸಿದ.

" ನಿನ್ನ ಹೆಂಡತಿ ಚೀಟಿ ಕಳಿಸಿದ್ದಳು. ಹೋಗಿದ್ದೆ. "

ಆತ ಮತ್ತೆ ಮುಷ್ಟಿ ಬಿಗಿದ, ಅವಡುಗಚ್ಚಿದ. ಅವನ ಕಣ್ಣು ಕೆಂಡದಂತೆ ಕೆರಳಿದವು. ಆದರೂ ಆತ ನನಗೇನೂ ಮಾಡಲಿಲ್ಲ.

" ನಿನ್ನ ದಿಮಾಕು ನೋಡಿದರೆ ನಿನಗೆ ಯಾರೋ ರೊಕ್ಕಸ್ಥರ ಬೆಂಬಲ ವಿರಬೇಕಂತ ಕಾಣ್ತದ. ಯಾರವರು? ಏನೇನು ನಡೆಸಿದ್ದೀರಿ? ಸೆಟ್ಟರ ಮೊದ ಲನೇ ಕುಟುಂಬದ ಸುದ್ದಿ ಬೇರೆ ತೆಗೆದಿದ್ದಿಯಂತಲ್ಲ ? ನಿನ್ನ ವಿಚಾರವಾದರೂ ಏನದ ? "

ಅಂತೂ ಕಾಮಾಕ್ಷಿಯ ವಿಷಯವೂ ಇವನಿಗೆ ಗೊತ್ತಾದಂತಾಯಿತು. ಹೇಗೆ ಗೊತ್ತಾಯಿತೋ ? ಬಹಳ ಮಾಡಿ ಇವನ ಸಿ ಐ ಡಿ.ಗಳು ಕಾಮಾಕ್ಷಿಯ ಬಂಗಲೆ ಯೆದುರು ಕಾವಲು ಮಾಡುತ್ತಿರಬಹುದು.

" ಅಲ್ಲೇನು ಕೆಲಸ ನಿನಗೆ ? ಅಲ್ಲ್ಯಾಕೆ ಹೋಗಿದ್ದೆ ? ಹೇಳುತೀಯೋ ಇಲ್ಲೋ ? " ಎಂದ ಸೋಮಯ್ಯ.

" ಹೇಳದಿದ್ದರೇನು ಮಾಡುತೀ ? "

" ಮಾಡುವದೇನು ? ಇದ್ದೇ ಇದೆಯಲ್ಲ ಲಾಕಪ್ ? "

" Well ! I dont care ! " ಎಂದು ನಾನು ತಿರಸ್ಕಾರದಿಂದ ನುಡಿದೆ.

" ಸೆಟ್ಟರ ಕುಟುಂಬದ ಸಂಗಡ ಹುಡುಗಾಟ ಅಂದರೆ ಬೆಂಕಿಯ ಸಂಗಡ ಆಟ ಇದ್ದಂತೆ. ತಿಳುಕೊಂಡಿರು."

" ತಿಳುಕೊಂಡೇ ಇದೀನಿ, ಚೆನ್ನಾಗಿ. "

" ನೀನೇನಾದರೂ ಉಪದ್ವ್ಯಾಪ ಮಾಡಲಿಕ್ಕೆ ನಿಂತರೆ ನಿನ್ನ ಎಲುವು ಕೂಡಾ ಉಳೀಲಿಕ್ಕಿಲ್ಲ. ಗೊತ್ತಾಯಿತೋ ? " ಎಂದು ಮತ್ತೆ ಬೆದರಿಕೆ ಹಾಕಿ ಸೋಮಯ್ಯ ಹೊರಟುಹೋದ. ಸದ್ಯ, ಪಾರಾದೆನಪ್ಪ ! ಎಂದುಕೊಳ್ಳುತ್ತಾ ನಾನು ಹಾಯಾಗಿ ಉಸಿರುಬಿಟ್ಟೆ.

ಸೋಮಯ್ಯ ತೊಲಗುತ್ತಲೂ ರಾಧೆ ಓಡುತ್ತ ಬಂದಳು. ನನ್ನ ಕೊಟಡಿಯಲ್ಲಿ ನಡೆದಿದ್ದ ಮಾತುಗಳೆಲ್ಲ ಅವಳ ಕಿವಿಗೂ ಬಿದ್ದಿರಲು ಸಾಕು.

" ಏನದು ಸದಾ ? ಸೆಟ್ಟರ ಕುಟುಂಬದ ಸಂಗತಿ ? "

" ಏನಿಲ್ಲ ರಾಧಾ. ಅವಳಿಗೂ ನನಗೂ ಮೊದಲಿನಿಂದ ಗುರುತು. ನಿನ್ನೆ ಸಹಜವಾಗಿ ಭೆಟ್ಟಿಯಾಗಿದ್ದಿತು ಅಷ್ಟೆ. "

" ಸುಳ್ಳು. ನಿನ್ನೆ ರಾತ್ರಿಯೆಲ್ಲಾ ನೀವು ಅವಳ ಸಂಗಡಲೇ ಇದ್ದಿರಿ. ಈಗ ಗೊತ್ತಾತು ನನಗೆ ಎಲ್ಲಾ. "

" ಗೊತ್ತಾಯಿತಲ್ಲ ? ಈಗೇನು ಮಾಡುವವಳು? ನನಗೆ ಸೋಡಚೀಟೀ ಕೊಡುವವಳೋ ಏನು ? "

" ಹೋಗ್ರಿ ನೀವೊಬ್ಬರು ! " ಎಂದು ನಗುತ್ತ ನುಡಿದು ರಾಧೆ ನನ್ನ ತೊಡೆಯೇರಿ ಕುಳಿತು ಲಲ್ಲೆಗರೆಯುತ್ತ ಮಾತನಾಡಿದಳು :

" ನೀವು ಅವಳ ಹತ್ತಿರ ಹೋಗಿದ್ದಿರಂತ ನನಗೇನು ಹೊಟ್ಟೇಕಿಚ್ಚಿಲ್ಲ. ನಿಮಗೇನೂ ಅಪಾಯ ಆಗದಿದ್ದರೆ ಸಾಕು. "

ಆ ರಾತ್ರೆ ಕಾಮಾಕ್ಷಿಯ ಮನೆಗೆ ಹೋಗುವುದೇ ? ಬೇಡವೇ ? ಎಂದು ಯೋಚಿಸುತ್ತ ಬಹಳ ಹೊತ್ತು ಹಾಗೆಯೇ ಕುಳಿತಿದ್ದೆ. ಸೋಮಯ್ಯನಿಗಂತೂ ಎಲ್ಲವೂ ಗೊತ್ತಾಗಿ ಹೋಗಿತ್ತು. ಈ ರಾತ್ರೆ ಕಾವಲು ಇನ್ನಷ್ಟು ಬಲಗೊಳ್ಳಬಹುದು. ಯಾರು ಬಲ್ಲರು ? ಅವಳ ಬಂಗಲೆಯೆದುರಿನಲ್ಲಿಯೇ ಅವರು ನನ್ನನ್ನು ಹಿಡಿದರೂ ಹಿಡಿಯಬಹುದು. ಕಾಮಾಕ್ಷಿಯಂತೂ ನನ್ನ ಬರವನ್ನೆದುರು ನೋಡುತ್ತ ಕುಳಿತಿರುತ್ತಾಳೆ. ಅದರಲ್ಲೇನೂ ಸಂಶಯವಿಲ್ಲ. ಅವಳೊಡನೆ ಸಾಕಷ್ಟು ಸಲುಗೆ ಬೆಳೆಸಿ, ಬಸೆಟ್ಟಿಯ ರಹಸ್ಯಗಳನ್ನೆಲ್ಲ ಅರಿತುಕೊಂಡು ಅವನನ್ನು ಬಲಿಹಾಕುವುದು ನನ್ನ ಉದ್ದೇಶವಾಗಿತ್ತು.

ಮರಿಯಪ್ಪನ ಹತ್ತಿರ ಹೋಗಿ ಬರುವೆನೆಂದಷ್ಟೆ ರಾಧೆಗೆ ತಿಳಿಸಿ ಹೊರಬಿದ್ದೆ. ಬೆಳಗಿನಿಂದ ಸೆರೆ ಕುಡಿದಿರಲಿಲ್ಲವಾದುದರಿಂದ ನನಗಾಗ ತುಂಬ ದಾಹವಾಗಿತ್ತು. ಮರಿಯನ ಗಡಂಗಕ್ಕೆ ಹೋಗಿ ನಾಲ್ಕಾರು ಕಪ್ ಕುಡಿದು ನಾನು ವಿಸ್ತರಣದತ್ತ ಹೊರಳುತ್ತಿದ್ದಂತೆಯೇ ಹಾದಿಯಲ್ಲಿ ರುದ್ರಗೌಡನ ಭೆಟ್ಟಿಯಾಯಿತು.

" ಎತ್ತ ಹೊರಟಿತು ಸವಾರಿ ?" ಎಂದ ರುದ್ರಗೌಡ.

" ನಿಮ್ಮ ಕೆಲಸಕ್ಕೇ ಹೊರಟೀನಿ. "

" ಇಂಥಾ ರಾತ್ರಿ ಏನಪ್ಪಾ ಅಂಥಾ ಕೆಲಸ ? "

" ಕಳ್ಳರ ಹುಳುಕು ತಿಳಕೋಬೇಕಾದರೆ ಕಳ್ಳರಂತೆ ರಾತ್ರೀನೇ ತಿರುಗ ಬೇಕಾಗ್ತದ ಗೌಡರೆ, "

ನಾನು ಕುಡಿದದ್ದು ಅವನಿಗೂ ಗೊತ್ತಾಗಿರಲು ಸಾಕು. ಕುಡಿತದ ಮತ್ತಿನಲ್ಲಿ ನಾನು ಬಾಯಿಗೆ ಬಂದುದನ್ನು ಬಗುಳುತ್ತಿರಬಹುದೆಂದು ಅವನು ಭಾವಿಸಿರಬೇಕು.

" ಏನೇನು ನಡಸೀರೋ ಹೇಳುವಿರಂತೆ ಬರ್ರಿ. ನಮ್ಮ ರೂಮಿಗೆ ಹೋಗೋಣ. " ಎಂದು ಆತ ಹೇಳಿದ.

ಆ ರಾತ್ರೆ ಕಾಮಾಕ್ಷಿಯಲ್ಲಿಗೆ ಹೋಗುವುದು ನನಗೂ ಬೇಡವಾಗಿತ್ತು. ಎಂತಲೇ ನಾನು ಸಮಾಧಾನದಿಂದಲೇ ರುದ್ರಗೌಡನ ಜೊತೆಗೆ ಹೊರಟೆ.

ಮಧ್ಯಮ ವರ್ಗದ ಜನರು ವಾಸಿಸುತ್ತಿದ್ದ ಓಣಿಯೊಂದರಲ್ಲಿ ವಿಸ್ತಾರ ವಾದ ಮಹಡಿಯೊಂದನ್ನು ಬಾಡಿಗೆಗೆ ಹಿಡಿದಿದ್ದ ರುದ್ರಗೌಡ ಸ್ನಾನ-ವಸತಿ ಊಟ ಎಲ್ಲದಕ್ಕೂ ಅನುಕೂಲವಾಗಿತ್ತು ಆ ಸ್ಥಳ. ನಡುಮನೆಯಲ್ಲಿ ನಲ ವತ್ತು ಐವತ್ತು ಜನರು ವಿರಾಮವಾಗಿ ನಿದ್ರಿಸಲೂ ಅವಕಾಶವಿತ್ತು.

" ಈ ರಾತ್ರಿ ಇಲ್ಲೇ ಮಲಗಿ ಬಿಡಿರಿ. ಏನೇನು ನಡಿಸೀರಿ ಅನ್ನೂದನ್ನ ಕೇಳಬೇಕಲ್ಲ ? " ಎಂದ ರುದ್ರಗೌಡ, ನನಗೊಂದು ರಗ್ಗು ಕೊಡುತ್ತ.

" ಇಷ್ಟು ಲಗೂ ಏನು ನಡಸೂದು ಗೌಡರೆ ? ಆದರೂ ಸುರು ಮಾಡೀನಿ ಕೆಲಸ. ಖಾಲೀ ಕೂತಿಲ್ಲ. ಸೆಟ್ಟಿಯ ಮರ್ಮಸ್ಥಳಕ್ಕೇ ಕೈ ಹಾಕೀನಿ."

" ಮರ್ಮಸ್ಥಳ ? " ಎಂದು ರುದ್ರಗೌಡ ಕುತೂಹಲದಿಂದ ಕೇಳಿದ.

" ಅವನ ಮೊದಲನೇ ಕುಟುಂಬ ಕಾಮಾಕ್ಷಿ ಗೊತ್ತ್ಯೋ ನಿಮಗೆ ?"

" ಗೊತ್ತಿಲ್ಲ ? ಮದುವೆಗೆ ನಾನೂ ಹಾಜರಿದ್ದೆ. "

" ಸೆಟ್ಟಿ ಅವಳನ್ನು ಬಿಟ್ಟು ಬಿಟ್ಟಾನಂತೆ. "

" ಹೌದು. ನಾನೂ ಕೇಳಿದ್ದೆ. ಇದೇ ಊರಲ್ಲೇ ಎಲ್ಲೋ ಇರಬೇಕು ಆಕೆ. "

" ಅವಳಿರುವ ಜಾಗಾ ಸಹ ಪತ್ತೆ ಹಚ್ಚಿದೆ. ನಿನ್ನೆ ಅವಳನ್ನ ಭೆಟ್ಟಿಯೂ ಆಗಿದ್ದೆ. "

" ಹೆಂಗಸರ ತಂಟೆಗ್ಯಾಕೆ ಹೋಗುತೀರಪ್ಪ ! ನಮ್ಮ ಈರ್ಷೆ ಸೆಟ್ಟಿಯ ಕೂಡ. ಹೆಂಗಸರೇನು ಮಾಡಿಯಾರು ?"

" ಅವನಿಂದ ನನಗೆ ಅನ್ಯಾಯ ಆಗಿರುವಂತೇ ಅವಳಿಗೂ ಆಗಿದೆ. ಅದನ್ನ ತಿಳುಕೊಳ್ಳಲಿಕ್ಕೆ ಹೋಗಿದ್ದೆ. ಸೆಟ್ಟಿ ಇಲ್ಲಿಯ ತನಕ ಯಾರ್ಯಾರಿಗೆ ಏನೇನು ಅನ್ಯಾಯ ಮಾಡಿದಾನೋ ಅವನ್ನೆಲ್ಲಾ ಪತ್ತೆ ಹಚ್ಚಿ ಲಿಸ್ಟು ಮಾಡಿ ಸದಾಸ್ಮಿತಪ್ಪ ನವರಿಗೆ ಕೊಟ್ಟರಾಯಿತು. "

" ಹಿಂಗೇನು ? ನಡೀಲಿ ಹಂಗಾದರ ನಿಮ್ಮ ಪ್ರಯತ್ನ. ಏನಂತಾಳ ಕಾಮಾಕ್ಷಿ ? "

" ಸ್ವಲ್ಪ ಸ್ವಲ್ಪ ಹೇಳಿದಾಳ. ಇನ್ನು ಒಂದೆರಡು ವಾರದಲ್ಲಿ ಎಲ್ಲಾ ಹೇಳಬಹುದು. ಅಲ್ರೀ ಗೌಡರೆ, ಸೆಟ್ಟಿ ಓ. ಸಿ. ಎಜಂಟಾಗಿ ಕೆಲಸ ಮಾಡು ತಾನಂತೆ. ನಿಮಗೆ ಗೊತ್ತದೇನು ? "

" ಯಾರೋ ಹೇಳುತಿದ್ದರಪ್ಪ, ನನಗೂ ನೆಟ್ಟಗೆ ಗೊತ್ತಿಲ್ಲ. ಅವನೇನು ಯಾತಕ್ಕೂ ಹೇಸುವವನಲ್ಲ. ರೊಕ್ಕ ಒಂದು ಸಿಕ್ಕರಾತು, ಬೇಕಾದ್ದು ಮಾಡು ತಾನ. "

" ನಿಮ್ಮದೆಲ್ಲಾ ಹ್ಯಾಗೆ ನಡದದ ಗೌಡರೆ ? ಅರ್ಜಿ ಹಾಕಿದಿರಾ ?"

" ಆಗಲೇ ಹಾಕಿದೆನಲ್ಲಪಾ, ಇನ್ನು ಮ್ಯಾಲ ಒಂದು ತಿಂಗಳ ತನಕ ತಾಲೂ ಕೆಲ್ಲಾ ತಿರುಗಾಡಬೇಕು. "

" ಯಾಕೆ ? ಚುನಾವಣೆ ಇನ್ನೂ ದೂರ ಅದ ಅಲ್ಲ ? "

" ಅದೇನೋ ದೂರ ಇದ್ದರೂ ನಮ್ಮದು—ಕಾಂಗ್ರೆಸ್ ಮುಂದಿಯದು ಮಾತ್ರ ಈಗಲೇ ಸುರು ಆದಂಗಾಯ್ತು. ತಾಲೂಕೆಲ್ಲಾ ತಿರುಗಾಡಿ ಪಂಚಾಯ್ತಿ ಸೊಸೈಟಿ, ತರುಣಸಂಘ, ಮಹಿಲಾಮಂಡಲ ಮತ್ತೂ ಬೇರೆ ಬೇರೆ ಸಂಸ್ಥೆ ಗಳಿಂದ ಶಿಫಾರಸು ತಗೊಂಡು ಎಂ. ಪಿ. ಸಿ. ಸಿ. ಗೆ ಕಳಿಸಬೇಕು. "

" ಈ ಸಲ ಇದೇನೋ ಚಮತ್ಕಾರ ಇದ್ದಂತೆ ಕಾಣ್ತದಲ್ಲರೀ ಗೌಡರೆ ? ಪಂಚಾಯ್ತಿ ಸೊಸೈಟಿಗಳಿಗೂ ಕಾಂಗ್ರೆಸ್ಸಿಗೂ ಏನು ಸಂಬಂಧ ? "

" ಏನು ಸಂಬಂಧವೋ ಅವರಿಗೇ ಗೊತ್ತು. ಅಂತೂ ಅರ್ಜಿ ಹಾಕಿದವ ರೆಲ್ಲಾ ಒಂದೇ ಸವನೆ ತಾಲೂಕೆಲ್ಲಾ ತಿರುಗ್ತಿದಾರೆ. ಎಲ್ಲಿ ನೋಡಿದರೂ ಅವರೇ. ಶಿಫಾರಸುಪತ್ರ ಪಡಕೊಳ್ಳಲಿಕ್ಕೂ ಲಂಚ ಸುರು ಆಗಿ ಬಿಟ್ಟದ. "

" ಈಗೇನ್ರಿ ? ಲಂಚ ಇಲ್ಲದೆ ಯಾವ ಕೆಲಸ ಆಗತದ ? ಆಯ್ತು, ಇದ ರಲ್ಲೂ ಸುರು ಆಗಿರಬೇಕು ! " ಎಂದು ಹೇಳಿ ನಾನು ರಗ್ಗು ಎಳೆದುಕೊಂಡೆ.

ಬೆಳಗ್ಗೆ ಚಹ ಕುಡಿಯುತ್ತಿದ್ದ ಹಾಗೆ ರುದ್ರಗೌಡ ಹೇಳಿದ.

" ಇನ್ನೊಂದು ತಿಂಗಳು ನಾನೂ ತಿರುಗಾಡಬೇಕಲ್ಲ ತಾಲೂಕಿನಲ್ಲಿ, ನೀವೂ ಬರ್ತೀರೇನು ನನ್ನ ಸಂಗಡ ? "

" ನಾನೇ ? ನನ್ನದೇನು ಕೆಲಸರೀ ಗೌಡರೆ ? "

" ಏನಿಲ್ಲ, ನನ್ನ ಸಂಗಡ ತಿರುಗಾಡೂದು, ಅಷ್ಟೆ."

" ಆದರೆ, ನನ್ನಂಥವ ನಿಮ್ಮ ಸಂಗಡ ಬರಬಾರದು. ಚಲೋ ಜನರನ್ನ ಕರಕೊಂಡು ಹೋಗಿರಿ. ನನ್ನಂಥವ ಬಂದರೆ ನಿಮಗೆ ಲಾಭದ ಬದಲು ಹಾನಿಯೇ ಆದೀತು."

ರುದ್ರಗೌಡನಿಗೆ ನನ್ನ ಮಾತಿನ ಅಂತರಾರ್ಥ ಧಟ್ಟನೆ ತಿಳಿದುಬಂದಿರಲು ಸಾಕು. ಆತ ಮುಗುಳುನಗೆ ಬೀರುತ್ತ ಹೇಳಿದ .

" ನೀವು ಅದೊಂದು ಚಟ ಬಿಟ್ಟರೆ ಚಲೋ ಆಗತದ ನೋಡಿರಿ. ಅದೊಂದು ಬಿಟ್ಟುಬಿಟ್ಟರೆ ನೀವೂ ಅತ್ಯುತ್ತಮ ಕಾರ್ಯಕರ್ತರಾಗಬಹುದು. ನಾವಿಬ್ಬರೂ ಕೂಡಿ ತಿರುಗಾಡಿದರೆ ನಮ್ಮ ತಾಲೂಕಿನಲ್ಲೆಲ್ಲಾ ರೈತರ ಸಂಘಟನೆ ಕಟ್ಟಬಹುದು. ಆಮ್ಯಾಲ ಬಸೆಟ್ಟಿಯಂಥಾ ವ್ಯಾಪಾರಿಗಳು ಎಂಥಾ ಲಾಗ ಒಗೆದರೂ ರೈತರೆದುರು ಅವರ ಆಟ ನಡೀಲಿಕ್ಕಿಲ್ಲ."

" ಆದರೂ ರೊಕ್ಕ ಒಂದು ಕೊಟ್ಟರೆ ಅವರ ಬೆನ್ನುಹತ್ತುವ ಮಂದಿಗೂ ಕಡಿಮೆಯೇನಿಲ್ಲ."

" ಅದೂ ನಿಜ. ಆದರೆ ಎಲ್ಲರೂ ಅಂಥಾ ಸ್ವಾರ್ಥಿಗಳೇ ಇರುತಾರಂತ ಹೇಳುವಂತಿಲ್ಲ. ನಮ್ಮ ರೈತರು ಹೆಚ್ಚಾಗಿ ಸರಳ ಜನರು. ತಾವಾಯಿತು, ತಮ್ಮ ಹೊಲವಾಯಿತು, ತಮ್ಮ ಹೋರೆಯಾಯಿತು. ಇನ್ನೊಂದರ ಗೊಡ ವೆಗೆ ಹೋಗುವವರಲ್ಲ. ಇವರ ಸರಳತನದ ದುರ್ಲಾಭ ಪಡೆದು ಸೆಟ್ಟಿಯಂಥ ವರು ಮುಖಂಡರಾಗಿ ಮೆರೀತಾರ. ರೈತರಿಗೆ ಮಾತ್ರ ಏನೂ ಉಪಯೋಗ ವಿಲ್ಲ."

" ಅದಕ್ಕೇ ನಮ್ಮ ಜನ ಹೇಳೂದು—ಯಾವ ರಾಜ್ಯ ಬಂದರೂ ರಾಗೀ ಬೀಸೂದು ತಪ್ಪೂದಿಲ್ಲ ಅಂತ."

" ಈಗ ಮನೆಯೊಳಗ ಬೀಸುತಾರಾದರೂ ಯಾರು ಬಿಡಿರಿ ! ಎಲ್ಲಾರೂ ಗಿರಣಿಗೆ ಓಡತೂದೇ ! "

" ಬೀಸಲಿಕ್ಕೆ ಸವಡು ಇರೂದಿಲ್ಲ. ಮುಂಜಾನೆ ಎದ್ದಕೂಡಲೇ ಸೆಗಣೀ ಒಗಿಯೂದು, ಮಜ್ಜಿಗೆ ಕಡೆಯೂದು, ಅಡಿಗೆ ಮಾಡೂದು ಸುರು ಆಗ್ತದ, ಹೀಗಾಗಿ ಗಿರಣಿಗಳಿಗೆ ಓಡೂದು ಅಗತ್ಯ ಆಗತದ."

" ಅದಿರಲಿ. ನೀವು ನನ್ನ ಸಂಗಡ ಬರೂದು ಏನು ಮಾಡುತೀರಿ ? "

" ನನಗೆ ಬೇರೆ ಕೆಲಸ ಗಂಟುಬಿದ್ದದ ಅಲ್ಲ ಗೌಡರೆ ? "

" ಹೌದೌದು. ಅದೂ ಮಹತ್ವದ್ದೇ. ಅದನ್ನೂ ಮುಗಿಸಲಿಕ್ಕೆ ಬೇಕು ಇನ್ನೊಂದು ತಿಂಗಳೊಳಗಾಗಿ ಆದಷ್ಟು ಮಾಡಬೇಕು ನೋಡಿರಿ. ತಡವಾದ ರೇನೂ ಉಪಯೋಗವಿಲ್ಲ."

ಸಾಧ್ಯವಾದಷ್ಟು ಬೇಗ ಮುಗಿಸುವುದಾಗಿ ಭರವಸೆಯಿತ್ತು ಗೌಡನನ್ನು ಬೀಳ್ಕೊಂಡು ಹೊರಟೆ. ಆ ದಿನವೂ ಮತ್ತೆ ನೂರು ರೂಪಾಯಿ ಕೊಟ್ಟ ಗೌಡ. ಬೇಡಬೇಡವೆನ್ನುತ್ತಲೇ ನಾನು ಅವನ್ನು ಕಿಸೆಗೆ ಸೇರಿಸಿದೆ. ಹಣ ನನ್ನ ಹತ್ತಿರವೇ ಇದ್ದರೆ ಉಳಿಯುವುದು ಶಕ್ಯವಿಲ್ಲವೆಂದು ಯೋಚಿಸಿ ಒಂದು ಉಡುಪಿ ಬ್ಯಾಂಕಿಗೆ ಹೋಗಿ ಲೆಕ್ಕ ಸುರು ಮಾಡಿ ಹಣವನ್ನು ಅಲ್ಲಿಟ್ಟು ಬಂದೆ. ಸೆಟ್ಟಿಯ ವಿರುದ್ಧ ಕಾರ್ಯವೆಂದರೆ ಸಾಧಾರಣವಾದುದಲ್ಲ. ಒಂದೊಂದು ಸಂದರ್ಭದಲ್ಲಿ ಅಕಸ್ಮಾತ್ತಾಗಿ ಹಣದ ಅಗತ್ಯ ಬೀಳಬಹುದು. ಆಗ ಈ ಹಣ ಉಪಯೋಗವಾದೀತು—ಎಂದುಕೊಂಡು ನನ್ನ ಜಾಣ್ಮೆಗಾಗಿ ನನ್ನನ್ನೇ ಶ್ಲಾಘಿಸಿ ಕೊಳ್ಳುತ್ತ ಮನೆಗೆ ಹೊರಟೆ.

ಪೇಟೆಯಲ್ಲಿ ಹಾಯ್ದು ಬರುತ್ತಿದ್ದಂತೆ ಸಂಪಾದಕ ಕಾಗವಾಡ ಸಿಕ್ಕಿದ. ನಗರದಲ್ಲಿ ಪ್ರಕಟವಾಗುತ್ತಿದ್ದ ನಾಲ್ಕು ವಾರಪತ್ರಿಕೆಗಳಲ್ಲೊಂದಾದ "ಕ್ರಾಂತಿಯ" ಸಂಪಾದಕ ಕಾಗವಾಡ. ನನ್ನಷ್ಟೇ ವಯಸ್ಸು. ಸಹಕಾರಿ ಸಂಘದ ಕಾರ್ಯ ದರ್ಶಿಯಾಗಿದ್ದಾಗಿನಿಂದ ಅವನೊಡನೆ ಪರಿಚಯವಿತ್ತು. ಅವನಿಗೆ ಒಂದೆರಡು ಬಾರಿ " ಜಾಹೀರ ನೋಟೀಸು "ಗಳನ್ನೂ ನಾನು ಕೊಡಿಸಿದ್ದೆ. ಸುತ್ತಲಿನ ಊರುಗಳಲ್ಲಿ ಅವನ ಪತ್ರಿಕೆಗೆ ಹತ್ತಿಪ್ಪತ್ತು ಮಂದಿ ಚಂದಾದಾರರನ್ನೂ ಕೂಡಿಸಿ ಕೊಟ್ಟಿದ್ದೆ. ಕಾಗವಾಡ ಒಳ್ಳೆಯ ಯುವಕ. ಬಡವರ ಕೈವಾರಿ. ಎಂತಲೇ ಅವನ ಬಗೆಗೆ ನಾನು ವಿಶ್ವಾಸವಿರಿಸಿಕೊಂಡಿದ್ದೆ.

" ಏನ್ರಿ ಸೆಕ್ರೆಟರಿಗಳೇ? ಬಹಳ ದಿನದಿಂದ ಕಾಣಿಸಲೇ ಇಲ್ಲಲ್ಲ ? " ಎಂದು ನಗುತ್ತಾ ಪ್ರಶ್ನಿಸಿದ ಕಾಗವಾಡ. ಯಾವಾಗಲೂ ನಗುನಗುತ್ತಲೇ ಇರುವುದು ಅವನದೊಂದು ವಿಶೇಷವಾಗಿತ್ತು.

" ನಾನೆಲ್ಲಿ ಸೆಕ್ರೆಟರಿ ಇದೀನಿ ಈಗ ? "

" ಇರಲಿಕ್ಕಿಲ್ಲ. ಆದರೂ ನಮಗೆ ಮಾತ್ರ ನೀವು ಯಾವಾಗಲೂ ಸೆಕ್ರೆಟರಿಗಳೇ ! ಏನು ವಿಶೇಷ ? ಎಲೆಕ್ಶನ್ ಅಂತೂ ಹತ್ತಿರ ಬಂತು. ಏನಂತಾರ ಸೆಟ್ಟರು ? "

" ಆ ಸೂಳೀಮಗನ ಮಾರಿ ಯಾರು ನೋಡ್ತಾರ ? " ಎಂದೆ ನಾನು.

" ಅಂದರೆ ? ಅಂದಿನಿಂದ ಭೆಟ್ಟೀನೇ ಇಲ್ಲನ್ರಿ ಹಾಗಾದರೆ ? "

" ಅವನ್ನ ಭೆಟ್ಟಿಯಾಗಿಯಾದರೂ ಏನ್ಮಾಡೂದು ಬಿಡ್ರಿ. "

" ಹೀಗಂದರೆ ಹ್ಯಾಗ್ರೀ ? ಅವನ್ನ ಹಾಗೇ ಬಿಡಬಾರದು. ಈ ಸಲ ಟಿಕೀಟೂ ಸಿಗ್ತದಂತಲ್ಲ ಅವಗೆ? ಅವನ ಶ್ರೀಮತಿಯೂ ಅರ್ಜಿ ಹಾಕಿದ್ದಾಳಂತೆ."

ನಿಜವಾಗಿ ಅದೊಂದು ಹೊಸ ಸುದ್ದಿಯಾಗಿತ್ತು ನನಗೆ.

" ಯಾವ ಶ್ರೀಮತಿ ? "

" ಗೊತ್ತೇ ಇಲ್ಲವೇ ನಿಮಗೆ ? ಬಸೆಟ್ಟಿಯ ಹೊಸ ಹೆಂಡತಿ ... ಪ್ರಭಾವತಿ.... "

" ಅವರ ವಿಷಯ ನನಗೇನು ಗೊತ್ತಿಲ್ಲರಿ. ನಾನವರನ್ನು ನೋಡಿಯೂ ಇಲ್ಲ. "

" ಮೂಸೂರಿನ ಮನೆಯಲ್ಲಿರಲಿಲ್ಲಂತೀರಾ ಅವಳು ? "

" ಇಲ್ಲರಿ. ಸೆಟ್ಟಿಯ ಕುಟುಂಬ ಯಾವಾಗಲೂ ಇಲ್ಲೇ ಅದ. ಅವನೊಬ್ಬನೇ ವಾರಕ್ಕೊಮ್ಮೆ ಊರಿಗೆ ಹೋಗಿ ಬರ್ತಿರ್ತಾನೆ. "

" ನೀವಿಲ್ಲಿ ಬಂದಾಗಲೂ ಒಮ್ಮೆಯೂ ಅವನ ಮನೆಗೆ ಹೋಗಿಲ್ಲ ? "

" ಇಲ್ಲ. ಸೆಟ್ಟೀದು ಬಹಳ ಸಂಶಯದ ಸ್ವಭಾವ. ಮನೆಗೆ ಯಾರನ್ನೂ ಕರೆಯೂದಿಲ್ಲ. ನಾನು ಅವನ್ನ ಭೆಟ್ಟಿಯಾಗುತ್ತಿದ್ದದ್ದು ಆಫೀಸಿನಲ್ಲೇ. "

ಮಾತನಾಡುತ್ತಿದ್ದ ಹಾಗೇ ನಾವು 'ಕ್ರಾಂತಿ'ಯ . ಕಾರ್ಯಾಲಯಕ್ಕೆ ಬಂದೆವು. ಮುದ್ರಣಾಲಯದ ಅಟ್ಟದ ಮೇಲಿದ್ದ ಒಂದು ಕೊಟಡಿಯಲ್ಲಿಯೆ

ಪತ್ರಿಕೆಯ ಕಾರ್ಯಾಲಯ ಹೂಡಿದ್ದ ಕಾಗವಾಡ. ನೆಲದ ಮೇಲೆಲ್ಲ ವೃತ್ತಪತ್ರಿಕೆಗಳು ಅಸ್ತವ್ಯಸ್ತವಾಗಿ ಹರಡಿಕೊಂಡಿದ್ದುವು. ಗೋಡೆಯ ಮೇಲೆ ಲೆನಿನ್ನರ ವರ್ಣಚಿತ್ರವೊಂದು ಎದ್ದುಕಾಣುತ್ತಿತ್ತು. ಅದನ್ನು ಬಿಟ್ಟರೆ ಬೇರೆ ಚಿತ್ರಗಳಿರಲಿಲ್ಲ. ಕೊಟಡಿಯಲ್ಲಿದ್ದುದು ಒಂದು ಮೇಜು, ಎರಡು ಕುರ್ಚಿ. ಅವುಗಳ ಬಳಿಯಲ್ಲಿಯೆ ಒಂದು ಈಚಲು ಚಾಪೆ ಹಾಸಿತ್ತು.

"ಈಗ ಹ್ಯಾಗದರೀ ನಿಮ್ಮ ಪೇಪರು ?"

"ಅದ್ಯ ಹಾಗೇ, ಮೊದಲಿನಂತೇ. ಎಲೆಕ್ಶನ್ ಬಂತು. ಇನ್ನು ಮೇಲೆ ಸ್ವಲ್ಪ ಜೋರಾಗಬಹುದು, ಅಷ್ಟೇ. ನಿಮ್ಮಿಂದ ಸ್ವಲ್ಪ ಸಹಾಯವಾಗಬೇಕಲ್ಲ?"

"ನನ್ನಂಥವನಿಂದ ಏನು ಸಹಾಯವಾದೀತು? ನನ್ನದೆಲ್ಲಾ ನಿಮಗೆ ಗೊತ್ತೇ ಅದ..."

"ಇಲ್ಲ, ಎಲ್ಲಾ ಅಂದರೆ ಎಲ್ಲಾ ಗೊತ್ತಿಲ್ಲ. ಅದಕ್ಕೇ ಕೇಳ್ತಾ ಇದೀನಿ ಬಸೆಟ್ಟಿಯಂಥಾ ಭಂಡರು ಕಾಂಗ್ರೆಸ್ ಟಿಕೀಟು ದೊರಕಿಸಿ ಎಲೆಕ್ಶನ್ನಿಗೆ ನಿಲ್ಲುತಾರೆ. ಅವರನ್ನೆಲ್ಲಾ ಈ ಸಲ ಚೆನ್ನಾಗಿ ಮಟ್ಟಹಾಕಲಿಕ್ಕೆ ಬೇಕು. ಈಗಿನಿಂದಲೇ ತಯಾರಿ ಮಾಡ್ತಿದೀನಿ ನಾನು. ನೀವು ನಿಮ್ಮ ಕಥೆ ಎಲ್ಲಾ ವಿವರವಾಗಿ ಬರೆದುಕೊಡಬೇಕು. ಇದೇ ವಾರದ ಪತ್ರಿಕೆಯಲ್ಲಿ ಪ್ರಕಟಿಸಿಬಿಡೋಣ."

"ನಾನೇನೋ ಬರೆದುಕೊಡಬಹುದು. ಆದರೆ ಅದನ್ನ ಪ್ರಕಟಿಸುವದರಿಂದ ನಿಮಗೆ ತೊಂದರೆಯಾಗಬಹುದಲ್ಲ ?"

"ನನಗೇನ್ರಿ ತೊಂದರೆ ?"

"ಮಾನಹಾನಿಯಾಯ್ತು ಅಂತ ಸೆಟ್ಟಿ ನಿಮ್ಮ ಮೇಲೆ ಕೇಸು ಹಾಕಬಹುದಲ್ಲ ?"

"ಬಸೆಟ್ಟಿಯಂಥಾ ದುಷ್ಟರು ಪತ್ರಿಕೆಗಳ ತಂಟೆಗೇ ಬರೂದಿಲ್ಲ. ಅವರು ಒಂದು ಕೇಸು ಹಾಕಿದರೆ ನಾವು ಮತ್ತೆ ಅವರ ಎಲ್ಲಾ ಹುಳುಕುಗಳನ್ನು ಬಯಲಿಗೆಳೀತೀವಿ ಅನ್ನೂದು ಅವರಿಗೆ ಗೊತ್ತಿರ್ತದ. ಅದಕ್ಕೇ ಏನಾರೆ ಬರಕೊಳ್ಳಲಿ ಅಂತ ಕಣ್ಮುಚ್ಚಿಕೊಂಡುಬಿಡುತಾರ. ಒಂದು ವೇಳೆ ಅವ ಕೇಸು ಹಾಕಿದರೂ ಅಂಜುವವರ್‍ಯಾರು ? ಇಂಥಾ ನೂರೆಂಟು ಕೇಸು ಅನುಭವಿಸೀನಿ ನಾನು."

"ಹಾಗಾದರೇನು ಅಡ್ಡಿಯಿಲ್ಲ."

ಬಸೆಟ್ಟಿಯಿಂದ ನನಗಾದ ಅನ್ಯಾಯವನ್ನೆಲ್ಲ ನಾನು ವಿವರಿಸಿ ಹೇಳಿದೆ. ಕಾಗೆ ವಾಡ ಆಗಲೇ ಒಂದು ಲೇಖನ ಬರೆದು ಸಿದ್ಧಗೊಳಿಸಿದ. ಅದನ್ನೇ ನಾನು ನನ್ನ ಹಸ್ತಾಕ್ಷರಗಳಲ್ಲಿ ಪ್ರತಿ ಮಾಡಿ ಕೊಡಬೇಕಾಯಿತು. ಬಸೆಟ್ಟಿಯ ಓ. ಸಿ. ಯ ವ್ಯವಹಾರದ ಬಗೆಗೂ ಆ ಲೇಖನದಲ್ಲಿ ಉಲ್ಲೇಖವಿತ್ತು. ಇಂಥ ಸಮಾಜ ಘಾತಕಿಗೆ ಟಿಕೀಟು ಕೊಟ್ಟರೆ ಕಾಂಗ್ರೆಸ್ಸು ಹಾಳಾಗಿ ಹೋಗುವುದೆಂದು ಕಡೆಯಲ್ಲಿ ಎಚ್ಚರಿಕೆ ಕೊಡಲಾಗಿತ್ತು.

"ಇದು ಪ್ರಕಟವಾದ ಮೇಲೆ ನೋಡಿರಿ ಮಜಾ! ಜಿಲ್ಲೆಯಲ್ಲೆಲ್ಲ ಸೆಟ್ಟಿಯ ವಿಷಯುವೇ ಆಗ್ತದ!" ಎಂದ ಕಾಗವಾಡ.

ಕಾಮಾಕ್ಷಿ ದಾರಿ ಕಾಯುತ್ತಿರಬಹುದೆಂದು ಭಾವಿಸಿ ಆ ರಾತ್ರಿ ನಾನು ಅವಳ ಮನೆಗೆ ಹೋದೆ ಆದರೆ ಕಾಮಾಕ್ಷಿಯ ಬದಲು, ಅವಳ ಮನೆಯ ಬಾಗಿಲಿಗೆ ಬಿದ್ದ ದೊಡ್ಡ ಬೀಗ ನನ್ನನ್ನೆದುರುಗೊಂಡಿತು!

ಸಮೀಪದಲ್ಲಿದ್ದ ಬೀಡಿ ಅಂಗಡಿಗೆ ಹೋಗಿ ಒಂದು ಸಿಗರೇಟು ಪೊಟ್ಟಣ ಕೊಂಡು, ಆ ಮನೆಯವರು ಎಲ್ಲಿ ಹೋದರೆಂದು ಸಹಜವಾದ ಸ್ವರದಲ್ಲಿ ವಿಚಾರಿಸಿದೆ.

"ಅವರೇ? ಮಧ್ಯಾನ್ನದಲ್ಲಿ ಎಲ್ಲಗೋ ಹೊಂಟು ಹೋದರು."

"ಮನೆ ಖಾಲೀ ಮಾಡಿ?"

"ಹಂಗೇ ಇರಬೇಕು. ಒಂದು ಲಾರಿಯಲ್ಲಿ ಮನೆಯ ಸಾಮಾನೂ ಹೇರಿ ಕೊಂಡು ಹೋದರು."

# ೭

ಕಾಮಾಕ್ಷಿಯಂತೂ ಮಾಯವಾಗಿ ಬಿಟ್ಟಳು. ಸೋಮಯ್ಯನ ಸೂಚನೆಯ ಪ್ರಕಾರವೆ ಬಸೆಟ್ಟಿ ಅವಳನ್ನು ಈ ನಗರದಿಂದ ಬೇರೆಡೆಗೆ ಸಾಗ ಹಾಕಿದುದು ಸ್ಪಷ್ಟವಿತ್ತು. ಅವಳು ಅದೃಶ್ಯವಾದುದರಿಂದ ನನ್ನ ಸಂಶೋಧನೆ ಥಟ್ಟನೆ ನಿಂತಂತಾಯಿತು. ಮುಂದೇನು ಮಾಡುವುದೆಂಬುದು ಹೊಳೆಯದೆ ನಾನು ದಿಙ್ಮೂಢನಂತಾದೆ. ಕಾಮಾಕ್ಷಿಯನ್ನು ಅವರು ಎಲ್ಲಿಗೆ ಕಳಿಸಿರಬಹುದು ? ಅದನ್ನು ಪತ್ತೆ ಮಾಡುವುದಾದರೂ ಹೇಗೆ ಸಾಧ್ಯ ? ನಾನು ಸುಲಭವಾಗಿ ಕಂಡು ಹಿಡಿಯದಂಥ ದೂರದ ಸ್ಥಳಕ್ಕೇ ಕಳಿಸಿರಬಹುದು. ಮುಂಬಯಿ–ಮದ್ರಾಸು–ಪುಣೆಗಳಂಥ ಮಹಾನಗರಗಳಿಗೆ ಸಾಗಿಸಿಬಿಟ್ಟಿದ್ದರೆ ನನ್ನಂಥವನು ಅವಳನ್ನು ಹುಡುಕಿತೆಗೆಯುವುದು ಅಶಕ್ಯವೇ ಆಗಿತ್ತು. ಏನೋ ಅಕಸ್ಮಾತ್ ಅವಳ ಭೆಟ್ಟಿಯಾದರೆ ಆಗಬೇಕು, ಅಷ್ಟೆ.

ಕಾಮಾಕ್ಷಿಯ ಬಗೆಗೆ ನನಗೆ ಅತ್ಯಂತ ಖೇದವೆನ್ನಿಸಿತು. ಆ ನೀಚರು ಅವಳ ಜೀವಕ್ಕೇನಾದರೂ ಅಪಾಯ ಮಾಡಿರಲಿಕ್ಕಿಲ್ಲವಷ್ಟೆ? ಎಂದುಕೊಂಡಾಗ ಕಳವಳವೂ ಉಂಟಾಯಿತು. ಅವರಂತೂ ಯಾವುದಕ್ಕೂ ಹೇಸುವವರಲ್ಲ. ಬಸೆಟ್ಟಿಯ ಮೇಲೆ ಸೇಡು ತೀರಿಸಿಕೊಳ್ಳಲು ಹೋಗಿ ಅಬಲೆಯೊಬ್ಬಳನ್ನು ಗಂಡಾಂತರಕ್ಕೀಡು ಮಾಡಿದಂತಾಯಿತಲ್ಲ ! ಎಂದು ನನ್ನ ಮನಸ್ಸು ಪರಿತಪಿಸ ತೊಡಗಿತು.

ಆ ಪಶ್ಚಾತ್ತಾಪದಿಂದ ಕೊರಗುತ್ತ ಎರಡು ದಿನ ಕೋಣೆಯಲ್ಲಿಯೇ ಬಿದ್ದುಕೊಂಡೆ. ರಾತ್ರೆ ಎದ್ದು ಹೋಗಿ ಸೆರೆಯ ಸೀಸೆ ತೆಗೆದುಕೊಂಡು ಬರುತ್ತಿದ್ದುದೆಷ್ಟೋ ಅಷ್ಟೆ ಊಟ ತಿಂಡಿಗಳ ಕಡೆಗೂ ಲಕ್ಷ್ಯವಿರಲಿಲ್ಲ. ರಾಧೆ ಗಾಬರಿಗೊಂಡು ಯಾವಾಗಲೂ ನನಗೆ ಅಂಟಿಕೊಂಡಂತೆಯೇ ಇರತೊಡಗಿದಳು.

ಅವಳು ಏನು ಕೇಳಿದರೂ ನಾನು ಉತ್ತರ ಕೊಡುತ್ತಿರಲಿಲ್ಲ ಆದರೂ ಬೇಸರ ಪಟ್ಟುಕೊಳ್ಳದೆ ಮತ್ತೆ ಮತ್ತೆ ಒತ್ತಾಯ ಮಾಡಿ ನನಗೆ ಅಷ್ಟಿಷ್ಟು ತಿಂಡಿ ತಿನ್ನಿ ಸುತ್ತಿದ್ದಳು. ರಾತ್ರಿಗಳಂತೂ ಸೆರೆಯ ಅಮಲಿನಲ್ಲಿ ದಾಟಿ ಹೋಗುತ್ತಿದ್ದುವು.

ಮೂರನೆಯ ದಿನ ಚಹದಂಗಡಿಯಲ್ಲಿ ಆ ವಾರದ "ಕ್ರಾಂತಿ" ಕಣ್ಣಿಗೆ ಬಿದ್ದಾಗ ನನ್ನ ಮನಸ್ಸಿಗೆ ಕೊಂಚ ಹುರುಪು ಬಂದಂತಾಯಿತು. ಬಸೆಟ್ಟಿ ಯನ್ನು ಬಯಲಿಗೆಳೆದು ನಾನು 'ಬರೆದಿದ್ದ' ಲೇಖನ ಮುಖಪುಟದ ಮೇಲೆಯೇ ಅಚ್ಚಾಗಿತ್ತು. ಬಸೆಟ್ಟಿಯ ಭಾವಚಿತ್ರವನ್ನೂ ಎಲ್ಲಿಂದಲೋ ದೊರಕಿಸಿ ಆ ಲೇಖನದೊಡನೆ ಪ್ರಕಟಿಸಿದ್ದ ಕಾಗವಾಡ.

ಎರಡು ಮೂರು ಬಾರಿ ಆ ಲೇಖನವನ್ನೆ ಮತ್ತೆ ಮತ್ತೆ ಓದಿದ ಬಳಿಕ ನನ್ನ ಆಲಸ್ಯ ಪೂರ್ತಿಯಾಗಿ ಮಾಯವಾಯಿತು ಮನಸ್ಸಿನಲ್ಲೆಲ್ಲ ತುಂಬಿ ಕೊಂಡಿದ್ದ ಸೇಡಿನ ಭಾವನೆ ತೃಪ್ತವಾದುದರಿಂದ ತುಂಬಾ ಆನಂದವೆನ್ನಿಸು ತ್ತಿತ್ತು. ಸಿಗರೇಟು ಹೊತ್ತಿಸಿಕೊಂಡು ಸೊಗಸಾಗಿ ಹೊಗೆ ಬಿಡುತ್ತ ಕಾಂಗ್ರೆಸ್ ಕಚೇರಿಯತ್ತ ಹೊರಟೆ. ನಡುವೆ ದಾರಿಯಲ್ಲಿ ಪೋಲೀಸ್ ಠಾಣೆಯ ಹತ್ತಿರ ಕಾಗವಾಡ ಭೆಟ್ಟಿಯಾದ.

"ಪೇಪರ್ ನೋಡಿರಬೇಕಲ್ಲ ?"

"ನೋಡಿದೆ, ಇದೇ ಈಗ !"

"ಸಮಾಧಾನ ಆಯ್ತೇ ಈಗಾದರೂ ?"

"Thanks....Thanks .. Editor Sahib !"

"ನನಗ್ಯಾಕೆ ಥ್ಯಾಂಕ್ಸು ? ನಿಮಗೇ ನಾನು ಥ್ಯಾಂಕ್ಸ್ ಕೊಡಬೇಕು."

"ನನಗ್ಯಾಕ್ರೀ ಮಹಾರಾಯರೆ ?"

"ಎರಡು ಸಾವಿರ ಪ್ರತಿ ಹೊರಡಿಸಿದ್ದೆ. ಎರಡೇ ತಾಸಿನಲ್ಲಿ ಒಂದೂ ಉಳಿಯದಂತೆ ಎಲ್ಲಾ ಮಾರಾಟವಾಗಿ ಹೋದವು. ಮುಂದಿನ ಸಂಚಿಕೆಗೆ ಕಾಗದ ಮುದ್ರಣಗಳ ಖರ್ಚಿನ ಚಿಂತೆ ಹೋಯಿತು," ಎಂದ ಕಾಗವಾಡ.

"ಪ್ರತಿವಾರ ಇಂಥಾ ಚಿಂತೆ ಇರೂದೇ ಏನ್ರಿ ?"

"ನಮ್ಮಂಥಾ ಪತ್ರಿಕೆಗಳಿಗೆ ಈ ತೊಂದರೆ ತಪ್ಪಿದ್ದಲ್ಲ. ಆದೇ 'ತುತೂರಿ' ಯ ಮಾತು ಬೇರೆ. ಯಾರೋ ಹಣ ಕೊಡ್ತಾರೆ, ಯಾರೋ ಬರೆದು ಕೊಡ್ತಾರೆ. ಚೈನಿಯೋ ಚೈನಿ !"

" ತುತೂರಿ ? ಸಾಹುಕಾರರನ್ನೆಲ್ಲಾ ಹೊಗಳ್ತಿರ್ತದಲ್ಲ, ಅದೇ ? "

" ಹೊಗಳಲೇಬೇಕಲ್ಲ ? ಅದು ಹುಟ್ಟಿಕೊಂಡದ್ದೇ ಅದಕ್ಕಾಗಿ. ಪ್ರತಿ ವಾರ ಒಬ್ಬೊಬ್ಬ ಸಾಹುಕಾರರ ಪ್ರಶಂಸಾಲೇಖನ ಪ್ರಕಟಿಸೂದು, ಅವರ ಫೋಟೋ ಹಾಕೂದು. ಸರಿ ಅವರು ಐವತ್ತೋ ನೂರೋ ಕೊಡ್ತಾರೆ. ತಮ್ಮ ಪ್ರಿಂಟಿಂಗ್ ಕೆಲಸಗಳನ್ನೂ ಅವನ ಪ್ರೆಸ್ಸಿಗೇ ಕೊಡ್ತಾರೆ. ಹೀಗಾಗಿ ಎರಡೇ ವರ್ಷಗಳಲ್ಲಿ ಇಪ್ಪತ್ತು ಸಾವಿರದ ಆಸ್ತಿ ಮಾಡಿಕೊಂಡಾನ ತುತೂರಿಯ ಸಂಪಾದಕ !"

" ನಿಮ್ಮದೇನೂ ಆಗಲಿಲ್ಲ ? "

" ಆಯಿತಲ್ಲ ಹಜಾಮತಿ ! ಒಂದೊಂದು ವಾರ ಕಾಗದಕ್ಕೂ ಹಣ ಇರೂದಿಲ್ಲ. ಚಂದಾದಾರರೇನೋ ಇದಾರೆ. ಆದರೆ ಅವರು ಸಕಾಲಕ್ಕೆ ಚಂದಾ ಕೊಟ್ಟಿರಲ್ಲೇನು ? ಜಾಹಿರಾತು ಅಂತೂ ಕಡಮೆಯೇ. ಇನ್ನು ಹಣ ಹ್ಯಾಗೆ ಬರಬೇಕು ? "

ಮಾತನಾಡುತ್ತಿದ್ದ ಹಾಗೆಯೆ ಆತ ನನ್ನ ಸಂಗಡವೇ ಬಂದ. ನನ್ನ ಲೇಖನ ಪ್ರಕಟವಾದ ಸಂಭ್ರಮದಲ್ಲಿ ಅವನಿಗೊಂದು ಕಪ್ಪು ಚಹವನ್ನಾದರೂ ಕುಡಿಸೋಣವೆನ್ನಿಸಿತು.

ಚಹದಂಗಡಿಯಲ್ಲಿನ " ಸ್ಪೆಶಲ್ ರೂಮಿ "ನಲ್ಲಿ ಆಸೀನರಾದ ಬಳಿಕ ಕಾಗವಾಡ ಹೇಳಿದ :

" ಈ ಒಂದೇ ಒಂದು ಲೇಖನದಿಂದ ನಿಮ್ಮ ಹೆಸರು ಜಿಲ್ಲೆಯಲ್ಲೆಲ್ಲಾ ಪ್ರಸಿದ್ಧವಾಗ್ತದ. ನೀವೂ ಪ್ರಖ್ಯಾತ ವ್ಯಕ್ತಿಯಾಗ್ತೀರಿ. ಈ ಕೀರ್ತಿಯನ್ನ ನೀವು ಕಾದುಕೋಬೇಕಂತ ನನಗನಿಸ್ತದ. "

"ಕೀರ್ತಿ ! ನನಗೇನು ಮಾಡೂದದ ಬಿಡಿರಿ. ನಾನೇನು ರಾಜಕಾರಣಿಯೆ?"

" ಯಾಕಾಗಬಾರದು ? "

"ನಮ್ಮಂಥವರಿಂದ ಎಂಥಾ ರಾಜಕಾರಣ ಆದೀತ್ರೀ ಕಾಗವಾಡ? ನಮಗೆ ಬೆಂಬಲ ಆದರೂ ಯಾರು ಕೊಟ್ಟಾರು ? "

" ಯಾರು ಅಂದರೆ ಜನ .. ಸಾಮಾನ್ಯ ಜನ.... ಬಿಳಿಯಟೋಪಿಯವರ ಅನ್ಯಾಯಗಳನ್ನ ಪ್ರತಿಭಟಿಸುವವರನ್ನ ಕಂಡು ಜನ ಮೆಚ್ಚಿಕೊಳ್ತಾರೆ. ನೀವು

ಹೀಗೇ ಚಟುವಟಿಕೆಯಿಂದ ಮುಂದುವರಿದರೆ ಉತ್ತಮ ಕಾರ್ಯಕರ್ತರಾಗಬಹುದು "

" No. I dont think so ! "

" ಇದೇ ನಿಮ್ಮ ತಪ್ಪು ಕಲ್ಪನೆ. ನೀವೇನು ಅಶಿಕ್ಷಿತರಲ್ಲ, ಹುಂಬರಲ್ಲ, ಅರಿಯದವರಲ್ಲ. ನಿಜ ಹೇಳುವದಾದರೆ ನೂರರಲ್ಲಿ ತೊಂಬತ್ತು ಮಂದಿ ಕಾಂಗ್ರೆಸ್ ಕಾರ್ಯಕರ್ತರೆಲ್ಲ ಅಶಿಕ್ಷಿತರೇ ಅಲ್ಲವೇನು ? ರಾಜಕಾರಣದ ಎ. ಬಿ. ಸಿ. ಆದರೂ ಗೊತ್ತದೇನು ಅವರಿಗೆ? ಕಾಂಗ್ರೆಸಿನ ತತ್ವ, ಇತಿಹಾಸ, ಆದರ್ಶ, ಸಮಾಜವಾದೀ ವಿಚಾರಸರಣಿಗಳ ಬಗ್ಗೆ ಸರಿಯಾಗಿ ತಿಳುಕೊಂಡವರು ಎಷ್ಟು ಮಂದಿ ಇರಬಹುದು ? ನಲವತ್ತೆರಡರ ಚಳುವಳಿಯ ಕಾಲಕ್ಕೆ ಸ್ಟೇಶನ್ ಸುಟ್ಟ ಶೌರ್ಯವೊಂದನ್ನೇ ಬಂಡವಲನ್ನಾಗಿ ಮಾಡಿಕೊಂಡು ಇಂದು ದೊಡ್ಡ ಪುಢಾರಿಗಳಾಗಿ ಮೆರೀತಿದಾರೆ ಅವರು. ಸಾಮಾನ್ಯಜನರಿಗೂ ಇವರ ಹುಳುಕೆಲ್ಲಾ ಗೊತ್ತಾಗಿದೆ. ಜನರ ಹಿತಕ್ಕಾಗಿ ಕಳಕಳಿಯಿಂದ ದುಡಿಯುವಂಥ ಸುಶಿಕ್ಷಿತ ಕಾರ್ಯಕರ್ತರಿಂದು ಬೇಕಾಗಿದಾರೆ. ನೀವು ಆ ಹಾದಿಯಲ್ಲಿ ನಡೆಯಬೇಕಂತ ನನ್ನ ಇಚ್ಛೆ. "

" ನನ್ನನ್ನೂ ಕಮ್ಯುನಿಸ್ಟ್ ಪಾರ್ಟಿಗೆಳೆಯುವ ವಿಚಾರವೋ ಏನು ? " ಎಂದು ನಾನು ನಗುನಗುತ್ತ ಕೇಳಿದೆ.

" ಹಾಗೆ ಒತ್ತಾಯದಿಂದ ನಾವು ಯಾರನ್ನೂ ಪಾರ್ಟಿಗೆ ಸೇರಿಸುವದಿಲ್ಲ. ಅಲ್ಲದೆ, ಕಾಂಗ್ರೆಸ್ಸಿನಂತೆ ಕಮ್ಯುನಿಸ್ಟ್ ಪಾರ್ಟಿ ಮೆಂಬರಾಗೂದು ಸುಲಭವೂ ಇಲ್ಲ. ಹತ್ತಾಣೆಯ ಒಂದು ಟೋಪಿ ಹಾಕಿ, ನಾಲ್ಕಾಣೆ ಕೊಟ್ಟುಬಿಟ್ಟರಾಯ್ತು; ಯಾರು ಬೇಕಾದರೂ ಕಾಂಗ್ರೆಸ್ ಮೆಂಬರಾಗಬಹುದು. ಕಮ್ಯುನಿಸ್ಟ್ ಪಾರ್ಟಿಯಲ್ಲಾದರೋ ಹೀಗೆಲ್ಲಾ ಸೇರಿಸಿಕೊಳ್ಳೂದಿಲ್ಲ. ಕಮ್ಯೂನಿಸ್ಟ್ ತತ್ವದಲ್ಲಿ ನಿಮಗೆ ವಿಶ್ವಾಸವಿದ್ದರೆ ಮಾತ್ರ ಎರಡು ವರ್ಷಗಳ ವರೆಗೆ ಉಮೇದುವಾರಿ ಸದಸ್ಯನಾಗಿ ಮಾಡಿಕೊಂಡು ಆ ಮೇಲೆ ನೀವು ಅರ್ಹರೆನಿಸಿದರೆ ಮಾತ್ರ ಮೆಂಬರಾಗಿ ಮಾಡಿಕೊಳ್ತಾರೆ. ಈ ಎರಡು ವರ್ಷ ನಿಮ್ಮನ್ನ ಒರೆಗೆ ಹಚ್ಚಿ ಪರೀಕ್ಷಿಸ್ತಾರೆ. ಆ ಪರೀಕ್ಷೆಗಳಲ್ಲಿ ಪಾಸಾದರೆ ಮಾತ್ರ ನಿಮಗೆ ಪಾರ್ಟಿಯಲ್ಲಿ ಪ್ರವೇಶ. ಇಲ್ಲ ಒದ್ದರಿಲ್ಲ. "

" ಅಬ್ಬಬ್ಬಾ ! " ಎನ್ನುತ್ತ ನಾನು ತುಟಿಯ ಮೇಲೆ ಬೆರಳಿರಿಸಿಕೊಂಡೆ. ಒಂದು ರಾಜಕೀಯ ಪಕ್ಷದ ಸದಸ್ಯನಾಗಬೇಕಾದರೆ ಇಷ್ಟು ಕಷ್ಟವೆ ! ಎಂದು

ಆಶ್ಚರ್ಯವಾಗದಿರಲಿಲ್ಲ. ಕಾಂಗ್ರೆಸ್ ಸದಸ್ಯತ್ವದ ಬಗೆಗೂ ಇಂಥದೊಂದು ನಿಷ್ಠುರ ನಿಯಮ ಏರ್ಪಡಿಸುವುದು ಆಗತ್ಯವೆಂದು ನನಗನಿಸಿತು. ಆ ಅಭಿಪ್ರಾಯ ವ್ಯಕ್ತಪಡಿಸಿದಾಗ ಕಾಗವಾಡನೆಂದ :

" ಕಾಂಗ್ರೆಸ್ಸಿಗರು ಇಂಥಾ ನಿಯಮ ಮಾಡುವುದು ಶಕ್ಯವೇ ಇಲ್ಲ. ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಳ್ತಾರೇನು ಯಾರಾದರೂ? ಅಂಥದೊಂದು ನಿಯಮ ಬಂದರೆ ಬಸೆಟ್ಟಿ, ಮಲ್ಲಿಕಪ್ಪ, ಷಡಾಕ್ಷರಪ್ಪರಂಥಾ ಧಾಂಡಿಗರು ಅಧಿಕಾರಸ್ಥಾನಗಳನ್ನ ಬಿಟ್ಟುಕೊಟ್ಟು ಕಾಂಗ್ರೆಸ್ಸಿನಿಂದ ಹೊರಬೀಳಬೇಕಾದೀತು. ಇವರು ಕಾಂಗ್ರೆಸ್ ಕಮಿಟಿಗಳ ಅಧಿಕಾರಸ್ಥಾನ ಹಿಡಿದುಕೊಂಡದ್ದಾದರೂ ಹ್ಯಾಗೆ ? ನಿಮಗೆ ಗೊತ್ತಿರಬೇಕಲ್ಲ ? "

" ಹಣದ ಸಹಾಯದಿಂದ. "

" ಹೂಂ. ಹಣದಿಂದ. ನೂರಾರು ರೂಪಾಯಿ ಚೆಲ್ಲಿ ಯಾರ್‍ಯಾರದೋ ಹೆಬ್ಬೆರಳು ಒತ್ತಿಸಿಕೊಂಡು ಬೋಗಸ್ ಮೆಂಬರುಗಳನ್ನ ಮಾಡೋದು, ಆ ಖೊಟ್ಟಿ ಸದಸ್ಯರ ಬೆಂಬಲದ ಮೇಲೆ ಕಮಿಟಿಗಳಿಗೆ ಆರಿಸಿಬರೋದು, ಆಮೇಲೆ ಕಮಿಟಿ ಸದಸ್ಯರೆಲ್ಲರಿಗೂ ಲಂಚ ತೆತ್ತು ಅಧ್ಯಕ್ಷ–ಉಪಾಧ್ಯಕ್ಷ–ಕಾರ್ಯದರ್ಶಿ ಸ್ಥಾನ ಗಿಟ್ಟಿಸಿಕೊಳ್ಳೋದು ... "

" ಸರಿಯಾಗಿ ಹೇಳಿದಿರಿ. ಜಿಲ್ಲೆಯಲ್ಲಿಯ ಮಂಡಲ ಕಾಂಗ್ರೆಸ್ ಕಮಿಟಿಗಳನ್ನೆಲ್ಲ ಹೀಗೇ ಮಾಡಿ ಹಿಡಕೊಂಡುಬಿಟ್ಟಾರ ಮಲ್ಲಿಕಪ್ಪನ ಗ್ಯಾಂಗಿನವರು. "

" ಇಂಥಾದ್ದು ಕಮ್ಯೂನಿಸ್ಟ್ ಪಾರ್ಟಿಯಲ್ಲಿ ನಡೆಯೂದು ಶಕ್ಯವೇ ಇಲ್ಲ. ಯಾವನಾದರೊಬ್ಬ ಅಕಸ್ಮಾತ್ ಇಂಥಾ ಅನಾಚಾರಕ್ಕೆ ಬಿದ್ದದ್ದು ಗೊತ್ತಾದರೆ ಅವನನ್ನ ಆಗಿಂದಾಗ ಪಾರ್ಟಿಯಿಂದ ಹೊರಗೆ ಹಾಕ್ತಾರೆ. ಅವನ ಸ್ಥಾನಮಾನ, ಹಣ, ದೊಡ್ಡಿಸ್ತಿಕೆ ಏನೂ ನೋಡೋದಿಲ್ಲ. ಸಾಕ್ಷಾತ್ ಪಾರ್ಟಿಯ ಅಧ್ಯಕ್ಷನೇ ಹೀಗೆ ಮಾಡಿದರೂ ಕೂಡಾ ಅವನಿಗೂ ಶಿಕ್ಷೆ ತಪ್ಪೋದಿಲ್ಲ. "

" ಹಾಗಾದರೆ ನಿಮ್ಮದೇ ಚಲೋ ಪಾರ್ಟಿ ಅಂದಂತಾಯ್ತು ? "

" ಚಲೋ ಇದ್ದರೇನು, ಏನಿದ್ದರೇನು ? ನಮ್ಮ ಜನ ಮಾತ್ರ ವಿಚಿತ್ರವೆ. ಕಾಂಗ್ರೆಸ್ಸಿನಲ್ಲಿ ಏನೂ ಅರ್ಥ ಉಳಿದಿಲ್ಲ ಅನ್ನೋದು ಗೊತ್ತಿದ್ದರೂ ಮತ್ತೆ ಅದಕ್ಕೇ ವೋಟು ಕೊಡ್ತಾರೆ. ನಮ್ಮ ಪಾರ್ಟಿಗೆ ಬೆಂಬಲ ಕೊಡೋದಕ್ಕೂ

ಅಂಜಿ ಸಾಯುವ ಹೇಡಿಗಳೇ ಬಹಳ. ನಿಮ್ಮಂಥಾ ತರುಣರಾದರೂ ಹೀಗೆ ಮಾಡಬಾರದು. "

" ನಾನೇನು ಮಾಡಲಿ ಕಾಗವಾಡ ? ನನಗೆ ಇಂಥಾದ್ದಕ್ಕೆಲ್ಲಾ ಉತ್ಸಾಹ ಇಲ್ಲ ಬಿಡಿರಿ. "

" ಉತ್ಸಾಹ ಇಲ್ಲ ಅನ್ನುತ್ತ ಕೂತರೆ ಸಾಯುವವರೆಗೂ ಹಾಗೇ ಕೂಡ್ರ ಬೇಕಾದೀತು. ಈಗಂತೂ ನಿಮ್ಮದೊಂದು ಲೇಖನ ಪ್ರಕಟವಾಯ್ತು. ಅದನ್ನ ಪ್ರಕಟಿಸೋದರಲ್ಲಿ ನಿಮ್ಮ ಉದ್ದೇಶ ಏನು ? ಬಸೆಟ್ಟಿಯಂಥಾ ಒಬ್ಬ ಜನ ದ್ರೋಹಿಯನ್ನ ಬಯಲಿಗೆಳೆದು ಅವನ ನಿಜ ಸ್ವರೂಪವನ್ನು ಜನರೆದುರು ಇಡೋದೇ ಅಲ್ಲವೇನು ? ಆದರೆ ಇಷ್ಟರಿಂದಲೇ ಆ ಕೆಲಸ ಆಗುವಂತಿಲ್ಲ. ಬಸೆಟ್ಟಿಯನ್ನ ಬಗ್ಗು ಬಡಿಯೂದನ್ನ ಹೀಗೇ ಮುಂದುವರಿಸಬೇಕು. ಅಲ್ಲದೆ ಇದೊಂದು ವೈಯಕ್ತಿಕ ವಿಚಾರವಾಗಿಯೂ ಉಳಿಯಬಾರದು. ಒಬ್ಬ ಬಸೆಟ್ಟಿಯನ್ನ ನೀವು ಬಯಲಿಗೆಳೆದರೆ ಅವನಂಥಾ ಸಾವಿರ ಸೆಟ್ಟಿಗಳು ಮತ್ತೆ ಉಳಿದೇ ಉಳಿಯುತ್ತಾರೆ. ಅಂತೇ ಇಂಥಾ ಎಲ್ಲ ದುಷ್ಟ ಸೆಟ್ಟಿ ಸಾಹುಕಾರರನ್ನೂ ಮಟ್ಟ ಹಾಕಿ ಅವರ ಹಿಡಿತದಿಂದ ಜನರನ್ನ ಬಿಡಿಸೋದೇ ನಿಮ್ಮ ನಿಜವಾದ ಉದ್ದೇಶವಾಗಬೇಕು. "

ಕಾಗವಾಡ ಹೇಳುತ್ತಿದ್ದುದು ನನಗೂ ಮನವರಿಕೆಯಾಗುತ್ತಿತ್ತು. ಆದರೆ, ಅಂದಿನ ನನ್ನ ಮನೋಸ್ಥಿತಿಯಲ್ಲಿ ಅಂಥ ಧ್ಯೇಯವಾದಕ್ಕೆಲ್ಲ ನಾನು ಒಲಿಯುವಂತಿರಲಿಲ್ಲ.

" ಒಂದು ವಿಷಯ ಹೇಳ್ತೀನಿ. ನಿಮ್ಮ ಹಿತಕ್ಕೆಂದೇ ಹೇಳ್ತೀನಿ. ಸಿಟ್ಟಾಗಲಿಕ್ಕಿಲ್ಲಪಷ್ಟೆ ? "

" ಸಿಟ್ಟ್ಯಾಕೆ ? ನೀವು ನನ್ನ ಹಿತೈಷಿಯಲ್ಲೇನು ? ಅಗತ್ಯ ಹೇಳಿರಿ. "

" ಏನಾರೆ ಮಾಡಿ ಮೊದಲು ನೀವು ಆ ಚಟವನ್ನಷ್ಟು ಬಿಡಬೇಕು ನೋಡಿರಿ. ಅದರಿಂದಲೇ ನಿಮ್ಮ ಉತ್ಸಾಹವೆಲ್ಲಾ ಇಲ್ಲವಾಗಿರೋದು. "

" ಊಹೂಂ. ನನ್ನಲ್ಲಿ ಅಷ್ಟಿಷ್ಟು ಉತ್ಸಾಹ ಉಳಿದಿರಲಿಕ್ಕೆ ಕಾರಣವಾದದ್ದೇ ಆ ಚಟ ! "

" ಅದೇ ನಿಮ್ಮ ತಪ್ಪು ಕಲ್ಪನೆ. ಮನಸ್ಸಿನ ದುಃಖವನ್ನ ತಾತ್ಕಾಲಿಕವಾಗಿ ಇಲ್ಲವಾಗಿಸಲು ಆ ಚಟ ಸಹಾಯ ಮಾಡಬಹುದು. ಆದರೆ ಅದೊಂದು

ಭ್ರಮೆ. ಒಂದು ದುಃಖವನ್ನು ಕಳಕೊಳ್ಳಲು ಹೋಗಿ ನೀವು ಸೆರೆಯಂಥಾ ಮಹಾರಾಕ್ಷಸನ ಬಲೆಯಲ್ಲಿ ಸಿಕ್ಕು ಬೀಳ್ತೀರಿ. ಆದರ ಬದಲು, ಈ ದೇಶದ ಕೋಟ್ಯಂತರ ಜನರ ದಾರಿದ್ರ್ಯದುಃಖ ದೂರಗೊಳಿಸಲು ನೀವು ದುಡಿಯ ತೊಡಗಿದರೆ ನಿಮ್ಮ ಖಾಸಗೀ ದುಃಖ ಹೇಳಹೆಸರಿಲ್ಲದೆ ಮಾಯವಾಗ್ತದ.... "

ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಅನಂತರ ನಾನು ಕೇಳಿದೆ :

" ನಾನು ಏನು ಮಾಡಬೇಕಂತೀರಿ ನೀವು ? "

" ಮೊತ್ತ ಮೊದಲು ಕುಡಿಯೋದನ್ನ ಬಿಡಬೇಕಂತೀನಿ. "

" ಬಿಡಬಹುದಲ್ಲ ? ಅದೇನು ಅಷ್ಟು ದೊಡ್ಡ ವಿಷಯವಲ್ಲ. "

" ಅಂಥಾ ನಿಗ್ರಹ ಶಕ್ತಿ ಉಂಟು ಹಾಗಾದರೆ ? "

" ಪ್ರಯತ್ನ ಮಾಡಿ ನೋಡ್ತೀನಿ. "

" Very good ! ಇನ್ನು ಎರಡನೆಯದೆಂದರೆ ಇಂದಿನಿಂದಲೇ ನೀವು ಸಾರ್ವಜನಿಕ ಕಾರ್ಯಕ್ಕೆ ತೊಡಗಬೇಕು. "

" ಅಂದರೇನೇನು ಮಾಡೋದು ? "

" ಹೋಟಲ್ ಕೆಲಸಗಾರರ ಸಂಘ, ಬೀಡಿ ಕಾಮಗಾರರ ಸಂಘ, ಮುನಸಿಪಲ್ ಕೆಲಸಗಾರರ ಸಂಘ ಹೀಗೆ ಹತ್ತಿಪ್ಪತ್ತು ಸಂಘಗಳುಂಟು ಈ ನಗರದಲ್ಲಿ. ಅವರಿಗೆಲ್ಲಾ ನಿಮ್ಮ ಪರಿಚಯ ಮಾಡಿಕೊಡ್ತೀನಿ. ಈ ಸಂಘಗಳ ಕೆಲಸದಲ್ಲಿ ನೀವು ತೊಡಗಿದಿರೆಂದರೆ ಈ ಚಟದ ನೆನಪೂ ಆಗುವದಿಲ್ಲ. "

" ಆಗಲಿ ಕಾಗವಾಡ. ವಿಚಾರ ಮಾಡ್ತೀನಿ, " ಎಂದು ಅವನಿಗೆ ಆಶ್ವಾಸನವಿತ್ತು ಅವನನ್ನು ಬೀಳ್ಕೊಂಡು ಮತ್ತೆ ಕಾಂಗ್ರೆಸ್ ಕಚೇರಿಯ ಹಾದಿ ಹಿಡಿದೆ.

ದೇವಸ್ಥಾನದೆದುರು ಹಾಯ್ದು ನಾನು ಕಾಂಗ್ರೆಸ್ ಕಾರ್ಯಾಲಯದತ್ತ ಹೊರಳುತ್ತಿದ್ದಂತೆಯೇ ಅದೇ ಕಡೆಗೆ ನಡೆದಿದ್ದ ಮುದ್ದಪ್ಪ ಭೆಟ್ಟಿಯಾದ. ಅನೇಕ ದಿನಗಳಿಂದ ಮುಖಕ್ಷೌರವಿಲ್ಲದೆ ಅರ್ಧ ಇಂಚಿನಷ್ಟು ಗಡ್ಡ ಬೆಳೆದಿತ್ತು ಅವನ ಕೆನ್ನೆಗಳ ಮೇಲೆ. ಒಂದು ವಾರದಿಂದ ಬಟ್ಟೆಗಳನ್ನೂ ಬದಲಿಸದೆ ಎಲ್ಲವೂ ಹೊಲಸಾಗಿದ್ದುವು. ಗಾಂಧೀಟೋಪಿಯ ಮೇಲಿನ ಅರ್ಧಭಾಗ ಬಿಳಿಯದಾಗಿದ್ದರೆ ಕೆಳಗಿನ ಭಾಗ ಎಣ್ಣೆಯಿಂದಲೂ ಹೊಲಸಿನಿಂದಲೂ ಕಂದು ಬಣ್ಣ ಕಳೆದಿತ್ತು.

ನನ್ನ ಲೇಖನವನ್ನು ಆ ವೇಳೆಗಾಗಲೇ ಅವನೂ ಓದಿದಂತಿತ್ತು. ನನ್ನನ್ನು ನೋಡುತ್ತಲೂ ನನ್ನ ಬೆನ್ನು ಚಪ್ಪರಿಸಿ, " ಶಾಬಾಸ್ ! ಚಲೋ ಕೆಲಸ ಮಾಡಿದಿರಿ ! " ಎಂದು ಪ್ರಶಂಸಿಸಿದ.

" ನಾನೇನು ಮಾಡಿದೆ ಮುದ್ದಪ್ಪ ? "

" ಏನು ಮಾಡಿದಿರಿ ? ನೀವೇನು ಮಾಡೀರಸ್ನೊದು ನಿಮಗೇ ಗೊತ್ತಾಗಿಲ್ಲ ಹಂಗಾದರ ? ಬಸೆಟ್ಟಿಯನ್ನ ಹುಗದು ಮಣ್ಣು ಮುಚ್ಚಿಬಿಟ್ಟಿರಿ ಒಂದೇ ಲೇಖನದಿಂದ ! ಆ ಸೂಳೀಮಗನ್ನ ಬಯಲಿಗೆಳೆಯುವವರು ಯಾರಾರೆ ಬೇಕಾಗಿತ್ತು. ನೀವು ಧೈರ್ಯದಿಂದ ಆ ಕೆಲಸ ಮಾಡಿದಿರಿ. ಕಾಗವಾಡನೂ ಸಾಹಸ ಮಾಡಿ ಅದನ್ನ ಪ್ರಕಟಿಸಿದ. ಇನ್ನುಮ್ಯಾಲ ಕಾಂಗ್ರೆಸ್ ಕಮೀಟಿಯೊಳಗ ಮಾರೀ ತೋರಿಸಿದರ ಹೇಳಿರಿ ಸೆಟ್ಟಿ ! "

" ಅವ ಹಾಗೆ ಅಡಗಿಕೊಂಡು ಕೂತಾನು ಅಂತ ನನಗೇನು ಅನಿಸೂದಿಲ್ಲ ಬಿಡಿರಿ. ಮೊದಲು ಅವಗೆ ನಾಚಿಕೆ ಇದ್ದರೆ ಹೌದೋ ಅಲ್ಲೋ ? ಅದನ್ನೇ ಬಿಟ್ಟಾನಂದ ಮ್ಯಾಲ ಯಾರು ಏನು ಬರೆದರೇನು ಅವಗೆ ?"

" ಎಷ್ಟೋ ನಾಚಿಕೆಗೇಡಿ ಆದರೇನ್ರಿ? ಜನರೆದುರು ಸಂಭಾವಿತನಂಗ ಬರೂದಕ್ಕ ಸ್ವಲ್ಪಿಲ್ಲ ಸ್ವಲ್ಪ ಅಸಹ್ಯ ಅನಿಸೂದೇ ಅಲ್ಲಾ ? "

" ಅಸಹ್ಯ ಅನ್ನುವ ಶಬ್ದವೇ ಅವಗೆ ಗೊತ್ತಿಲ್ಲ ಬಿಡಿರಿ. "

" ಅಂತೂ ಉತ್ತಮ ಕೆಲಸ ಮಾಡಿದಿರಿ. ಟಿಕೀಟಿನ ಗದ್ದಲ ನಡೆದಿರುವ ಈ ಸಮಯದಲ್ಲೇ ಈ ಲೇಖ ಬಂದದ್ದೂ ಇನ್ನೂ ನೆಟ್ಟಗಾತು. ನಾಡದ್ದು ಸದಾಸ್ಮಿತಪ್ಪನವರು ಬರುವವರಿದಾರ ಈ ಊರಿಗೆ. ಅವರಿಗೊಂದು ಕಾಪಿ ಒಯ್ದು ಕೊಡಬೇಕು. ಓದಿ ನೋಡಿದರೆ ದಂಗಾಗಿ ಹೋಗತಾರ. "

" ನಾಡದು ಬರುವವರೇ ? ಯಾಕೆ ? "

" ಯಾಕಂದರೆ ? ಹಿಂಗೇ ಇರತಾವ ಕೆಲಸ. ಚುನಾವಣೆ ಹತ್ತರ ಬಂತಲ್ಲ? ಅದರವೇನು ಕಡಿಮೆ ಖರ್ಚೇ ? ಲಕ್ಷಗಟ್ಟಲೆ ರೂಪಾಯಿ ಬೇಕಾಗತಾವಲ್ಲ ? ಅದಕ್ಕೇ ಆ ಫಂಡು ಕೂಡಿಸಲಿಕ್ಕೆ ಹೊಂಟಾರ ಆಯ್ತು. "

" ನೀವೂ ಕೊಟ್ಟಿರೇನ್ರಿ ಅರ್ಜಿ ? "

" ಕೊಡಬೇಕಂತ ಮಾಡೀನಿ. ಕೊಡು ಕೊಡು ಅಂತ ನಮ್ಮ ಜನರೂ

ಹೇಳುತಾರ. ಆದರ.... ನಮ್ಮಂಥಾ ಬಡವರೆಲ್ಲಾ ಅರ್ಜಿ ಕೊಡೂದು ಕಠಿಣ ಆಗೈತಿ ಈ ಕಾಲದಾಗ. "

"ಅರ್ಜಿ ಕೊಡಲಿಕ್ಕೇನ್ರೀ ಕಠಿಣ? ಎರಡು ರೂಪಾಯಿ ಖರ್ಚು ಮಾಡಿದ ರಾಯ್ತು— ಫಾರ್ಮು ಕೊಡತಾರ. ಅಷ್ಟಾದರೂ ಆಗಲಿಲ್ಲೇನು ? "

ಮುದ್ದಪ್ಪ ಕಣ್ಣುಗಳನ್ನರಳಿಸಿ ಕಟುವಾಗಿ ನಗುತ್ತ ಹೇಳಿದ :

" ಯಾವ ಕಾಲದ ಮಾತು ಹೇಳ್ತೀರಿ ನೀವು ಸದಾಶಿವಪ್ಪ ? ಅದೆಲ್ಲಾ ಸ್ವಾತಂತ್ರ್ಯಪೂರ್ವದ ಮಾತು. ಈಗ-ಸ್ವಾತಂತ್ರ್ಯ ಬಂದು ಹದಿನಾಲ್ಕು ವರ್ಷ ಆದಮ್ಯಾಲ ಕಾಂಗ್ರೆಸ್ಸು, ಕಾಂಗ್ರೆಸ್ಸಿನ ನಿಯಮ ಎಲ್ಲಾ ಎಲ್ಲಾ ಬದಲಾಗ್ಯಾವ. ಬಸೆಟ್ಟಿ, ಮಲ್ಲಿಕಪ್ಪರಂಥಾ ಶ್ರೀಮಂತರ ಕೈಯಾಗ ಕಾಂಗ್ರೆಸ್ಸು ಸಿಕ್ಕಮ್ಯಾಲ ಅವರಿಗೆ ಮಾತ್ರ ಅನುಕೂಲ ಆಗುವ ಹಂಗ ಅದರ ನಿಯಮಗಳನ್ನೂ ಮಾಡುತಿದಾರ, ಟಿಕೀಟಿಗೆ ಅರ್ಜಿ ಹಾಕುವವರು ಪ್ರತಿಯೊಬ್ಬರೂ ಏಳುನೂರು ರೂಪಾಯಿ ಡಿಪಾಜಿಟ್ ಇಡಬೇಕಾಗ್ತದ ಈಗ ! "

ನಿಜವಾಗಿಯೂ ಅದೊಂದು ಹೊಸ ಸಮಾಚಾರವಾಗಿತ್ತು ನನಗೆ.

" ಏಳುನೂರು ? ಅಷ್ಟೊಂದು ಹಣ ಡಿಪಾಜಿಟ್ ಯಾಕಿಡಬೇಕು ? "

" ಯಾಕಂದರೆ— ಅದರಾಗ ಅನೇಕ ಗುಟ್ಟು ಅದಾವ. ಮೊದನೇದು ಅಂದರೆ— ನಮ್ಮಂಥಾ ಬಡ ಕಾರ್ಯಕರ್ತರಿಗೆ ಅಷ್ಟು ಹಣ ಡಿಪಾಜಿಟ್ ಇಡೂದಕ್ಕಾಗುವದಿಲ್ಲ. ಬೇರೆ ಉಪಾಯವೇ ಇಲ್ಲವಾದ್ದರಿಂದ ನಮ್ಮಂಥವರು ಟಿಕೀಟಿಗಾಗಿ ಅರ್ಜಿ ಹಾಕುವ ಗೊಡವೆಗೇ ಹೋಗುವದಿಲ್ಲ. ಬಸೆಟ್ಟಿ ಮಲ್ಲಿಕಪ್ಪರಂತೆ ಹೆಂಗೋ ಹಣ ಮಾಡಿಕೊಂಡ ಜನರು ಮಾತ್ರ ಅರ್ಜಿ ಹಾಕ್ತಾರೆ. ಆಮ್ಯಾಲ ಅವರಂಥವರಿಗೇ ಟಿಕೀಟೂ ಸಿಗ್ತೈತಿ. ಅಸೆಂಬ್ಲಿಯೊಳಗೆಲ್ಲಾ ಇಂಥಾ ಶ್ರೀಮಂತರೇ ಆದರಂದರ ಮಂತ್ರಿಮಂಡಲವೂ ಅವರದೇ ಆಗತೈತಿ. ತಮಗೆ ಅನುಕೂಲ ಆಗುವ ಹಂಗ ರಾಜ್ಯ ನಡಸಲಿಕ್ಕೆ ಅನುಕೂಲ ಆಗತೈತಿ. ಇನ್ನು ಎರಡನೇದು ಅಂದರ— ಚುನಾವಣೆ ಮುಗಿಯೂತನಕ ಅದರ ಖರ್ಚಿಗಾಗಿ ಸುಲಭದಾಗ ಹಣ ಕೂಡಿಸುವ ಯುಕ್ತಿ ಇದು. ಒಂದೊಂದು ಅಸೆಂಬ್ಲಿ ಸ್ಥಾನಕ್ಕ ಏಳೇಳು ಮಂದಿ ಅರ್ಜಿ ಹಾಕೂದೂ ನಡದೈತಲ್ಲ ? ಏಳು ಮಂದಿ ಏಳುನೂರಂದರ ಎಷ್ಟಾತು ಹಣ ? ನೂರು ಕಡಮೆ ಐದುಸಾವಿರ

ಆತಲ್ಲ ? ಒಂದೇ ಕ್ಷೇತ್ರಕ್ಕ ಐದು ಸಾವಿರ ಅಾದರ ಎರಡುನೂರಾಎಂಟು ಕ್ಷೇತ್ರ ಗಳಿಗೆಷ್ಟಾತು ನೀವೇ ಲೆಕ್ಕ ಹಾಕಿ ನೋಡಿರಿ ಅಲ್ಲದೆ ಪಾರ್ಲಿಮೆಂಟ್ ಟಿಕೀಟಿನ ಡಿಪಾಜಿಟ್ ಬೇರೇನೇ. ಅದು ಅಸೆಂಬ್ಲಿಗಿಂತ ಹೆಚ್ಚು ಇದರ ಎರಡು ಪಟ್ಟು. ಸರಿ. ನಮ್ಮಂಥಾ ದರಿದ್ರ ಮಂದಿ ಅಸೆಂಬ್ಲಿಗೂ ಹೋಗುವಂತಿಲ್ಲ, ಪಾರ್ಲಿ ಮೆಂಟಿಗೂ ಹೋಗುವಂತಿಲ್ಲ. ಅದೆಲ್ಲಾ ನಮಗೆ ಹಗಲುಗನಸು, ಅಷ್ಟೇ. ಎಂ. ಎಲ್. ಎ. ಗಳು, ಎಂ ಎಲ್.ಸಿ. ಗಳು, ಎಂ. ಪಿ. ಗಳು ಎಲ್ಲರೂ ರೊಕ್ಕದ ಮಂದಿ. ಮತ್ತೆ ಇವರೆಲ್ಲಾ ಆರಿಸಿಹೋಗೋದು ರೈತರ ವೋಟಿನಿಂದ. ಬಸವ ಣ್ಣನ ಚಿತ್ರ ತೋರಿಸಿ ರೈತರಿಗೆ ಮೋಸಾ ಮಾಡಿ ಕಾಂಗ್ರೆಸ್ಸು ನಿಮ್ಮದೇ ಅಂತ ಹೇಳಿ ದೊರೆಗಳಾಗುವವರು ಇಂಥಾ ರೊಕ್ಕದ ಮಂದಿ ! "

" ನಮ್ಮ ರೈತರಾದರೂ ಯಾಕೆ ತಿಳುಕೋಬಾರದು ಈ ಮೋಸಗಾರಿಕೆ ಯನ್ನ ! "

" ಅವರಿಗೆ ತಿಳಿಯುವದಾದರೂ ಹ್ಯಾಂಗ ಹೇಳಿರಿ ಬೆಳಗಿನಿಂದ ಸಂಜೀ ತನಕಾ ಹೊಟ್ಟೆಗಾಗಿ ದುಡಿಯೂದರಾಗs ಅವರಿಗೆ ಸಾಕಾಗಿ ಹೋಗತೈತಿ. ನೂರಕ್ಕ ತೊಂಭತ್ತು ಮಂದಿಗೆ ಓದಲಿಕ್ಕೂ ಬರೀಲಿಕ್ಕೂ ಬರೂದಿಲ್ಲ. ವರ್ತ ಮಾನಪತ್ರ ಓದಿ ಇಂಥಾ ವಿಷಯ ತಿಳುಕೊಳ್ಳೂದೂ ಶಕ್ಯ ಇಲ್ಲ. ನಮ್ಮಂಥ ವರು ಹೇಳಲಿಕ್ಕೆ ತಯಾರಿದ್ದರೂ ಕೇಳಲಿಕ್ಕೆ ಅವರಿಗೆ ಪುರಸತ್ತಿರೂದಿಲ್ಲ. ದಿನ ವಿಡೀ ದುಡದು ದುಡದು ದಣಿದು ಬಂದಿರತಾರ. " ಅದೆಲ್ಲಾ ನಮಗೇನ ಮಾಡೂದು ಬಿಡಪಾ ! " ಅಂತ ಹೇಳಿ ಮಲಗಿಬಿಡುತಾರ. ಎಲೆಕ್ಶನ್ ಕಾಲಕ್ಕ ಮಾತ್ರ ಕಾಂಗ್ರೆಸ್ ಮಂದಿ ಬಂದು ಅದೂ ಇದೂ ಸುಳ್ಳು ಹೇಳಿ ಸರಳ ರೈತ ರನ್ನ ಮರುಳುಮಾಡಿ ಬಸವಣ್ಣನ ಚಿತ್ರಕ್ಕ ವೋಟು ಹಾಕಿಸಿಕೊಂತಾರ. ಹಿಂಗೇ ನಡದೈತಿ ಹತ್ತು ವರ್ಷದಿಂದ. ಈ ವರ್ಷ ಆಗೂದೂ ಹಂಗೇ ! ರೈತರ ಆರ್ಥಿಕ ಸ್ಥಿತಿ ಸುಧಾರಿಸಿ ಅವರೆಲ್ಲಾ ಸುಶಿಕ್ಷಿತರಾಗಿ ಓದಲಿಕ್ಕೆ ಬರೀಲಿಕ್ಕೆ ಕಲಿತು ಇಂಥಾ ವಿಷಯ ತಿಳುಕೊಂಡಮ್ಯಾಲ ಏನೋ ಬದಲಾಗಬಹುದು ಈ ಪರಿಸ್ಥಿತಿ. ಅಲ್ಲಿಯ ತನಕ ಹಿಂಗೇ ಸಾಗುತೈತಿ ಟೊಪಿಗಿಯವರ ಲಫಂಗತನ ! "

" ಟೊಪಿಗಿಯವರಂತ ಯಾಕೆ ಅನ್ನಬೇಕು ? ನಿಮ್ಮ ತಲೆಯ ಮ್ಯಾಲೂ ಅದ ಅಲ್ಲ ಟೊಪಿಗಿ ? "

" ಹೂಂ. ನಾನೂ ಹಾಕುತೀನಿ ಟೊಪಿಗಿ ! ಅದೇ ನನ್ನ ಮೂರ್ಖತನ ! ಇಂದಿನ ಈ ಖೊಟ್ಟಿ ಕಾಂಗ್ರೆಸ್ಸಿಗರ ಬಗ್ಗೆ ನನಗೆಷ್ಟೇ ತಿರಸ್ಕಾರವಿದ್ದರೂ, ಅವರ ಮಾರಿಯ ಮ್ಯಾಲ ಉಗುಳಬೇಕೆನ್ನುವಷ್ಟು ದ್ವೇಷ ಇದ್ದರೂ ಕಾಂಗ್ರೆಸ್ಸಿನ ಮೋಹ—ಗಾಂಧೀ ಟೊಪಿಗಿಯ ಮೋಹ, ಖಾದಿಯ ಮೋಹ ನನಗೆ ಹೋಗು ವಂತಿಲ್ಲ. ಯಾಕೆ ? ವಿಚಾರ ಮಾಡಿರಿ. ಕಾಂಗ್ರೆಸ್ಸಂದರೆ ನಮ್ಮ ತಾಯಿ, ನಮ್ಮ ಜೀವದ ಜೀವಾಳ ಅಂತ ನಂಬಿ ಅದಕ್ಕಾಗಿ ಇಷ್ಟು ವರ್ಷ ದುಡೀತಾ ಬಂದೀನಿ. ಕಾಂಗ್ರೆಸ್ಸಿಗಾಗಿ ಉಪವಾಸ ವನವಾಸ ಉಂಡೀನಿ. ನಿಜವಾಗಿ ನಮ್ಮ ತಾಯಿಯಾದ ಕಾಂಗ್ರೆಸ್ ದೇವಿಯನ್ನ ಇಂದು ಈ ಬದ್ಮಾಷ ಮಂದಿ ತಮ್ಮ ಸೆರೆಯಾಳಾಗಿ ಮಾಡಿಕೊಂಡಾರ. ಅವಳ ಹೆಸರಿನ ಮ್ಯಾಲ ಅಧಿಕಾರದ ಅಟ್ಟ ಹಾಸ ನಡಸ್ಯಾರ. ಅವರನ್ನೆಲ್ಲಾ ಚುಡು ಹಿಡಿದು ಹೊರಹಾಕಬೇಕು. "

" ಸದಾಸ್ಮಿತಪ್ಪನವರೂ ಮ್ಯಾಲಿಂದಮ್ಯಾಲ ಅದೇ ಮಾತು ಹೇಳುತಾ ರಲ್ಲ ಮುದ್ದಪ್ಪ ? "

" ಹೇಳುತಾರ ಖರೆ. ಆದರದು ಬರೀ ಸಭಾದಾಗ ಹೇಳುವ ಮಾತು. ಕಾಂಗ್ರೆಸ್ಸಿನಾಗ ಇಂಥಾ ಪಟಿಂಗರದೇ ಇಂದು ಬಹುಮತ ಇರುವಾಗ ಅವ ರನ್ನ ಹೊರಗ ಹಾಕೂದು ಸ್ವತ: ಜವಾಹರಲಾಲರಿಗೇ ಶಕ್ಯ ಇಲ್ಲ. ಇನ್ನು ಸದಾಸ್ಮಿತಪ್ಪ ಏನು ಮಾಡಬಲ್ಲರು ? ಅಲ್ಲದೆ, ಈ ರೊಕ್ಕದ ಮಂದಿಯನ್ನ ಬಿಟ್ಟು ಅವರ ಆಟಾನೂ ನಡಿಯೂ ಹಂಗಿಲ್ಲಲ್ಲ. ? "

" ಅದು ಹೆಂಗ ? "

" ಹೆಂಗಂದರ—ಕಾಂಗ್ರೆಸ್ಸಿನ ಖರ್ಚಿಗೆ ಮ್ಯಾಲಿಂದ ಮ್ಯಾಲ ಲಕ್ಷಾಂತರ ರೂಪಾಯಿ ಬೇಕಾಗ್ತೈತಲ್ಲ ? ಮೊನ್ನೆ ಬೆಂಗಳೂರಾಗ ಕಾಂಗ್ರೆಸ್ ಅಧಿವೇಶನ ನಡೀತಲ್ಲ ? ಅದರ ಖರ್ಚಿಗಂತ ಇಪ್ಪತ್ತು ಲಕ್ಷ ರೂಪಾಯಿ ಕೂಡಿಸಿದ್ದರು. ಅದನ್ನೆಲ್ಲ ಯಾರು ಕೊಟ್ಟರಂತೀರಿ ? ಬಸೆಟ್ಟಿಯಂಥವರು—ಮಲಕಪ್ಪನಂಥ ವರು—ಜೀವಾಜಿಯಂಥವರು...ಭೀಮಣ್ಣನಂಥವರು.. ನಮ್ಮ ಜಿಲ್ಲಾದಿಂದಲೇ ಒಂದು ಲಕ್ಷ ರುಪಾಯಿ ಕೂಡಿಸಿದ್ದರು. ಎಲ್ಲಾ ಕೊಟ್ಟವರು ಬರೀ ಬ್ಲಾಕ್ ಮಾರ್ಕೆಟ್ ವ್ಯಾಪಾರಿಗಳೇ. ಅವರ ಹಣ ಮಾತ್ರ ಬೇಕು, ಅವರಿಗೆ ಅಧಿಕಾರ ಸ್ಥಾನ ಕೊಡೂದು ಬ್ಯಾಡ ಅಂದರ ನಡದೀತೇನು ? ಅದಕ್ಕೇ ಸದಾಸ್ಮಿತಪ್ಪನವ

ರಂಥಾ ಸಭ್ಯರೂ ಕೂಡಾ ಈ ದುಡ್ಡಿನ ಡಬ್ಬಿಗಳ ಹಂಗಿಗೆ ಸಿಕ್ಕಿಕೊಂಡಿರಬೇಕಾಗ ತೈತಿ. "

" ಆದರ ಅಗತ್ಯವಾದರೂ ಏನು ಅನ್ನುವದು ನನಗಂತೂ ತಿಳಿಯುವ ದಿಲ್ಲ ಮುದ್ದಪ್ಪ. ಕಾಂಗ್ರೆಸ್ ಅಧಿವೇಶನವನ್ನ ಸಾದಾ ರೀತಿಯಲ್ಲಿ—ಸ್ವಲ್ಪ ಖರ್ಚಿನಲ್ಲಿ ಮಾಡಿ ಮುಗಿಸಲಿಕ್ಕೆ ಬರೂದಿಲ್ಲವೇನು ? ಬಡ ಮಂದಿಯಿಂದಲೇ ಒಂದೊಂದು ರೂಪಾಯಿ ಕೂಡಿಸಿ ಕಡಿಮೆ ಖರ್ಚಿನಲ್ಲಿ ಮಾಡಿ ಬಿಡಬಹುದಲ್ಲ? ಈ ಕಳ್ಳ ವ್ಯಾಪಾರಿಗಳಿಗ್ಯಾಕೆ ಕೈಯೊಡ್ಡಬೇಕು ? "

" ನಾನೂ ಅದೇ ಪ್ರಶ್ನೆ ಕೇಳುತಿದೀನಪ್ಪ. ಕಾಂಗ್ರೆಸ್ಸಂದರ ಅಂಥಿಂಥಾ ಸಣ್ಣ ಪುಟ್ಟ ಸಂಸ್ಥೆ ಅಲ್ಲ,—ಅದು ಮಹಾಸಂಸ್ಥೆ—ದೇಶವನ್ನಾಳುವ ಸಂಸ್ಥೆ. ಅದರ ಘನತೆಗೆ ತಕ್ಕಂತೆ ವಿಜೃಂಭಣೆಯಿಂದ ಅಧಿವೇಶನ ನಡಸಬೇಕಾಗತ್ತೈತಿ, ಅಂತೆಲ್ಲಾ ಹೇಳುತಾರ. ವಿನೋಬಾ ಭಾವೆಯವರೂ ಕೂಡಾ ಒಮ್ಮೆ ಈ ದುಂದುಗಾರಿಕೆಯನ್ನ ಖಂಡಿಸಿದ್ದರು. ಈ ಅಪವ್ಯಯ ಗಾಂಧೀಜಿಯವರಿಗೂ ಹಿಡಿಸಿರಲಿಲ್ಲ. ಏನಾದರೇನು ? ಈ ಜನರು ತಮ್ಮ ಚಾಳಿ ಬಿಡಲೊಲ್ಲರು. ಅದರಾಗ ಒಂದು ಬ್ಯಾರೆ ಗುಟ್ಟು ಐತಿ. ಅಧಿವೇಶನದ ಹೆಸರಿನಾಗ ಇಪ್ಪತ್ತು ಮೂವತ್ತು ಲಕ್ಷ ಕೂಡಿಸೂದು, ಒಂದು ರೂಪಾಯಿ ಖರ್ಚು ಮಾಡಿ ನಾಲ್ಕು ರೂಪಾಯಿ ಲೆಕ್ಕ ಬರೆದು ಮೂರು ರೂಪಾಯಿ ತಿಂದು ಬಿಡೂದು. ಹಿಂಗ ಲಕ್ಷಾಂತರ ಹಣ ನುಂಗಿ ಬಿಡುತಾರ ಪ್ರತಿಯೊಂದು ಕಡೆಗೂ ಅಧಿವೇಶನಗಳ ಲೆಕ್ಕಪತ್ರ ಕೂಡಾ ಇನ್ನೂ ತಯಾರಾಗಿಲ್ಲ - ಆಗುವ ಹಂಗೂ ಇಲ್ಲ, ಕಳ್ಳ ಕಾಂಗ್ರೆಸಿಗರು ಮಾತ್ರ ಕಳ್ಳ ಗಂಟು ಮಾಡಿಕೊಂಡು ಮೋಟರುಕಾರು ಕೊಂಡು ಮಜಾ ಮಾಡತಾರ. ಇದೆಲ್ಲಾ ಜವಾಹರಲಾಲರಿಗೂ ಗೊತ್ತೈತಿ, ಸದಾಶಿವತಪ್ಪ ನವರಿಗೂ ಗೊತ್ತೈತಿ—ಅವರಾದರೂ ಏನು ಮಾಡಿಯಾರು ? ಸುತ್ತ ಮುತ್ತ ಎಲ್ಲಾ ಕಳ್ಳರೇ ಇರುವಾಗ ಯಾರನ್ನಂತ ಹಿಡಿಯುವುದು ? ಯಾರನ್ನ ಶಿಕ್ಷಿಸು ವುದು ? "

" ಅಂತೂ ಇಂತೂ ಕಾಂಗ್ರೆಸ್ ಇಂದು ಬರೀ ಕೆಟ್ಟಜನರ ಕೈಯಾಗ ಸಿಕ್ಕಂತಾಯ್ತು. ಕಮ್ಯುನಿಸ್ಟ್ ಪಾರ್ಟಿಯ ಬಗ್ಗೆ ಏನು ನಿಮ್ಮ ಅಭಿಪ್ರಾಯ ? "

" ಅವರ ತತ್ವ ಚಲೋ ಅವ, ಸ್ವತಃ ನೆಹರೂ ಕೂಡಾ ಹಂಗ ಹೇಳತಾ ರಲ್ಲ ? ಆದರ, ಆ ಪಾರ್ಟಿಗೆ ಆರ್ಡರ್ ಬರೂದು ಹೊರಗಿನಿಂದ. ರಶಿಯಾ

ದಿಂದ ಸೂಚನೆ ಬಂದಂಗ ಇವರು ಕುಣಿಯುವವರು. ಅದಕ್ಕಾಗಿ ಆ ಪಕ್ಷದ ಬಗ್ಗೆ ನನಗೇನು ಒಲವಿಲ್ಲ. ”

ರಶಿಯಾದಿಂದ ಸೂಚನೆ? ಯಾರು ಬಲ್ಲರು ? ರಾಜಕೀಯ ವಿಚಾರಗಳು ನನಗೆ ತಿಳಿದಿದ್ದುದೂ ಅಷ್ಟಕ್ಕಷ್ಟೆ. ಎಂತಲೇ ಆ ವಿಷಯವನ್ನು ನಾನು ಹೆಚ್ಚು ಬೆಳೆಸಲಿಲ್ಲ.

“ ಹಾಗಾದರೆ ನೀವೇನು ಅರ್ಜಿ ಹಾಕುವಂತಿಲ್ಲ ಅನ್ನಿರಿ. ”

“ ನೋಡಬೇಕ್ರೀ. ನಮ್ಮ ಮಿತ್ರರು ಕೆಲವರು ಸಹಾಯ ಮಾಡ್ತೀನಂತ ಹೇಳಿದಾರ. ಇನ್ನೂ ಒಂದು ತಿಂಗಳು ಅವಧಿ ಐತಲ್ಲ ? ಅಷ್ಟರೊಳಗಾಗಿ ಏಳುನೂರು ರೂಪಾಯಿ ಕೂಡಿದರ ಅರ್ಜಿ ಹಾಕೂದು. ಇಲ್ಲದಿದ್ದರಿಲ್ಲ ”

“ಅರ್ಜಿ ಹಾಕಿದರೂ ಕೂಡಾ ನಿಮಗೆ ಟಿಕೀಟು ಸಿಗುವ ಆಸೆ ಅದ ಏನು?”

“ ಹೆಂಗ ಹೇಳಲಿಕ್ಕೆ ಬರತೈತಿ ? ತಾಲೂಕಿನಲ್ಲೆಲ್ಲಾ ನನಗ ಸಾಮಾನ್ಯ ಜನರ ಬೆಂಬಲ ಐತಿ. ಕಾಂಗ್ರೆಸ್ ಕಾರ್ಯಕರ್ತರೂ ಸಹಾಯ ಮಾಡುತಾರ. ಆದರ ಜಿಲ್ಲಾ ಕಾಂಗ್ರೆಸ್ ಕಮಿಟಿಯೊಳಗ ಮಾತ್ರ ಸಂಶಯ. ಮಲಿಕಪ್ಪ-ಬಸೆಟ್ಟಿಯಂಥವರು ನನ್ನಂಥವನ್ನ ಶಿಫಾರಸು ಮಾಡೂದು ಶಕ್ಯ ಇಲ್ಲ ತಮ್ಮಂಥ ರೊಕ್ಕದವರನ್ನ, ತಮ್ಮ ಮಾತು ಕೇಳುವವರನ್ನ. ಅಲ್ಲದೇ ತಮ್ಮ ಜಾತಿಯವರನ್ನ ಮಾತ್ರ ಅವರು ಶಿಫಾರಸು ಮಾಡುವವರು. ಅದರಲ್ಲೇನು ಸಂಶಯವಿಲ್ಲ.”

“ ಅವರ ಜಾತಿ ಅಂದರ ? ”

“ ವ್ಯಾಪಾರಿಗಳು— ಬಣಜಿಗರು. ಬಣಜಿಗರಲ್ಲದವರಿಗೆ ಇಂಥಾ ಸ್ಥಾನ ಕೊಡಲು ಅವರೆಂದೂ ಒಪ್ಪಲಿಕ್ಕಿಲ್ಲ. ”

” ನೀವು ಬಣಜಿಗರಲ್ಲವೇನು ಹಾಗಾದರೆ ? ”

” ಅಲ್ಲ. ನಾವು ರೈತರು. ಒಕ್ಕಲಿಗರು. ನಿಜವಾಗಿ ನಮ್ಮ ಜನರೇ ಬಹುಸಂಖ್ಯಾಕರಾಗಿರೂದು. ಈ ಬಣಜಿಗರ ಸಂಖ್ಯೆ ಸಾವಿರಕ್ಕೊಂದರಂತೆ ಕೂಡಾ ಇಲ್ಲ. ಆದರೂ ವ್ಯಾಪಾರ ವ್ಯವಹಾರ ಬ್ಯಾಂಕು ಸೊಸೈಟಿ ಸರಕಾರ ಎಲ್ಲಾ ಅವರ ಕೈಯಲ್ಲೇ ಇರೂದರಿಂದ ಹಣದ ಸಹಾಯದಿಂದ, ಅಧಿಕಾರದ ಆಧಾರದಿಂದ ಪ್ರತಿಯೊಂದರಲ್ಲೂ ಹಿರೇತನ ಹಿಡುಕೊಳ್ಳಲು ಅವರು ಪ್ರಯತ್ನಿಸುತಾರ. ನಮ್ಮ ಜಿಲ್ಲಾ ಕಾಂಗ್ರೆಸ್ ಕಮಿಟಿಯಲ್ಲಂತೂ ಬಣಜಿಗರಲ್ಲದವರಿಗೆ

ಕವಡಿಯು ಕಿಮ್ಮತ್ತಿಲ್ಲ."

"ಜಾತೀಯತೆ ಬೇಡವೆನ್ನುವವರೂ ಇವರೇ. ಇಂಥಾ ಹೊಲಸು ಜಾತೀಯತೆ ಮಾಡುವವರೂ ಇವರೇ."

"ಇದೊಂದೇ ಜಿಲ್ಲೆಯಲ್ಲಲ್ಲ—ಎಲ್ಲಾ ಜಿಲ್ಲೆಗಳಲ್ಲೂ ಇಂಥಾ ಜಾತ್ಯಂಧ ಡಾಂಭಿಕರೇ ಇದಾರ ಸದಾಶಿವಪ್ಪ. ಸದಾಸ್ಮಿತಪ್ಪನವರಂಥ ದೊಡ್ಡವರೂ ಕೂಡಾ ಇಂಥಾ ಜನರಿಗೇ ಬೆಂಬಲ ಕೊಡುತಾರ."

"ಅವರೂ ಜಾತೀಯವಾದಿಯೊ ಏನೊ."

"ಯಾರಿಗ್ಗೊತ್ತು ? ಕೇಳಬೇಕು ಅವರನ್ನೇ"

"ಯಾರಪ್ಪಾ ಕೇಳುವವರು ?"

"ಯಾರ್‍ಯಾಕೆ ? ನಾನೇ ಕೇಳುತೀನಲ್ಲ ? ಹೆಂಗೂ ಅವರೂ ಬಂದೇ ಬರತಾರ ನಾಡದು. ಕಾಂಗ್ರೆಸ್ ಕಮಿಟಿಯೊಳಗ ಸಭಾನೂ ಇಟ್ಟಾರ. ಆಗ ವಾ ಪ್ರಶ್ನೆ ಕೇಳುತೀನಿ. ನೀವು ಬೆಂಬಲ ಕೊಡಿರಿ."

"ಓಹ್ಹೊ ! ಯಾಕಾಗಲೊಲ್ಲದು ?"

"ಆದರ ... ಒಂದು ಮಾತು ಈಗಲೇ ಹೇಳಿರತೀನಿ. ನಾಡದು ಆದರೂ ನೀವು ಆ ಚಟದಿಂದ ದೂರ ಇರಾಕಬೇಕು, ಗೊತ್ತಾಯಿತೇ ?"

"ಗೊತ್ತಾಯಿತಪ್ಪ."

"ಸದಾಸ್ಮಿತಪ್ಪನವರು ಬಂದಾಗ ನಿಮ್ಮ ಬಾಯಿಂದ ಸ್ವಲ್ಪವೂ ವಾಸ ಬರುತಿರಬಾರದು. ಇಲ್ಲದಿದ್ದರ ಕುಡಿತದ ಆರೋಪ ಹೊರಿಸಿ ನಿಮ್ಮನ್ನ ಆಗಿಂದಾಗ ಅರೆಸ್ಟ್ ಮಾಡಿಸಲಿಕ್ಕೂ ಹೇಸುವವರಲ್ಲ ಆ ಜನರು."

"ಸ್ವತಃ ಮಲಿಕಪ್ಪನೇ ಕುಡೀತಾನಲ್ಲಪಾ ?"

"ಕುಡೀತಿರಬಹುದು. ಸದಾಸ್ಮಿತಪ್ಪನವರು ಬಂದಾಗ ಮಾತ್ರ ಅವ ಕುಡಿಯೂದಿಲ್ಲ. ಒಳ್ಳೇ ಸಂಭಾವಿತ ಭಕ್ತ ಶಿಖಾಮಣಿಯಂತೆ ವಿಭೂತಿ ಬಡಕೊಂಡು ಬರುತಾನ."

ರುದ್ರಗೌಡ- ಕಾಗವಾಡ— ಈಗ ಮುದ್ದಪ್ಪ— ಕುಡಿತ ಬಿಡಬೇಕೆಂದು ಹೇಳುವವರೇ ಎಲ್ಲರೂ. ಕೇಳಿಕೇಳಿ ನನಗೂ ಮನಸ್ಸು ರೋಸಿ ಹೋಗಿತ್ತು. ಆ ಹೊಲಸು ಚಟವನ್ನು ಬಿಟ್ಟುಬಿಡುವುದೇ ಉತ್ತಮವೆಂದು ಮನವರಿಕೆಯಾಗ ತೊಡಗಿತ್ತು.

## ೮

ಕಾಂಗ್ರೆಸ್ ಕಚೇರಿಯ ಬಳಿ ಮುದ್ದಪ್ಪನಿಗೆ ಮತ್ತಾರೋ ಭೇಟ್ಟಿಯಾಗಲು ಆತ ಅವರೊಡನೆ ಹೊರಟುಹೋದ. ನಾನೂ ಹಾಗೆಯೆ ಕಾಲೆಳೆಯುತ್ತ ನಡೆದೆ. ಕಾಂಗ್ರೆಸ್ ಕಚೇರಿಗೆ ಹೋಗಬೇಕೆಂಬ ತೀವ್ರವಾದ ಇಚ್ಛೆಯೇನೂ ಇರಲಿಲ್ಲ. ಆದರೆ, ಬೇರೆ ಕೆಲಸವೇನೂ ಇರಲಿಲ್ಲವಾದುದರಿಂದ ಕೊಂಚ ತಮಾಷೆಯನ್ನಾದರೂ ನೋಡಿದಂತಾಯಿತೆಂದು ಅತ್ತ ಹೊರಟಿದ್ದೆ.

ಅಷ್ಟರಲ್ಲಿ ಕಾಂಗ್ರೆಸ್ ಕಚೇರಿಯಿಂದಲೇ ಹೊರಬಿದ್ದು ಬಂದ ರಾಮರಾಯ ನನ್ನನ್ನು ನೋಡಿ ನಗುನಗುತ್ತ,

" ಸದಾಶಿವ ಅಂದರೆ ನೀವೇ ಅಲ್ಲಾ ? " ಎಂದು ಕೇಳಿದ.

ರಾಮರಾಯನನ್ನು ನಾನೂ ಅನೇಕ ಬಾರಿ ನೋಡಿದ್ದೆ. ಮಲ್ಲಿಕಾರ್ಜುನಪ್ಪ ಅಧ್ಯಕ್ಷನಾಗುವ ಮೊದಲು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾಗಿದ್ದ ರಾಮರಾಯ. ನಮ್ಮ ಜಿಲ್ಲೆಯ ಕಾಂಗ್ರೆಸ್ಸಿನಲ್ಲಿದ್ದ ಎರಡು ಗುಂಪುಗಳಲ್ಲಿ ಒಂದು ಗುಂಪಿನ ಮುಂದಾಳು ಆತ; ಮಲ್ಲಿಕಾರ್ಜುನಪ್ಪ—ಬಸೆಟ್ಟಿ ಮೊದಲಾದವರ ಪ್ರಬಲ ವಿರೋಧಿ.

" ಹೌದ್ರಿ. ನಾನೇ ಸದಾಶಿವ, " ಎನ್ನುತ್ತಲೂ ರಾಮರಾಯ ಕೇಳಿದ :

" ನಾನ್ಯಾರು ಗೊತ್ತಿರಬೇಕಲ್ಲ ? "

" ಗೊತ್ತದರೀ – ನೀವು ರಾಮರಾಯರು ! "

" ಹಾಂ ! ಅಂತೂ ಉತ್ತಮ ಕೆಲಸಾ ಮಾಡಿದಿರಿ ಆ ಲೇಖನ ಬರೆದು !" ಎಂದು ಹೇಳಿ ನನ್ನ ಬೆನ್ನು ಚಪ್ಪರಿಸಿದ ರಾಮರಾಯ. " ಈಗ ಎತ್ತ ಹೊರಟೀರಿ ? ಮನೆಗೊ ? "

" ಹೂಂ. "

" ಏನಾದರೂ ವಿಶೇಷ ಕೆಲಸವಿದೆಯೊ ? "

" ಏನಿಲ್ಲರಿ. "

" ಹಾಗಾದರ ಬರ್‍ರಿಲಾ ನಮ್ಮ ಸಂಗಡ ! ಕೆಲವೊಂದು ವಿಷಯ ಮಾತಾಡಿದರೆ ಒಳ್ಳೆಯಿತು ! " ಎಂದ ರಾಮರಾಯ.

ಅವನು ತಾನಾಗಿಯೆ ಕರೆಯುತ್ತಿರುವಾಗ ಈ ಸುಸಂಧಿಯನ್ನು ಕಳೆದುಕೊಳ್ಳಬಾರದು, ಬಸೆಟ್ಟಿಯ ಪರಮವಿರೋಧಿಯಾದ ರಾಮರಾಯನಿಂದಲೂ ಬಸೆಟ್ಟಿಯ ಬಗೆಗೆ ಅನೇಕ ವಿಷಯ ತಿಳಿಯಬಹುದು—ಎಂದುಕೊಂಡು ಅವನೊಡನೆ ಸಂತೋಷದಿಂದ ಹೊರಟೆ.

ಜೊತೆಗಿದ್ದ ಹುಡುಗನನ್ನು ಕಳುಹಿಸಿಕೊಟ್ಟು ರಾಮರಾಯ ನನ್ನನ್ನು ದೊಡ್ಡ ಮನೆಯೊಂದಕ್ಕೆ ಕರೆದುತಂದ. ಉದ್ದೋ ಉದ್ದವಾದ ಆ ಮನೆಯಲ್ಲಿ ಹತ್ತು ಹನ್ನೆರಡು ಕೊಟಡಿಗಳಾದರೂ ಇದ್ದ ಹಾಗಿತ್ತು. ಹೊರಗಡೆಯ ಪಡಸಾಲೆಯಲ್ಲಿ ಏಳೆಂಟು ಕುರ್ಚಿಗಳಿದ್ದುವು. ವಿರಾಮ ಕುರ್ಚಿಯಲ್ಲೊರಗಿ ಕುಳಿತು ರೇಡಿಯೊ ಆಲಿಸುತ್ತಿದ್ದ ನಲವತ್ತೈದರ ಪ್ರಾಯದ, ಕೆಂಬಣ್ಣದ, ತುಂಬುದೇಹದ ಪ್ರೌಢೆಯೊಬ್ಬಳು ರಾಮರಾಯನನ್ನು ನೋಡುತ್ತಲೂ ಪ್ರಸನ್ನವಾಗಿ ನಗುತ್ತ—" ಯಾವಾಗ ಬಂದಿರಿ ? ಮೇಲಿಗೇನು ? " ಎಂದಳು.

" ಇಲ್ಲ. ಬಸ್ಸಿಗೇ ಬಂದೆ ಖಾದೀಭಂಡಾರದಲ್ಲಿ ಕೆಲಸ ಮುಗಿಸಿಕೊಂಡು ಬರಲು ಇಷ್ಟು ತಡ ಆಯ್ತು. "

ರಾಮರಾಯನ ಕೈಯಲ್ಲಿದ್ದ ಚೀಲ ತೆಗೆದುಕೊಂಡು ಗೋಡೆಗಿದ್ದ ಗೂಟಕ್ಕೆ ತೂಗ ಹಾಕಿ ಅವಳು ಸಂಭ್ರಮದಿಂದ ಒಳಗೋಡಿದಳು. ಬಹಳ ದಿನಗಳ ವಿರಹದ ತರುವಾಯ ಪ್ರಿಯಕರನನ್ನು ಸ್ವಾಗತಿಸುತ್ತಿದ್ದ ಪ್ರೇಯಸಿಯಂತೆ ಅವಳು ಕಾಣಿಸಿಕೊಂಡಳು.

" ಕೂಡ್ರಿ, ಕೂಡ್ರಿ. ಇದು ಯಾರ ಮನೆ ಗೊತ್ತಾಗಲಿಲ್ಲೇನು ?" ಎಂದ ರಾಮರಾಯ.

" ಇಲ್ಲರೀ. "

" ನಮ್ಮ ಜೀವಶ್ಚ ಕಂಠಶ್ಚ ಗೆಳೆಯರು ಸುಬ್ರಾಯರ ಮನೆ. ಅವರೂ ನಾನೂ ಕೂಡಿ ಕಲಿತವರು. ಇಲ್ಲಿಗೆ ಬಂದಾಗಲೆಲ್ಲಾ ನನ್ನ ಬಿಡಾರ ಇಲ್ಲೇ ಇರ್‍ತದ. "

" ಸರಾಫಿ ಅಂಗಡಿ ಸುಬ್ರಾಯರು ? "

" ಹಾಂ, ಅವರೇ. ಇಂದಿರಾಬಾಯಿಯವರನ್ನ ನೀವು ಕಾಂಗ್ರೆಸ್ ಕಮಿಟಿಯಲ್ಲಿ ನೋಡಿರಬಹುದಲ್ಲ ? "

ಆ ಮಹಿಳೆಯನ್ನು ಹಿಂದೊಂದು ಬಾರಿ ಎಲ್ಲಿಯೋ ನೋಡಿರಬೇಕೆಂದು ನನಗೂ ಅನಿಸುತ್ತಲೇ ಇತ್ತು.

" ಹೌದ್ರೀ. ನೋಡೀನಿ. "

" ಗಂಡನಿಗೆ ತಕ್ಕ ಹೆಂಡತಿ ಇಂದಿರಾಬಾಯಿ. ನಲವತ್ತೆರಡರ ಚಳವಳಿಯ ಕಾಲಕ್ಕೆ ಅವರೂ ಜೇಲಿಗೆ ಹೋಗಿ ಬಂದಾರ. ಈ ಮನೆತನವೇ ದೇಶಭಕ್ತರ ಮನೆತನ ! ಇವರ ಮಗಳು ರಮಾ ಇದ್ದಾಳಲ್ಲ—ಯೂತ್ ಕಾಂಗ್ರೆಸ್‌ನಲ್ಲಿ ನೀವು ನೋಡಿರಬಹುದು ? "

ರಮಾ !

" ಇಲ್ರಿ. ನಾನವರನ್ನ ನೋಡಿಲ್ಲ. ಇಂದಿರಾಬಾಯಿಯವರನ್ನ ಮಾತ್ರ ಒಮ್ಮೆ ನೋಡೇನಿ ಕಾಂಗ್ರೆಸ್‌ಕಮಿಟಿಯಲ್ಲಿ. ಯಾರೋ ಲೀಡರು ಬಂದಾಗ ಸಭೆಯಿದ್ದಿರಬೇಕು. ಆಗ ಇವರೂ ಬಂದಿದ್ದರಂತ ಕಾಣ್ತದ. "

" ಇಂದಿರಾ ಗಾಂಧಿಯವರು ಬಂದಾಗ ಇರಬೇಕು ಮಹಿಳಾಮುಖಂಡರು ಬಂದಾಗಲೆಲ್ಲ ಇಂದಿರಾಬಾಯಿ ಅವರೊಡನೆ ಇದ್ದೇ ಇರ್ತಾರೆ, " ಎಂದು ರಾಮರಾಯ ಹೇಳುತ್ತಿದ್ದಂತೆ ಅವಳು ಒಳಗಿನಿಂದ ಬಂದಳು.

" ಏಳಿರಿ. ಸ್ನಾನ ಆಗಲಿ ಮೊದಲು, ಅಡಿಗೆಯೂ ತಯಾರ ಅದ. "

" ರಾಯರಿನ್ನೂ ಬಂದಿಲ್ಲೇನು ಊಟಕ್ಕೆ ? "

" ಅವರೆಂದು ಬಂದಾರ್ರೀ ಹೊತ್ತಿಗೆ ಸರಿಯಾಗಿ ? ಅವರ ಹಾದಿ ನೋಡ್ತಾ ಕೂತರೆ ಉಪವಾಸ ಸಾಯಬೇಕಾದೀತು ! ಏಳಿರಿ, " ಎಂದು ಹೇಳಿ ನನ್ನನ್ನು ದಿಟ್ಟಿಸಿ ನೋಡಿ, " ಇವರ್ಯಾರು ಹೊಸಬರು ?" ಎಂದಳು, ಇಂದಿರಾ ಬಾಯಿ.

" ಸದಾಶಿವ ಅಂತ. ಕಾಂಗ್ರೆಸ್ ಕಾರ್ಯಕರ್ತರು...."

ನನಗೆ ಒಳಗೊಳಗೇ ನಗೆಯುಕ್ಕಿ ಬಂದಿತು. ರಾಮರಾಯನ ಒಂದೇ ಮಾತಿನಿಂದ ನಾನೂ ಒಬ್ಬ ಕಾಂಗ್ರೆಸ್ ಕಾರ್ಯಕರ್ತನಾಗಿಬಿಟ್ಟಿದ್ದೆ ! ಈ ಒಂದು

ವರ್ಷದಲ್ಲಿ ನಾನು ಮಾಡುತ್ತಿದ್ದ "ಕಾಂಗ್ರೆಸ್ ಕಾರ್ಯ" ವೆಂದರೆ—ಸೆರೆ ಕುಡಿಯುವುದು !

"ಸದಾಶಿವ ? ಅಂದರೆ....ಲಿಂಗಾಯತರೋ ?" ಎಂದು, ಕೊಂಚವೂ ಸಂಕೋಚವಿಲ್ಲದೆ ಕೇಳಿದಳು ಆ ಪತಿವ್ರತಾಶಿರೋಮಣಿ !

"ಅಲ್ರೀ. ನಾವು ಕುರುಬರು !" ಎಂದು ಬೇಕೆಂತಲೇ ಸುಳ್ಳಾಡಿದೆ. ನಾನೂ ಲಿಂಗಾಯತನೆಂದು ಗೊತ್ತಾದರೆ ಅವರು ಮನಸ್ಸು ಬಿಚ್ಚಿ ಮಾತನಾಡುವುದಿಲ್ಲ, ಬೇರೆ ಜಾತಿಯವನೆಂದು ಹೇಳಿದರೆ ಅವರ ಅಂತರಂಗದಲ್ಲಿರುವುದೆಲ್ಲ ಸ್ವಚ್ಛಂದವಾಗಿ ಹೊರಬೀಳಬಹುದು.—ಎಂದು ಯೋಚಿಸಿ.

ನಾನು ಭಾವಿಸಿದ್ದಂತೆಯೇ ಆಯಿತು. ಗಂಟುಗೂಡಿದ್ದ ಇಂದಿರಾ ಬಾಯಿಯ ಹುಬ್ಬುಗಳು ಮತ್ತೆ ಸರಳವಾದುವು. ಅವಳು ಮುಗುಳುನಗುತ್ತ ಹೇಳಿದಳು :

"ಹಾಗಿದ್ದರಡ್ಡಿಯಿಲ್ಲ, ಲಿಂಗಾಯತರೆಂದರೆ ನನಗಾಗುವದಿಲ್ಲ ನೋಡಿರಿ. ಅಂಥಾ ಭಯಂಕರ ಜಾತಿ ಇನ್ನೊಂದಿಲ್ಲ. ಕುರುಬರಾದರೋ ಸರಳ ಮಂದಿ. ಕ್ಷತ್ರಿಯರು. ವಿಜಯನಗರ ರಾಜ್ಯ ಕಟ್ಟಿ ಆಳಿದವರು ಬ್ರಾಹ್ಮಣರಾದ ವಿದ್ಯಾರಣ್ಯರು ಅವರ ಗುರುಗಳು. ಅಂದ ಮೇಲೆ....ಏಳಿರಿ. ನೀವೂ ಊಟ ಮಾಡುವಿರಂತೆ..."

"ನಾನು ಮುಗಿಸಿಕೊಂಡೇ ಬಂದೀನಿ ಅಮ್ಮಾವರೆ."

"ಈ ಮನೆಯಲ್ಲಿ ಸಂಕೋಚ ಮಾಡಿಕೋಬಾರದಪ್ಪ. ಇದೂ ನಮ್ಮ ಮನೆಯೇ ಅಂತ ತಿಳಿದುಕೊಳ್ಳಿರಿ." ಎಂದ ರಾಮರಾಯ. "ರಮಾ ಎಲ್ಲಿ ಹೋದಳು ? ಕಾಣೋದಿಲ್ಲವಲ್ಲ ?"

"ಅಪ್ಪನಂತೆ ಮಗಳು ! ಅವರಂತೆ ಇವಳಿಗೂ, ಹೊತ್ತಿಲ್ಲ, ಗೊತ್ತಿಲ್ಲ. ಯಾರ ಮನೆಗೆ ಹೋಗಿ ಏನು ಹರಟೆ ಬಡೀತಾ ಕೂತಾಳೋ ಯಾರು ಬಲ್ಲರು ? ಅವರದೊಂದು ರೀತಿ....ಇವಳದೊಂದು ರೀತಿ. ಇವರಿಬ್ಬರ ನಡುವೆ ನಾನು ನರಳಬೇಕು, ಮಾಡೋದೇನು? ಅದೃಷ್ಟದಲ್ಲಿರೋದನ್ನೆಲ್ಲಾ ಅನುಭವಿಸಲೇಬೇಕಲ್ಲ?" ಎನ್ನುತ್ತ ಮತ್ತೆ ಒಳಗೆ ಹೋದಳು ಇಂದಿರಾಬಾಯಿ. "ಸ್ನಾನ ಅಷ್ಟು ಮುಗಿಸಿಕೊಂಡು ಬರ್ತೀನಿ. ಸ್ವಲ್ಪ ಕೂತುಕೊಂಡಿರಿ," ಎಂದು ಹೇಳಿ ರಾಮರಾಯನೂ ಅವಸರದಿಂದ ಅವಳನ್ನು ಹಿಂಬಾಲಿಸಿದ.

ಸ್ನಾನ ಮಾಡುವುದಕ್ಕೆ, ಎಷ್ಟು ಸಮಯ ಬೇಕು ? ಬಹಳವಾದರೆ ಹದಿನೈದು ನಿಮಿಷ, ಇಪ್ಪತ್ತು ನಿಮಿಷ, ಅಲ್ಲವೆ ? ಆದರೆ, ಅರ್ಧಗಂಟೆ ಕಳೆದು ಹೋದರೂ ರಾಮರಾಯ ಬರಲೇ ಇಲ್ಲ. ಆತನ ಬಗೆಗೆ ಹಲವು ವದಂತಿಗಳನ್ನು ಕೇಳಿದ್ದುದರಿಂದ ನನ್ನ ತಲೆಯಲ್ಲಿ ಅನೇಕ ಕಲ್ಪನಾಚಿತ್ರಗಳು ಸುಳಿದುಹೋದುವು. ಅವನ ದರ್ಶನವಾಗುತ್ತಲೂ ಇಂದಿರಾಬಾಯಿ ವ್ಯಕ್ತಗೊಳಿಸಿದ್ದ ಸಂಭ್ರಮ–ಸಡಗರ ಬೇರೆ ನನ್ನನ್ನು ಕೆರಳಿಸಿತ್ತು.

ಕೊನೆಗೊಮ್ಮೆ, ಮುಕ್ಕಾಲು ಗಂಟೆಯ ತರುವಾಯ ಹಣೆಗೂ ಮೈಗೂ ಗಂಧ ಬಳಿದುಕೊಂಡು, ಪಕ್ಕಾ ದೇಶಭಕ್ತನಂತೆ ಕಾಣಿಸುತ್ತಿದ್ದ ರಾಮರಾಯ ಪ್ರತ್ಯಕ್ಷನಾದ :

" ಕ್ಷಮಿಸಿರಿ. ಬಹಳ ತಡವಾಯಿತೊ ಏನೊ. ಸ್ನಾನವಾದನಂತರ ಪೂಜೆ ಮಾಡದೆ ನಾನು ಮೇಲಕ್ಕೇಳುವದೇ ಇಲ್ಲ. ಆದರಿಂದ ಹೊತ್ತಾಯ್ತು. ಏಳ್ರಿ, ಊಟಮಾಡೋಣವಂತೆ. "

ಇಂದಿರಾಬಾಯಿ ಮಾತ್ರ ಹೊರಗೆ ಬರದೆ ಒಳಗಿನಿಂದಲೇ ಕೂಗಿದಳು :
" ಬರ್ರೀ ಸದಾಶಿವ. ತಾಟು ಬಡಿಸಿದೆ. "

" ನಿಜವಾಗಿಯೂ ನಾನು ಊಟ ಮಾಡೀನಿ ರಾಯರೆ. ನೀವು ಮುಗಿಸಿಕೊಂಡು ಬರ್ರಿ ", ಎಂದು ನಾನು ಹೇಳಿದೆ. ಹೆಚ್ಚು ಬಲವಂತ ಮಾಡದೆ ಒಳಗೆ ನಡೆದ ರಾಮರಾಯ.

ಆತ ಊಟ ಮುಗಿಸಿ ತಾಂಬೂಲ ಸೇವಿಸುತ್ತ ಪಡಸಾಲೆಗೆ ಬಂದಾಗ ನಾನು ತೂಕಡಿಸುತ್ತ ಕುಳಿತಿದ್ದೆ. ಆತ ನನ್ನನ್ನು ಎಚ್ಚರುಗೊಳಿಸಿ ನಗುನಗುತ್ತಾ ಹೇಳಿದ :

" ಕ್ಷಮಿಸಿರಿ ಹಂ ! ಬಹಳ ಕಾಯಿಸಿದೆ ನಿಮ್ಮನ್ನ ! "

" ನನಗೆ ಏನಾದರೂ ಕೆಲಸ ಹೇಳುವದಿತ್ತೇನ್ರಿ ರಾಯರೆ ? "

" ಅಂಥಾ ವಿಶೇಷ ಕೆಲಸವೇನಿಲ್ಲ, ಆದರೂ ಒಂದೆರಡು ಮಾತು ಹೇಳಬೇಕು. ನಿಮ್ಮ ಲೇಖನ ಓದಿ ನನಗಂತೂ ಬಹಳ ಸಂತೋಷವಾಯ್ತು. ಧೈರ್ಯ ಮಾಡಿ ಬರೆದಿರಲ್ಲಾ ! ಅದೇ ದೊಡ್ಡ ವಿಷಯ. ಈ ಮಂದಿಯನ್ನ ಇನ್ನುಮೇಲೂ ಹೀಗೇ ಎಕ್ಸ್‌ಪೋಜ್ ಮಾಡುತ್ತ ಹೋಗಬೇಕು. ನಾನೂ ನನ್ನ ಗೆಳೆಯರೂ ನಿಮಗೆ ಬೇಕಾದ ಎಲ್ಲಾ ಸಹಾಯ ಮಾಡ್ತೀವಿ. "

" ಸಹಾಯ ಅಂದರೆ ? "

" ನೀವು ಬರೀತಾ ಹೋಗಬೇಕು, ಬಸೆಟ್ಟಿ ಮಲಿಕಪ್ಪರ ಬಗ್ಗೆ ನಿಮಗೆ ಗೊತ್ತಿರಲಾರದ ಎಷ್ಟೋ ವಿಷಯ ನಮಗೆ ಗೊತ್ತವ. ಅವನ್ನೆಲ್ಲಾ ನಿಮಗೆ ಒಂದೊಂದಾಗಿ ತಿಳಿಸ್ತೇವಿ. ಉದಾಹರಣೆಗಾಗಿ ಒಂದು ವಿಷಯ : ಇಂದು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷ ಆಗಿರುವ ಇದೇ ಮಲಿಕಪ್ಪ ಆರೇಳು ವರ್ಷಗಳ ಹಿಂದೆ ಗೋವಾದಿಂದ ಕಳ್ಳತನದಿಂದ ಬಂಗಾರ ಸಾಗಿಸುವಾಗ ಸಿ. ಐ. ಡಿ. ಗಳ ಕೈಗೆ ಸಿಕ್ಕುಬಿದ್ದಿದ್ದ. ಆಮೇಲೆ ಏನೇನೋ ಚಮತ್ಕಾರ ಮಾಡಿ ಉಳಿದುಕೊಂಡ. ಅಲ್ಲದೆ ಈಗಲೂ ಅವ ತುಡುಗಿನಿಂದ ಮಹಾರಾಷ್ಟ್ರಕ್ಕೆ ಅಕ್ಕಿ ಕಳಿಸ್ತಾನೆ ಜಿಲ್ಲೆಯಲ್ಲಿಯ ಕಳ್ಳಸಂತೆಯವರಿಗೆಲ್ಲ ಇವನೇ ಮುಂದಾಳು. ಇಂಥವನು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷ ! "

" ಈ ವಿಷಯ ಮಂತ್ರಿಗಳಿಗೆ ಗೊತ್ತಿರಲಿಕ್ಕಿಲ್ಲೇನು ? "

" ಗೊತ್ತಿರದೆ ಏನು ? ಎಲ್ಲಾ ಗೊತ್ತಿರ್ತದ, ಆದರೂ ಅವರು ಕಣ್ಣು ಮುಚ್ಚಿಕೊಂಡು ಬಿಡ್ತಾರ, ಯಾಕಂತೀರೋ ? ಅವರವರಲ್ಲಿ ಹೆಣ್ಣುಗಂಡಿನ ಸಂಬಂಧ, ಅದೂ ಇದೂ ಇರ್ತದ. ಜಿಲ್ಲಾ ಕಾಂಗ್ರೆಸ್ ಬೇರೆ ಇವರ ಕೈಯಲ್ಲೇ. ಆದಕ್ಕಾಗಿ ಸುಮ್ಮನಿರ್ತಾರ. "

" ಇದು ಬರೀ ಕಳ್ಳರ ರಾಜ್ಯವಾಯ್ತಲ್ಲ ? "

" ಮತ್ತೇನಾದೀತು ? ಇವರೂ ಕಳ್ಳರು. ಅವರೂ ಕಳ್ಳರು. ಕಳ್ಳರ ಬೆಂಬಲದಿಂದ ಕಳ್ಳರು ಅಧಿಕಾರಕ್ಕೆ ಬರೋದು. ಅವರೂ ಇವರೂ ಕೂಡಿ ಲಾಭ ಹೊಡೆಯೋದು ... "

" ನೀವ್ಯಾಕೆ ಅಧಿಕಾರ ಬಿಟ್ಟಿರಿ ? ತಿಳೀಲಿಲ್ಲವಲ್ಲಾ ? "

" ನಾನೇನು ಬಿಡ್ತಿರಲಿಲ್ಲ. ಆದರೆ ಈ ಲಿಂಗಾಯತರೆಲ್ಲಾ ಅಸಹಕಾರ ಮಾಡಿದರು. ಕಾಂಗ್ರೆಸ್ ಕಮೀಟಿಗೆ ಹಣದ ಅಡಚಣೆ ಆಯ್ತು. ಸಾಲ ಬೆಳೀತು. ನಮ್ಮಂಥಾ ಬ್ರಾಹ್ಮಣರ ಹತ್ತರ ರೊಕ್ಕ ಎಲ್ಲಿರಬೇಕು ? ನಾವೇನು ಈ ಬಣಜಿಗರಂತೆ ವ್ಯಾಪಾರ ವ್ಯವಹಾರ ಮಾಡುವವರೇ ? ಬ್ಲ್ಯಾಕ್‌ಮಾರ್ಕೆಟ್ ಮಾಡುವವರೇ ? ಓ. ಸಿ. ಏಜನ್ಸಿ ಮಾಡುವವರೇ ? ತುಡುಗಿನಿಂದ ಬಂಗಾರ ಸಾಗಿಸುವವರೇ ? ಸೊಸೈಟಿ ಬ್ಯಾಂಕು ಮುಳುಗಿಸುವವರೇ ? ನಮ್ಮ ಹತ್ತರ ಎಲ್ಲಿಂದ ಬಂದೀತು ಹಣ ? "

" ಬಸೆಟ್ಟಿ ಓ. ಸಿ. ಏಜಂಟ್ ಆಗಿರೋದು ನಿಜ ಏನ್ರಿ ? "

" ಅದರಲ್ಲೇನು ಸಂಶಯು ? ಓ. ಸಿ. ಅಷ್ಟೇ ಅಲ್ಲ— ಸೆರೆಯು ಏಜನ್ಸಿಯನ್ನೂ ಮಾಡ್ತಾನವ. "

" ಸೆರೆಯು ಏಜನ್ಸಿ ? ಅದು ಹ್ಯಾಗೆ ? "

" ಹ್ಯಾಗಂದರೆ ? ಗೋವಾದಿಂದ ಪರದೇಶಿ ಸೆರೆ ಬ್ರ್ಯಾಂಡಿ ಬೀರು ತುಡುಗಿನಿಂದ ತರಿಸಿ ಒಂದಕ್ಕೆ ಹತ್ತು ಲಾಭ ಹೊಡೆಯುತಾನೆ. ಪೋಲೀಸರಂತೂ ಆವನ ಕೈಯಲ್ಲೇ ಇರತಕ್ಕವರು. ಆಗಾಗ ಅವರಿಗೂ ಅಷ್ಟು ಲಾಭ ಸಿಗ್ತದ. ಅವರಾದರೂ ಯಾಕೆ ಬೇಡ ಅಂದಾರು? "

" ಇದೆಲ್ಲಾ ಸದಾಸ್ಮಿತಪ್ಪನವರಿಗೆ ಗೊತ್ತಿರಲಿಕ್ಕಿಲ್ಲವೇನು ? "

" ಗೊತ್ತಿರದೆ ಏನು ? ಎಲ್ಲಾ ಗೊತ್ತದ. ಮೂರು ನಾಲ್ಕು ಸಲ ನಾನೇ ಸ್ವತಃ ಹೇಳಿದೀನಿ. ಆದರೂ ಅವರು ನಮ್ಮಂಥವರ ಮಾತಿಗೆ ಬೆಲೆ ಕೊಡದೆ ತಮ್ಮ ಬಾಂಧವರನ್ನೇ ಎತ್ತಿ ಹಿಡೀತಾರೆ. ಕರ್ನಾಟಕದಲ್ಲಿ ಲಿಂಗಾಯತರ ಹಾವಳಿ ಎಷ್ಟಾಯಿತೆನ್ನೂದು ಈಗಲಾದರೂ ತಿಳೀತಲ್ಲ ನಿಮಗೆ ? "

" ಅದನ್ನು ತಪ್ಪಿಸಲಿಕ್ಕೇನು ಮಾಡಬೇಕಂತೀರಿ ? "

" ನಿಮ್ಮಂಥಾ ತರುಣರು ಜಾಗೃತರಾಗಬೇಕು. ಸತ್ಯಸಂಗತಿಗಳನ್ನ ಸಾರ್ವಜನಿಕವಾಗಿ ಸಾರಿ ಹೇಳಿಬೇಕು. ಲಿಂಗಾಯತರಲ್ಲದವರೆಲ್ಲಾ ಒಂದುಗೂಡಿ ಲಿಂಗಾಯತರಿಂದ ಅಧಿಕಾರ ಕಸಿದುಕೊಳ್ಳಬೇಕು. "

" ಅದು ಶಕ್ಯವೆ ? ಅವರೇ ಬಹುಸಂಖ್ಯಾಕರಿದಾರಲ್ಲ ಕರ್ನಾಟಕದಲ್ಲಿ ? "

" ಇದ್ದರೇನಾಯಿತು ? ನೂರಕ್ಕೆ ಇಪ್ಪತ್ತೈದರಷ್ಟು ಲಿಂಗಾಯತರಂತ ತಿಳಿಯೋಣ. ಒಕ್ಕಲಿಗರು ನೂರಕ್ಕೆ ಇಪ್ಪತ್ತರಷ್ಟು. ಕುರುಬರು ಇಪ್ಪತ್ತರಷ್ಟು, ಹರಿಜನರು ಹದಿನೈದರಷ್ಟು, ಇನ್ನಿತರ ಜನರು ಅಷ್ಟು ಇಷ್ಟು, ಲಿಂಗಾಯತರಲ್ಲದ ಈ ಎಪ್ಪತ್ತೈದು ಮಂದಿಯೆಲ್ಲಾ ಒಂದಾಗಿಬಿಟ್ಟರೆ ಇಪ್ಪತ್ತೈದು ಮಂದಿಯ ಆಟ ನಡೀತದೇನು ? "

" ನೀವು ಹೇಳುವದು ಸರಿ. ಆದರೆ ಈ ಎಪ್ಪತ್ತೈದು ಮಂದಿಯೆಲ್ಲಾ ಒಂದಾಗಬೇಕಲ್ಲ ಮೊದಲು ? "

" ಈಗ ನಾವು ಅದೇ ಪ್ರಯತ್ನ ನಡಸೀವಿ. ನಾನು, ಶ್ಯಾಮರಾಯರು, ಅಷೋಬಲರಾಯರು, ಎಲ್ಲರೂ .. "

" ಶ್ಯಾಮರಾಯರೆಂದರೆ ಯಾರ್ರೀ ? "

" ಶ್ಯಾಮರಾಯರೆಂದರೆ ಗೊತ್ತಿಲ್ಲೇನು ? ಕರ್ನಾಟಕದ ದೊಡ್ಡ ಮುಖಂಡರೆಂದರೆ ಅವರೇ. ೧೯೨೦ರಿಂದಲೂ ಕಾಂಗ್ರೆಸ್ಸಿಗಾಗಿ ದೇಶಕ್ಕಾಗಿ ದುಡೀತಾ ಬಂದವರು. ಈ ಸದಾಶಿವಪ್ಪ ಮುಂತಾದವರಾದರೋ ೧೯೩೭-೩೮ ರಲ್ಲಿ ಖಾದೀ ಹಾಕಿ ಕಾಂಗ್ರೆಸ್ಸಿಗರಾದವರು. ಶ್ಯಾಮರಾಯರ ಕಾಲುಬೆರಳಿನ ಯೋಗ್ಯತಾನೂ ಇವರಿಗಿಲ್ಲ. ಆದರೇನು? ಅವರು ಬ್ರಾಹ್ಮಣರಾದ್ದರಿಂದ ಅವರ ಮುಖಂಡತ್ವ ಹೋಯ್ತು, ಇವರು ಲಿಂಗಾಯತರಾದ್ದರಿಂದ ಏನೂ ಯೋಗ್ಯತೆ ಇಲ್ಲದೆಯೂ ಲೀಡರ್ ಆದರು. "

ರಾಮರಾಯನ ಮಾತು ಮುಗಿದಿರಲಿಲ್ಲ, ಅಷ್ಟರಲ್ಲಿಯೆ ಇಪ್ಪತ್ತೆರಡರ ಪ್ರಾಯದ, ನಸುಗೆಂಪುಬಣ್ಣದ, ಸಾದಾ ಕಣ್ಣು ಮೂಗಿನ ಯುವತಿಯೊಬ್ಬಳು ಒಳಗೆ ಬಂದಳು.

" ಏನು ಮಾಮಾ, ಯಾವಾಗ ಬಂದಿರಿ ? ಲಿಂಗಾಯತರ ಮೇಲೆ ದಾಳಿ ನಡಸೀರೇನು ಮತ್ತೆ ? "

" ಬಾರವಾ ರಮಾ. ಆ ಗುಂಡಗಡಿಗಿಯವರೆಂದರೆ ನನ್ನ ಮೈಯೆಲ್ಲಾ ಉರೀತದ ಅನ್ನೂದು ನಿನಗೆ ಗೊತ್ತೇ ಅದ. ಅದಕ್ಕ ... "

" ಮಾಮಾ, ನಿಮ್ಮದೊಂದು ಹೊಲಸು ರೋಗ ಅದು. ನನಗೇನು ಸರಿ ಬರುವದಿಲ್ಲ " ಎನ್ನುತ್ತ ರಮಾ ನಮ್ಮ ಎದುರಿನ ಕುರ್ಚಿಯಲ್ಲಿ ಕುಳಿತಳು. ಅವಳೇನು ಚೆಲುವೆಯಾಗಿರಲಿಲ್ಲ. ಆದರೆ ಅವಳ ಕಣ್ಣುಗಳು ಮಾತ್ರ ವಿಶಾಲವಾಗಿದ್ದುವು, ಭಾವಪೂರ್ಣವಾಗಿದ್ದುವು. ತುಟಿಗಳ ಮೇಲೆ ಮುಗುಳು ನಗೆಯೂ ಸದಾ ಅರಳಿರುತ್ತಿತ್ತು.

" ಸದಾಶಿವರ ಪರಿಚಯವಿರಬೇಕಲ್ಲ ರಮಾ ? "

" ಇಲ್ಲ ಮಾಮಾ, ಇವರನ್ನ ಇಂದೇ ನೋಡೋದು ನಾನು. "

" ಇವರೂ ಕಾಂಗ್ರೆಸ್ ಕಾರ್ಯಕರ್ತರು. ಬಸೆಟ್ಟಿ ಗ್ಯಾಂಗಿನ ವಿರುದ್ಧ ಲೇಖ ಬರೆದಾರ. ನೋಡಿಲ್ಲೇನು ? "

" ಮುಂಜಾನೆಯೇ ನೋಡಿದೆನಲ್ಲ? ಅದನ್ನ ಬರೆದವರು ಇವರೇ ಏನು? ನಮಸ್ತೇಜೀ!" ಎಂದು ಅತ್ಯಂತ ಮೋಹಕವಾಗಿ ನಗುತ್ತ ಕೈಮುಗಿದಳು ರಮಾ.

ನಾನು ಥಟ್ಟನೆ ಎದ್ದು ಅವಳ ನಮಸ್ಕಾರಕ್ಕೆ ಪ್ರತಿಯಾಗಿ ನಮಸ್ಕರಿಸಿ ಮತ್ತೆ ಕುಳಿತುಕೊಂಡೆ. ಆ ಶಿಷ್ಟಾಚಾರವನ್ನು ಅವಳು ಮೆಚ್ಚಿಕೊಂಡಿರಬೇಕು.

" ಯೂಥ್ ಕಾಂಗ್ರೆಸಿನಲ್ಲಿದೀರಾ ? "

" ಇಲ್ಲ ರಮಾ. ಬಸೆಟ್ಟಿ ಮಲಕಪ್ಪರ ವಿರುದ್ಧವಾದ್ದರಿಂದ ಇವರು ಹೆಚ್ಚಾಗಿ ಕಾಂಗ್ರೆಸ್ ಕಮಿಟಿಗೇ ಬರೋದಿಲ್ಲ, " ಎಂದು ರಾಮರಾಯನೇ ಹೇಳಿದ, " ಅಲ್ಲದೆ ಇವರೇನು ಲಿಂಗಾಯತರಲ್ಲ. ಕುರುಬರು. ಆ ಬಣಜಿಗರ ಗುಂಪು ಇಂಥಾ ಕುರುಬರನ್ನ ಎಂದಾದರೂ ಹತ್ತರ ಸೇರಿಸೀತೇನು ? "

ರಮಾ ಹುಬ್ಬು ಗಂಟು ಹಾಕಿ ಬೇಸರದ ಧ್ವನಿಯಲ್ಲಿ ನುಡಿದಳು :

" ಯಾವಾಗ ನೋಡಿದರೂ ಜಾತಿ... ಜಾತಿ.... ಜಾತಿ.... ನಿಮಗೆ ಈ ಜಾತಿಯ ಭೂತ ಎಲ್ಲಿಂದ ಬಡಕೊಂಡಿತು ಮಾಮಾ ? ಕೇಳಿ ಕೇಳಿ ಸಾಕಾಗಿ ಹೋಯ್ತು....ಯಾವ ಜಾತಿಯಾದರೇನಂತೆ? ಒಳ್ಳೆಯವರಾದರೆ ಆಯಿತು..."

" ಹುಚ್ಚು ಹುಡುಗಿ ! ನನ್ನಷ್ಟು ಅನುಭವ ನಿನಗಿಲ್ಲ. ಅದಕ್ಕೇ ಹೀಗೆಲ್ಲ ಮಾತಾಡುತೀ ! ಹೋಗು. ಮೊದಲು ಊಟ ಮಾಡಿ ಬಾ. ಆ ಮೇಲೆ ಮಾತಾಡೋಣವಂತೆ ! "

" ಗೆಳತಿಯೊಬ್ಬಳ ಮನೆಗೆ ಹೋಗಿದ್ದೆ. ಅವಳು ಹಾಗೇ ಬಿಡದೆ ಒತ್ತಾಯದಿಂದ ಊಟಮಾಡಿಸಿದಳು, " ಎಂದಳು ರಮಾ.

" ಯಾವ ಗೆಳತಿ ?" ಎನ್ನುತ್ತಾ ಇಂದಿರಾಬಾಯಿ ಪಡಸಾಲೆಗೆ ಬಂದಳು. ಎರಡು ತಾಸುಗಳ ಹಿಂದೆ ಅವಳುಟ್ಟುಕೊಂಡಿದ್ದ ಸೀರೆ ಈಗ ಇರಲಿಲ್ಲ. ಅದರ ಬದಲು ಬಿಳಿಯ ಖಾದೀಸೀರೆ ಉಟ್ಟಿದ್ದಳು.

" ಪದ್ಮಾ ನಾಯಕ. ನನ್ನ ಕ್ಲಾಸ್‌ಮೇಟ್, " ಎಂದಳು ರಮಾ.

" ಆ ಮರಾಠಾ ಮಂದಿಯಲ್ಲಿ ಊಟ ಮಾಡಬೇಡಂತ ಎಷ್ಟು ಹೇಳಿದರೂ ಕೇಳುವದಿಲ್ಲಲ್ಲ ನೀನು ? ನನ್ನ ಮಾತೆಂದರೆ ನಿನಗೆ ಏನೂ ಲಕ್ಷ್ಯವೇ ಇಲ್ಲ, " ಎಂದಳು ಇಂದಿರಾಬಾಯಿ.

" ಊಟ ಮಾಡಿದರೇನಾಯ್ತು ಅವ್ವ ? "

" ಅವರು ಮಾಂಸಾಹಾರಿಗಳು. ಅಂಥವರಲ್ಲಿ ಬ್ರಾಹ್ಮಣರು ಊಟ ಮಾಡುವದುಂಟೇ ರಮಾ ? " ಎಂದ ರಾಮರಾಯ.

" ಮಾಂಸಾಹಾರಿಗಳಾದರೇನಾಯ್ತು ? ನನಗೇನು ಅವರು ಮಾಂಸ ನೀಡುವದಿಲ್ಲ. ನಮ್ಮಂತೆಯೇ ರೊಟ್ಟಿ ಅನ್ನ...."

" ನಿನ್ನಂಥವಳಿಗೆ ಏನು ಹೇಳಿದರೂ ವ್ಯರ್ಥ. ಇಂದಿಲ್ಲ ನಾಳೆ ನೀನು ಮಾಂಸವನ್ನೂ ತಿಂದು ಬರತಕ್ಕವಳೇ. ಇನ್ನೂ ಏನೇನು ಮಾಡುತೀಯೊ ಯಾರಿಗ್ಗೊತ್ತು ? ಆ ಲಿಂಗಣ್ಣನ ದೋಸ್ತಿಯನ್ನೂ ಬಿಡಲೊಲ್ಲೆ..."

ರಮಾ ಮುಖ ಕ್ರೋಧದಿಂದ ಕೆಂಪಗಾಯಿತು. " ದೋಸ್ತಿ ಅಂತೆಲ್ಲ ಯಾಕೆ ಸುಮ್ಮಸುಮ್ಮನೆ ಮಾತಾಡುತೀ ಅವ್ವ ? ಅವರು ನನ್ನ ಕ್ಲಾಸ್‌ಮೇಟ್. ಅಲ್ಲದೆ ಯೂತ್ ಕಾಂಗ್ರೆಸ್ಸಿನಲ್ಲಿ ಕೂಡೇ ಕೆಲಸ ಮಾಡಬೇಕಾಗ್ತದ. ಅದಕ್ಕಿಂತ ಹೆಚ್ಚಿಗೆ ಅವರೊಡನೆ ಏನೂ ಇಲ್ಲ. ಯೂತ್ ಕಾಂಗ್ರೆಸ್ ಕೆಲಸ ಬೇಡ ಅಂದರೆ ಬಿಟ್ಟು ಬಿಡ್ತೇನಿ. ಕಾಲೇಜೂ ಬೇಡಾಂದರೆ ಅದನ್ನು ಬಿಡ್ತೇನಿ. ಸುಮ್ಮನೆ ಇಲ್ಲದ್ದೊಂದು ಮಾತಾಡಿ ನನ್ನ ತಲೆ ಕೆಡಿಸಬೇಡ. "

" ಸಿಟ್ಟಾಗಬೇಡ ರಮಾ. ನಿನ್ನ ಹಿತಕ್ಕಾಗೇ ಅಲ್ಲೇನು ನಿನ್ನ ತಾಯಿ ಹೇಳೋದು ? " ಎಂದ ರಾಮರಾಯ.

" ಹೇಳಲಿ. ನಾನೇನು ಬೇಡ ಅಂದೆನೇ ಮಾಮಾ ? ಆದರೆ ಇಂಥಾದೆಲ್ಲಾ ಹೇಳಿದರೆ ಹ್ಯಾಗೆ ? ನಾನೇನು ಸಣ್ಣ ಕೂಸೇ ? ನನಗೆ ಇಷ್ಟೂ ತಿಳಿಯುವ ದಿಲ್ಲವೆ ? "

" ನೀನೆಷ್ಟೇ ದೊಡ್ಡವಳಾದರೂ, ಜಾಣೆಯಾದರೂ ತಾಯಿಗೆ ಮಾತ್ರ ಚಿಕ್ಕಮಗಳೇ ಅಲ್ಲೇನು ? ತಾಯಿಗಿಂತ ಬಂಧುವಿಲ್ಲ ಅಂತ ಗಾದೆಯೇ ಆದ ಅಲ್ಲ ? ಆ ಲಿಂಗಣ್ಣನ ಸಂಗಡ ನಿನ್ನ ಸಲಿಗೆ ಬಹಳ ಅಂತ ನಾನೂ ಕೇಳೀನಿ ನೋಡವ್ವ. ನನಗೂ ಅದೇನು ಸರಿಬಂದಿಲ್ಲ, " ಎಂದ ರಾಮರಾಯ.

" ಮಾಡಬಾರದಂಥಾದ್ದು ನಾನೇನು ಮಾಡಿಲ್ಲ ಮಾಮಾ. "

" ನೀನು ಮಾಡಿರಲಿಕ್ಕಿಲ್ಲ. ಆದರೂ ಈ ಗುಂಡಗಡಿಗಿಯವರ ಸಂಗಡ ಸಲಿಗೆ ಮಾಡೂದೇ ಚಲೋದಲ್ಲ ನೋಡು. ನಾವು ಬ್ರಾಹ್ಮಣರು....ಹಿಂದೂ ಧರ್ಮದಲ್ಲಿ ನಮ್ಮದು ಶ್ರೇಷ್ಠ ಜಾತಿ. ಲಿಂಗಾಯತರೆಂದರೆ ಶೂದ್ರರು, ಗೊತ್ತದನೋ ಇಲ್ಲೋ ? "

" ಈ ಜಾತಿಯ ಭಾವನಾನ್ನ ಮೊದಲು ಬಿಡಬೇಕಂತ ಗಾಂಧೀಜಿ ಹೇಳಿಲ್ಲವೇ ಮಾಮಾ ? "

" ಹೇಳಿದಾರೆ, ನಿಜ. ಆದರೂ ಅವರು ಹೇಳಿದ್ದೆಲ್ಲಾ ಮಾಡಲಿಕ್ಕಾಗ್ತ ದೇನು ? ಜಾತಿಗಳು ಇಂದು ನಿನ್ನೆಯವಲ್ಲ ರಮಾ. ಸಾವಿರಾರು ವರ್ಷಗಳಿಂದ ಬಂದಾವ. ಅವನ್ನ ಒಮ್ಮೆಲೇ ಬಿಡೂದು ಎಲ್ಲಿ ಶಕ್ಯ ಅದ ? ಸಮಾಜ ಸುಮ್ಮನಿದ್ದೀತೇನು ?"

" ಜಾತಿಯಂತೆ !ಧರ್ಮವಂತೆ ! ಬರೀ ಬಾಯಲ್ಲಿ ಹೇಳಲಿಕ್ಕೇ ಏನು ನಿಮ್ಮ ಶ್ರೇಷ್ಠತೆ ? ಆಡುವದೊಂದು, ಮಾಡುವದೊಂದು ! ಇಂಥಾ ಉಚ್ಚ ನೀಚ ಭೇದಭಾವವನ್ನ ಗಾಂಧೀಜಿ ಎಂದೂ ಸಮರ್ಥಿಸಿಲ್ಲ. ಜಾತಿರಹಿತ ವರ್ಗರಹಿತ ಸಮಾಜ ರಚಿಸುವುದೇ ಅವರ ಗುರಿಯಾಗಿತ್ತು. ಅವರ ಶಿಷ್ಯರಂತ ಕೊಚ್ಚಿ ಕೊಳ್ಳುವ ನೀವು ಮಾತ್ರ ಅವರ ಉಪದೇಶಕ್ಕೆ ವಿರುದ್ಧವಾಗಿ ಜಾತಿಗಳಿಗೇ ಅಂಟಿಕೊಂಡೀರಿ. ಜಾತಿಗಳ ಜಗಳ ಬೆಳಸಲಿಕ್ಕೆ ಪ್ರಯತ್ನಿಸುತ್ತಿದೀರಿ. ಬೇರೇ ಜಾತಿಯವರಂದರೆ ತಿರಸ್ಕರಿಸುತ್ತೀರಿ. ನೀವಾದರೂ ಎಷ್ಟು ಶ್ರೇಷ್ಠರನ್ನು ವದು ನನಗೆ ಗೊತ್ತಿಲ್ಲೇನು ? " ಎಂದಳು ರಮಾ.

ಗುಂಡಿನ ಮಳೆಯಂತೆ ಹೊರಟ ಆ ವಾಗ್ಧಾರೆಯಿಂದ ಅಪ್ರತಿಭನಾದರೂ ಅದನ್ನು ಹೊರಗೆ ತೋರಿಸದೆ ರಾಮರಾಯ ಗಟ್ಟಿಯಾಗಿ ನಗುತ್ತ ಮಾತನಾಡಿದ :

" ತರುಣರಕ್ತ ...ಬಿಸಿರಕ್ತ....ಈ ವಯಸ್ಸಿನಲ್ಲಿ ನೀನು ಹೀಗೆಲ್ಲಾ ಆಡುವದೂ ಸಹಜವೆ. ಜಾತಿರಹಿತ ವರ್ಗರಹಿತ ಸಮಾಜದ್ದು ಒಂದು ಗುರಿ. ಯಾವ ಗುರಿಯೂ ಒಮ್ಮಿಂದೊಮ್ಮೆಲೆ ಸಾಧಿಸಲು ಶಕ್ಯ ಇಲ್ಲ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬರಬೇಕಾದರೆ ಎಷ್ಟು ವರ್ಷ ಹಿಡಿಯಿತು ? ಎಷ್ಟು ಜನರು ದುಡಿಯಬೇಕಾಯಿತು ? ಎಷ್ಟು ಮಂದಿ ಬಲಿದಾನ ಮಾಡಬೇಕಾಯಿತು ? ಜಾತಿರಹಿತ ವರ್ಗರಹಿತ ಸಮಾಜದ ಮಾತೂ ಹಾಗೇ. ಅದಕ್ಕೆಲ್ಲ ಸಮಯ ಬೇಕು. ಇನ್ನೂ ನೂರಾರು ವರ್ಷ ಹೋಗಬೇಕು. ಅದುವರೆಗೂ ನಾವು ಸಮ್ಮತನವನ್ನ ಬಿಟ್ಟುಕೊಡಬಾರದು. ನಾ ಹೀಗೆ ಹೇಳಲು ಬೇರೇ ಕಾರಣಗಳೂ ಅವ...."

" ನಿಮ್ಮದೊಂದು ಮಾತನ್ನೂ ನಾ ಒಪ್ಪುವದಿಲ್ಲ. ನೀವೆಲ್ಲಾ ಬರೀ ಪ್ರತಿಗಾಮಿಗಳು !" ಎಂದಳು ರಮಾ.

" ಕಮ್ಯೂನಿಸ್ಟರಂತೆ ಮಾತಾಡಹತ್ತಿದಿಯಲ್ಲ ? "

" ಕಮ್ಯೂನಿಸ್ಟರು ಹೀಗೆ ಮಾತಾಡುತಾರೇನು ? ನನಗೆ ಗೊತ್ತಿಲ್ಲ. ಕಮ್ಯೂನಿಸ್ಟರ ಪರಿಚಯು ಕೂಡಾ ನನಗಿಲ್ಲ. ನನಗನಿಸಿದ್ದು ನಾ ಹೇಳುತೀನಿ."

" ಕಾಗವಾಡನ ದೋಸ್ತಿ ಆಗಿದೆಯೂ ಏನೋ ! " ಎಂದು ಇಂದಿರಾ-ಬಾಯಿ ಕೆಣಕಿದಳು.

ಸಿಟ್ಟಿನಿಂದ ಚಡಪಡಿಸುತ್ತ ತನ್ನ ಕೊಟಡಿಗೆ ಹೊರಟು ಹೋದಳು, ರಮಾ.

೯

ಆ ದಿನ ನಾನು ಸೆರೆ ಮುಟ್ಟಲಿಲ್ಲ; ಅದರ ಮರುದಿನವೂ ಮರಿಯಪ್ಪನ ಗಡಂಗದತ್ತ ಸುಳಿಯಲಿಲ್ಲ. ಸೆರೆಯ ನೆನಪು ಬಂದಾಗಲೆಲ್ಲ ಹೋಟಲಿಗೆ ನುಗ್ಗಿ ಚಹ ಕುಡಿಯುತ್ತಿದ್ದೆ, ಸಿಗರೇಟು ಸೇದುತ್ತಿದ್ದೆ. ರಾತ್ರೆ ರಾಧೆ ಸೆರೆ ಬೇಡಿ ಕೊಂಚ ತೊಂದರೆ ಕೊಟ್ಟಳು ಅಷ್ಟೆ.

"ನನ್ನ ಸ್ನೇಹ ಬೇಕಾಗಿದ್ದರೆ ಅದರ ಸುದ್ದಿ ತೆಗೆಯಬೇಡ ರಾಧಾ!" ಎಂದು ನಾನು ಕಠೋರವಾಗಿ ಹೇಳಿದಾಗ ಅವಳಿಗೆ ಆಶ್ಚರ್ಯವಾಗದಿರಲಿಲ್ಲ.

"ಅಂದರೇನು ? ನೀವದನ್ನ ಬಿಟ್ಟೇ ಬಿಟ್ಟಿರೊ ಏನು ?"

"ಬಿಟ್ಟಂತೆಯೆ ! ನೀನು ಮಾತ್ರ ಮತ್ತೆ ಅದರ ನೆನಪು ತೆಗೆದು ನನ್ನ ತಲೆ ಕೆಡಿಸಬಾರದು."

ಪ್ರೀತಿಯಿಂದ ನನ್ನನ್ನು ತಬ್ಬಿಕೊಳ್ಳುತ್ತ, ರಾಧೆ ನಿಜವಾದ ಸಂತೋಷ ದಿಂದಲೇಹೇಳಿದಳು :

"ಆ ಕೆಟ್ಟ ಚಟ ಬಿಟ್ಟು ಬಹಳ ಚಲೋ ಮಾಡಿದಿರಿ. ನೀವು ಬಿಟ್ಟರೆ ನಾನೂ ಬಿಟ್ಟು ಬಿಡ್ತೀನಿ."

"ನಿಜವೇ ರಾಧಾ ?" ಎಂದು ಕೇಳಿದೆ, ಅವಳನ್ನು ಮುದ್ದಿಸುತ್ತ.

"ಪರೀಕ್ಷೆ ಮಾಡಿ ನೋಡಿರಿ ಬೇಕಾದರೆ!" ಎನ್ನುತ್ತ ಅವಳು ನನ್ನ ಎದೆ ಯಲ್ಲಿ ಮುಖ ಮುಚ್ಚಿಕೊಂಡಳು.

ಸ್ವಲ್ಪ ಹೊತ್ತು ಸುಮ್ಮನಿದ್ದು ನಾನು ಕೇಳಿದೆ :

"ಸೋಮಯ್ಯ ಬಂದಿದ್ದನೇ ರಾಧಾ ?"

"ಇಲ್ಲ, ಯಾಕೆ ?"

"ಯಾಕೂ ಇಲ್ಲ. ಸುಮ್ಮನೆ ಕೇಳಿದೆ."

" ಮತ್ತೇನಾರೆ ಮಾಡೀರೋ ಏನು ? " ಅವಳು ಗಾಬರಿಗೊಂಡು ವಿಚಾರಿಸಿದಳು.

" ಏನಿಲ್ಲ, ಏನಿಲ್ಲ, ಗಾಬರಿಯಾಗಬೇಡ, " ಎಂದು ಅವಳನ್ನು ಸಂತೈಸಿದೆ.

ಮಾರನೆಯ ದಿನ ಬೇಗನೆ ಎದ್ದು, ಚೆನ್ನಾಗಿ ಮುಖಕ್ಷೌರ ಮಾಡಿಕೊಂಡು, ಸ್ನಾನಮಾಡಿ, ಬೇರೆ ಬಟ್ಟೆ ಧರಿಸಿ ನಾನು ಹೊರಟು ನಿಂತಾಗ ರಾಧೆ ಕುತೂಹಲದಿಂದ ಕೇಳಿದಳು

" ಒಳ್ಳೇ ಮದುಮಗನಂತೆ ಡ್ರೆಸ್ ಮಾಡಿಕೊಂಡು ಹೊರಟಿರಲ್ಲ ! ಏನು ಅಂಥಾ ವಿಶೇಷ ?"

" ಇವತ್ತು ಒಬ್ಬ ಲೀಡರ್ ಬರುವವರಿದಾರ ರಾಧಾ. ಅವರನ್ನ ನೋಡಲಿಕ್ಕೆ ಹೋಗುವದದ. "

ಅವಳು ತುಟಿಯ ಮೇಲೆ ಬೆರಳಿಟ್ಟುಕೊಂಡು ಹೇಳಿದಳು · " ಲೀಡರುಗಳಿಗೂ ನಿಮಗೂ ಏನು ಸಂಬಂದ ? ಎಂದಿನಿಂದ ಸಂಬಂಧ ? "

" ಇಂದಿನಿಂದಲೇ ಅನ್ನು, ಇನ್ನುಮೇಲೆ ನಾನೂ ಸಾರ್ವಜನಿಕ ಕೆಲಸ ಮಾಡತಕ್ಕವನು ! "

" ಏನೇ ಮಾಡಲೊಲ್ಲಿರೇಕೆ ? ನನ್ನ ಕೈಬಿಡದಿದ್ದರಾಯ್ತು ! ಎಂದಳು ರಾಧೆ.

" ನಾ ಕೈಬಿಟ್ಟರೂ ನೀನು ಬಿಡಬೇಕಲ್ಲ ? " ಎಂದು ಹೇಳಿ ಅವಳ ತಲೆಕೂದಲಿನ ಮೇಲೆ ಮಮತೆಯಿಂದ ಕೈ ಆಡಿಸಿ ಹೊರಟು ಬಿಟ್ಟೆ.

ಚಹದಂಗಡಿಗೆ ಬಂದಾಗ ಮೇಜಿನ ಮೇಲೆ ' ತುತೂರಿ ಕಾಣಿಸಿತು. ಸಹಜವಾಗಿ ಅದನ್ನೆತ್ತಿಕೊಂಡು ನೋಡಿದರೆ, ' ಕ್ರಾಂತಿ 'ಯಲ್ಲಿ ನಾನು ಬರೆದಿದ್ದ ಲೇಖನಕ್ಕೆ ಉತ್ತರವಾಗಿ ಪ್ರಕಟವಾಗಿದ್ದ ಲೇಖನವೊಂದು ಕಾಣಿಸಿತು. ಬಸೆಟ್ಟಿಯ ಬಗೆಗೆ ನಾನು ಬರೆದಿದ್ದುದೆಲ್ಲ ನೂರಕ್ಕೆ ನೂರು ಸುಳ್ಳು. ಕೇವಲ ವೈಯಕ್ತಿಕ ದ್ವೇಷದಿಂದ ಬಸೆಟ್ಟಿಯ ವಿರುದ್ಧ ನಾನು ಅಪ್ರಚಾರ ನಡಸುತ್ತಿದ್ದೆ. ಬಸೆಟ್ಟಿ ಬಹಳ ಸಭ್ಯ ಗೃಹಸ್ಥ. ಸತ್ಯಸಂಭ. ಮಹಾತ್ಮರ ನಿಜವಾದ ಅನುಯಾಯಿ— ಎಂದೆಲ್ಲ ಬರೆದಿದ್ದ ' ತುತೂರಿ 'ಯ ಸಂಪಾದಕ, ಪಾಟೀಲ. ಅವನ ಬರಹ ಓದಿ

ನನಗೆ ಆಶ್ಚರ್ಯವೇನೂ ಆಗಲಿಲ್ಲ. ಹತ್ತಿಪ್ಪತ್ತು ರೂಪಾಯಿ ಕೊಟ್ಟು ಬಸೆಟ್ಟಿಯೇ ಆ ಬರಹ ಪ್ರಕಟವಾಗುವಂತೆ ಮಾಡಿದ್ದುದು ಸ್ಪಷ್ಟವಾಗಿತ್ತು.

ಚಹ ಕುಡಿದು 'ಕ್ರಾಂತಿ'ಯ ಕಚೇರಿಗೆ ಹೊಂಟೆ. ಏನನ್ನೊ ಬರೆಯುತ್ತ ಕುಳಿತಿದ್ದ ಕಾಗವಾಡ ನನ್ನನ್ನು ನೋಡುತ್ತಲೂ ಬರೆಯುವುದನ್ನು ನಿಲ್ಲಿಸಿ ನಗು ನಗುತ್ತ ಕೇಳಿದ :

"ತುತೂರಿಯ ಬಾಡಿಗೆಯ ಲೇಖನ ಓದಿದಿರಾ ?"

"ಓದಿದೆ, ಇದೇ ಈಗ."

"ಅದರ ಬಗ್ಗೆ ಮನಸಿಗೆ ಹಚ್ಚಿಕೊಳ್ಳಬಾರದು ಹಂ! ಪಾಟೀಲನ ಹೊಟ್ಟೆಯ ಪಾಡು ಅದು,"

"ನನಗೂ ಗೊತ್ತೇ ಅದ ಅಲ್ಲ ? ನಾನೇನೂ ತಿಳಕೊಂಡಿಲ್ಲ."

"ಪಾಟೀಲ ಎಂಥವನನ್ನುವದು ಜಿಲ್ಲೆಯ ಜನರಿಗೂ ಗೊತ್ತೇ ಅದ. ಶ್ರೀಮಂತರಿಂದ ಅವ ಹಣ ತಗೊಳ್ಳೋದು ಸಣ್ಣ ಹುಡುಗರಿಗೂ ತಿಳಿದ ವಿಷಯ."

"ಅದಿರಲಿ. ಸದಾಸ್ಮಿತಪ್ಪನವರು ಬರ್‍ತಾರಲ್ಲ ಇವತ್ತು? ನೀವೂ ಬರ್‍ತೀರಾ ಸಭೆಗೆ ?"

"ಕಾಂಗ್ರೆಸ್ ಸಭೆಗೆ ನನ್ನ ಸೇರಿಸ್ತಾರೋ ಇಲ್ಲೋ ?"

"ಪತ್ರಿಕಾಕರ್ತರು ಅಂತ ಬರಬಹುದಲ್ಲ ?"

"ಒಮ್ಮೊಮ್ಮೆ ಪತ್ರಿಕಾಕರ್ತರನ್ನೂ ಬಿಡುವದಿಲ್ಲ. ರಾಮರಾಯ ಇದ್ದಾಗ ಅವನಿಗೂ ನನಗೂ ಯಾವಾಗಲೂ ಚಕಮಕಿಯೇ ನಡೀತಿತ್ತು. ನಿಮಗೆ ಕಮ್ಯುನಿಸ್ಟರಿಗೆ ಕಾಂಗ್ರೆಸ್ ಸಭೆಯಲ್ಲೇನು ಕೆಲಸ ? ಅಂತ ಅವ ವಾದಿಸುವವ. ನಾನು ಕಮ್ಯುನಿಸ್ಟ ಪಾರ್ಟಿ ಮೆಂಬರಾಗಿ ಇಲ್ಲಿ ಬರುವದಿಲ್ಲ. ಪೇಪರ್ ಎಡಿಟರಾಗಿ ಬರ್‍ತೀನಿ ಅಂತ ನಾನು. ನೀವು ಏನೇ ಆಗಿ ಬಂದರೂ ನಾವು ನಿಮ್ಮನ್ನು ಸಭೆಗೆ ಬಿಡುವದಿಲ್ಲಂತ ಅವ. ಮುಂದೆ ಆತ ಹೋಗಿ ಮಲಿಕಪ್ಪ ಬಂದ ಮೇಲೆ ಒಂದೆರಡು ತಿಂಗಳು ನನ್ನ ಸಂಗಡ ಚೆನ್ನಾಗಿದ್ದ. ಬಿಟ್ಟೀ ಪ್ರಚಾರ ಸಿಕ್ಕರೆ ಸಿಗಲಿ ಅಂತ. ಆದರೆ ಅವನ ನಿಜಸ್ವರೂಪವನ್ನ ಬಯಲಿಗೆಳೆದು ನಾನೊಂದು ಲೇಖನ ಬರೆದಾಗ ಅವನ ಸ್ನೇಹ ಮುಗಿದುಹೋಯ್ತು. ಈಗ ನನ್ನ ಕಂಡರೆ ಕಣ್ಣು ಕೆಂಪಗೆ

ಮಾಡಿಕೊಂಡು ಅತ್ತ ಮೋರೆ ತಿರುಗಿಸಿ ಹೊರಟು ಹೋಗ್ತಾನೆ. ಅಂಥವನು ನನ್ನ ಸಭೆಗೆ ಸೇರಿಸಿಯಾನೇ ? "

" ನೋಡೋಣ ಬರ್ರಿ, ನಾನೂ ಇರ್ತೀನಲ್ಲ ? "

" ನಿಮ್ಮ ಮೇಲೂ ಅವರು ಸಿಟ್ಟು ಬೆಂಕಿಯಾಗಿರಬೇಕು. ನಿಮ್ಮ ಮಾತಾದರೂ ಯಾರು ಕೇಳುತಾರೆ ? "

" ಇರಲಿ. ಪರೀಕ್ಷೆಯನ್ನಾದರೂ ಮಾಡಿದರಾಯ್ತು. "

ನನ್ನ ಬಲವಂತಕ್ಕೆ ಕಟ್ಟುಬಿದ್ದು ಕಾಗವಾಡ ಹೊರಡಲೇಬೇಕಾಯಿತು. ನಾವು ಥಿಯೆಟರ್ ಬಳಿ ಬರುತ್ತಿದ್ದಂತೆ ಮುದ್ದಪ್ಪ ಸಿಕ್ಕಿದ. ಆತ ಆಗತಾನೆ ರೈಲಿ ನಿಂದಿಳಿದು ಬಂದ ಹಾಗೆ ಕಾಣಿಸಿತು.

" ಓಹೊ ! ಸಂಪಾದಕರು ಲೇಖಕರು ಕೂಡಿಬಿಟ್ಟೀರಲ್ಲ ! " ಎಂದ ಮುದ್ದಪ್ಪ. ಮುಗ್ಧವಾಗಿ ನಗುತ್ತ.

" ಇವರೇನೊ ಸಂಪಾದಕರೇ, ನಾನೆಂಥಾ ಲೇಖಕ ಬಿಡಿರಿ. ಒಂದು ಲೇಖ ಬರೆದಷ್ಟಕ್ಕೆ ಲೇಖಕ ಆಗ್ತಾರೇನು ಯಾರಾರೆ ? "

" ಇವತ್ತೇನ್ರಿ ? ಇಂಥಾ ಲೇಖಕರೇ ಬಹಳ. ನೆಟ್ಟಗೆ ನಾಲ್ಕು ಸಾಲು ಬರೆಯಲಿಕ್ಕೆ ಬರದವರೂ ಲೇಖಕರಾಗಿ ಮೆರೀತಿದಾರ. ತುತೂರಿಯ ಸಂಪಾದಕ ನಾಗಿದಾನಲ್ಲ ಆ ಪಾಟೀಲ, ಅವ ಬರೆಯೋದು ನೋಡಿದರೆ ನಗೆ ಬರ್ತದ. ದಲಾಲಿ ಅಂಗಡಿಯೊಳಗೆ ಕಾರಕೂನನಾಗಿದ್ದವ ನಾಲ್ಕು ಮಂದಿ ಬ್ಲಾಕ್‌ಮಾರ್ಕೆಟ್ಟಿನವರ ಬಾಲ ಹಿಡಿದು ಪ್ರೆಸ್ ಹಾಕಿಕೊಂಡು ಪೇಪರು ಮಾಡಿದ. ಬಸೆಟ್ಟಿಯನ್ನ ಹೊಗಳಿ ಬರೆದದ್ದು ನೋಡೀರೋ ಇಲ್ಲೋ ? " ಎಂದ ಮುದ್ದಪ್ಪ.

" ಹೊಗಳಲಿಕ್ಕೇ ಬೇಕಲ್ಲರೀ ? ಅನ್ನದಾತರನ್ನ ಹೊಗಳಲಿಕ್ಕೇ ಹುಟ್ಟಿಕೊಂಡ ಪೇಪರು ಅಂದ ಮೇಲೆ ? " ಎಂದ ಕಾಗವಾಡ.

ಕಾಂಗ್ರೆಸ್ ಕಚೇರಿಯೆದುರು ನಿಂತುಕೊಂಡಿದ್ದ ಕಲ್ಲಪ್ಪನನ್ನು ಮುದ್ದಪ್ಪ ಕೇಳಿದ :

" ಸದಾಶಿವಪ್ಪನವರು ನೇರವಾಗಿ ಇಲ್ಲಿಗೇ ಬರ್ತಾರೇನ್ರಿ ಕಲ್ಲಪ್ಪನವರೇ ? "

" ಇಲ್ಲ. ಸ್ನಾನಗೀನ ತೀರಿಸಿಕೊಂಡು ಬರಬೇಕಲ್ಲ ? ಪ್ರೆಸಿಡೆಂಟರ ಮನೆಯಲ್ಲಿ ಕಾಫೀ ವ್ಯವಸ್ಥೆ ಆಗಿದೆ, " ಎಂದ ಕಲ್ಲಪ್ಪ. ಅವನು ಜೀಪ್ ಏರುತ್ತಲೂ ಅದು ಭುರ್ರನೆ ಹೊರಟುಹೋಯಿತು.

ಮಲ್ಲಿಕಾರ್ಜುನಪ್ಪನ ಮನೆಗಂತೂ ನಾವು ಹೋಗುವಂತಿರಲಿಲ್ಲ. ಎಂತಲೇ ಅಲ್ಲಿ ಇಲ್ಲಿ ಅಲೆಯುತ್ತ ಒಂದು ತಾಸು ಕಳೆದೆವು. ಹನ್ನೊಂದು ಗಂಟೆಯ ಸುಮಾರಿಗೆ ಸದಾಶಿವಪ್ಪನವರು ಆಗಮಿಸಿದರು, ಮಲ್ಲಿಕಾರ್ಜುನಪ್ಪನ ಕಾರಿನಲ್ಲಿ.

ಕಾಂಗ್ರೆಸ್ ಭವನದ ಅಂಗಳದಲ್ಲಿ ನೆರೆದಿದ್ದ ಕಾರ್ಯಕರ್ತರ ವಂದನೆಗಳನ್ನು ಸ್ವೀಕರಿಸುತ್ತ ತಮ್ಮ ಹರವಾದ ಮುಖದಲ್ಲಿ ನಗೆಯನ್ನು ಅರಳಿಸುತ್ತ ಸದಾಶಿವಪ್ಪನವರು ನಿಧಾನವಾಗಿ ನಡೆದು ಬಂದರು. ಸದಾಶಿವಪ್ಪನವರು ಮಾದಾಪುರಕ್ಕೆ ಹೊಸಬರೇನೂ ಆಗಿರಲಿಲ್ಲ. ಅನೇಕ ಬಾರಿ ಇಲ್ಲಿಗೆ ಬಂದು ಹೋಗಿದ್ದರು, ಎಷ್ಟೋ ಬಾರಿ ಭಾಷಣ ಮಾಡಿದ್ದರು. ನಾನೂ ಎರಡುಮೂರು ಸಲ ಅವರ ಭಾಷಣ ಆಲಿಸಿದ್ದೆ.

ಹತ್ತಿಪ್ಪತ್ತು ಜನರ ಮಧ್ಯೆ ನಾನು ನಿಂತಿದ್ದುದರಿಂದ ಬಸೆಟ್ಟಿ ನನ್ನನ್ನು ನೋಡಲು ಶಕ್ಯವಾಗಿರಲಾರದು. ಕಾಂಗ್ರೆಸ್‌ಭವನದ ಒಳಗಡೆ ಅಡಿಯಿಡಲೂ ಸ್ಥಳವಿರಲಿಲ್ಲ. ನಾವು ನಾಲ್ಕೈದು ಜನರು ಬಾಗಿಲಿನ ಹತ್ತಿರವೇ ನಿಂತುಕೊಳ್ಳಬೇಕಾಯಿತು. ಉತ್ತರ ದಿಕ್ಕಿನ ಗೋಡೆಗುಂಟ ಹಾಸಿದ್ದ ಗಾದಿಗಳ ಮೇಲೆ ಮುಖಂಡರೆಲ್ಲ ಕುಳಿತುಕೊಂಡರು. ಆಗಲೂ ಬಸೆಟ್ಟಿ ಸದಾಶಿವಪ್ಪನವರ ಪಕ್ಕದಲ್ಲಿಯೆ ಇದ್ದ.

ಸಭೆಗಾರಂಭವಾಯಿತು. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷ ಮಲ್ಲಿಕಪ್ಪನಿಗೆ, ಭಾಷಣ ಮಾಡಲು ಬರುತ್ತಿದ್ದುದು ಅಷ್ಟಕ್ಕಷ್ಟೆ. ಎಂತಲೇ ಆತ ಕಲ್ಲಪ್ಪನನ್ನೇ ಮುಂದುಮಾಡಿದ. ಸದಾಶಿವಪ್ಪನವರನ್ನು ಸ್ವಾಗತಿಸಲೆಂದು ಅವನು ಎದ್ದವನು ಪ್ರಸ್ತುತ ಪರಿಸ್ಥಿತಿಯ ಬಗೆಗೆ ಮುಕ್ಕಾಲು ಗಂಟೆ ಬೈಠಿಗೆ ಕೊರೆದ. "ಚುನಾವಣೆ ಸಮೀಪಿಸಿದೆ. ಅದರ ಖರ್ಚಿಗಾಗಿ ಹಣ ಕೂಡಿಸುವದು ನಮ್ಮ ನಿಮ್ಮೆಲ್ಲರ ಕರ್ತವ್ಯ. ಇವತ್ತು ಸದಾಶಿವಪ್ಪನವರು ಬಂದಿರೋದು ಆ ಕೆಲಸಕ್ಕೆ ಚಾಲನೆ ಕೊಡಲಿಕ್ಕೆ," ಎಂದು ಹೇಳಿ ಕಲ್ಲಪ್ಪ ಕುಳಿತುಕೊಳ್ಳುತ್ತಿದ್ದಂತೆಯೇ ಅಧ್ಯಕ್ಷ ಮಲ್ಲಿಕಪ್ಪನೆದ್ದು— "ಚುನಾವಣೆಗಾಗಿ ನಮ್ಮ ಜಿಲ್ಲೆಯಿಂದ ಒಂದು ಲಕ್ಷ ರೂಪಾಯಿ ಆದರೂ ಕೂಡಿಸಬೇಕಾಗ್ತದ. ಕಾಂಗ್ರೆಸ್‌ಪ್ರೇಮಿಗಳು ಉದಾರವಾಗಿ ಸಹಾಯ ಮಾಡಿದರೆ ಒಂದೇ ದಿನದೊಳಗೆ ಇಷ್ಟು ಹಣ ಕೂಡಿಸ

ಬಹುದು. ಅಧ್ಯಕ್ಷನಾದ ನನ್ನಿಂದಲೇ ಆರಂಭವಾದರೆ ಉತ್ತಮ ಅಂತ ನಮ್ಮ ಮಾನ್ಯ ನಾಯಕರು ಅಪ್ಪಣೆ ಕೊಟ್ಟಾರ. ಆ ಪ್ರಕಾರ ನಾನು ಐದು ಸಾವಿರ ರೂಪಾಯಿ ಕೊಡ್ತೀನಿ ಅಂತ ಘೋಷಣಾ ಮಾಡ್ತೀನಿ," ಎಂದು ಹೇಳಿ, ಅಷ್ಟು ಹೇಳುವಷ್ಟರಲ್ಲಿಯೆ ಬೆವರು ಸುರಿಸುತ್ತ, ಕೈವಸ್ತ್ರದಿಂದ ಗಾಳಿ ಹಾಕುತ್ತ ಕುಳಿತುಕೊಂಡ.

ಅವನ ತರುವಾಯ ಬಸೆಟ್ಟಿಯಲ್ಲದೆ ಇನ್ನಾರು ಏಳುವವರು ? ಸರಿ. ಎದ್ದುನಿಂತ ನಮ್ಮ ಸೆಟ್ಟಿ. ನಿಜವಾಗಿ ಆತ ಸೆಟ್ಟಿಯ ಹಾಗೆ ಕಾಣುವುದೇ ಇಲ್ಲ. ಬಡಕಲು ಮೈ: ಸಣಕಲು ಮುಖ. ವಿರಳವಾದ ತಲೆಗೂದಲು ಅದರ ಮೇಲೆ ಬಿಳಿಯ ಟೋಪಿ, ಹೇಳಿದ ಬಸೆಟ್ಟಿ ;

"ಮಾ ..ಮಾ ..ಮಾ... ಮಾನ್ಯ ಸದಾಸ್ಮಿತಪ್ಪನವರೆ, ಪ್ರೆಸಿಡೆಂಟರು ಈಗ ತಮ್ಮದು ಹೇಳಿದರು. ನಾನೂ ನ....ನ....ನ....ನನ್ನದು ಹೇಳಬೇಕು. ನಾನೇನು ನಮ್ಮ ಪ್ರೆಸಿಡೆಂಟರಷ್ಟು ಸಾಹುಕಾರನಲ್ಲ. ಆದರೂ ಏನೋ ನನ್ನ ಸುದಾಮನ ಅವಲಕ್ಕಿ ಅಂತ ಎರಡುಸಾವಿರ ಕೊಡ್ತೀನಿ."

"ಛೆ....ಛೆ ... ಬಸೆಟ್ಟಿಯವರಂಥಾ ಲಕ್ಷಾಧೀಶರು ಎರಡೇ ಸಾವಿರ ಕೊಡೋದಂದರೆ ಅವರ ಘನತೆಗೆ ಸರಿಯಲ್ಲ. ಅವರು ಹತ್ತುಸಾವಿರ ಆದರೂ ಕೊಡಬೇಕು," ಎಂದು ಕಾರ್ಯಕರ್ತನೊಬ್ಬ ಕೂಗಿದ.

ಮಲ್ಲಿಕಪ್ಪ ಅತ್ತ ದೃಷ್ಟಿ ತಿರುಗಿಸಿ, "ಸೇಲೆನ್ಸ್ !" ಎಂದು ಗದರಿಸಿ ಬಸೆಟ್ಟಿಯನ್ನು ಕುರಿತು ಹೇಳಿದ :

"ಎರಡುಸಾವಿರ ಅಂದರೆ ನಿಜವಾಗಿ ಕಮ್ಮಿ ಆಗ್ತದರೀ ಸೆಟ್ಟರೆ. ಆರು ಸಾವಿರ ಆದರೆ ಅಡ್ಡಿಯಿಲ್ಲ."

"ಆರುಸಾವಿರ ಅಂದರೆ ಏನು ಬಿಡಿರೀ ! ಟಿಕೀಟು ಬೇರೆ ಸಿಗ್ತಾವಲ್ಲ ನಿಮಗೂ ನಿಮ್ಮ ಶ್ರೀಮತಿಯವರಿಗೂ ! " ಎಂದು ಮೂಲೆಯಲ್ಲಿಂದ ಒಂದು ಧ್ವನಿ ಕೇಳಬಂದಿತು.

ಮಲ್ಲಿಕಪ್ಪ ಮತ್ತೆ ಹುಬ್ಬೇರಿಸಿ "ಸೇಲೆನ್ಸ್ ! ಸೇಲೆನ್ಸ್ ! ಹಿಂಗೆಲ್ಲಾ ಆಡಬಾರದು ! " ಎಂದು ಗದರಿಸಿದ. ದಕ್ಷಿಣದ ಮೂಲೆಯಿಂದ ಪಿಸಿಪಿಸಿ ನಗು ಕೇಳಬರತೊಡಗಿತು. ಪಶ್ಚಿಮದ ಗೋಡೆಗುಂಟ ಕುಳಿತಿದ್ದ ದೇಶಸೇವಿಕೆಯರ ಗುಂಪಿನಲ್ಲೂ ನಗೆಯ ಲಹರಿಯೆದ್ದು ಮಾಯವಾಯಿತು.

ಮಲ್ಲಿಕಪ್ಪನ ಇಂಗ್ಲೀಷನ್ನು ಅಣಕಿಸಲೆಂದು "ಸೇಲೆನ್ಸ್" ಎಂದು ಯಾರೋ ಕಳ್ಳದನಿಯಲ್ಲಿ ಕೂಗಿದರು. ಸಭೆಯಲ್ಲಿ ಮತ್ತೆ ನಗೆಯ ತೆರೆ ಯೆದ್ದಿತು.

"ಆಗಲಿ. ಪ್ರೆಸಿಡೆಂಟರು ಹೇಳತಾರಂದ ಮ್ಯಾಲ ಇಲ್ಲಾ ಅನ್ನಲಿಕ್ಕೆ ಬರೂದಿಲ್ಲ. ಆರುಸಾವಿರ ನಾನು ಕೊಡ್ತೇನಿ," ಎಂದು ಹೇಳಿದವನೆ ಬಸೆಟ್ಟಿ ಕುಳಿತುಕೊಂಡ.

"ಹೊಡೆದರಪ್ಪಾ ಟಿಕೀಟು!" ಎಂಬ ಧ್ವನಿ ಕೇಳಬಂದಿತು, ಮೂಲೆ ಯಿಂದ.

ಮತ್ತೆ ನಾಲ್ಕೈದು ಜನ ಎದ್ದು ಮೂರುಸಾವಿರ, ನಾಲ್ಕುಸಾವಿರ ವಾಗ್ದಾನ ಮಾಡಿದರು. ಅನಂತರ ಸದಾಸ್ಮಿತಪ್ಪನವರು ಮುಗುಳು ನಗುತ್ತ ಸಭಿಕರನ್ನುದ್ದೇಶಿಸಿ ಕೇಳಿದರು;

"ಪ್ರಿಯ ಸ್ನೇಹಿತರೆ. ಪ್ರವಾಸದಿಂದ ತುಂಬಾ ಆಯಾಸವಾಗಿದೆ. ಕುಳಿತು ಕೊಂಡೇ ಮಾತನಾಡಲು ತಮ್ಮ ಅನುಮತಿಯಿದೆಯಷ್ಟೆ ?"

"ಹಾಗೇ ಮಾಡಿರಿ. ಹಾಗೇ ಮಾಡಿರಿ." ಎಂದರು ಒಬ್ಬಿಬ್ಬರು.

"ಮಿತ್ರರೆ. ತುಂಬಾ ವಂದನೆಗಳು. ನಾವಿಲ್ಲಿ ಇಂದು ಏತಕ್ಕಾಗಿ ಸೇರಿದ್ದೇವಿ ಅನ್ನೋದನ್ನ ಕಲ್ಲಪ್ಪನವರು ಹೇಳಿದಾರೆ. ಚುನಾವಣೆ ಸಮೀಪಿಸಿದೆ. ಕಾಂಗ್ರೆಸ್ಸಿನವರಾದ ನಾವೆಲ್ಲರೂ ನಮ್ಮ ನಮ್ಮ ಭಿನ್ನಾಭಿಪ್ರಾಯಗಳನ್ನ ಬದಿಗಿರಿಸಿ ಒಂದಾಗಿ ಕೆಲಸ ಮಾಡಬೇಕಾಗಿದೆ, ಚುನಾವಣೆಗೆ ಹಣ ಬೇಕು. ನಿಮ್ಮ ಜಿಲ್ಲೆಯ ಕೆಲವು ಮುಖಂಡರು ಉದಾರವಾಗಿ ಸಹಾಯ ಮಾಡಲು ಒಪ್ಪಿದಾರೆ, ನೀವೂ ಸಹ ಪ್ರತಿಯೊಬ್ಬರೂ ನಿಮ್ಮ ನಿಮ್ಮ ಪಾಲಿನ ವಂತಿಗೆ ಕೊಡಬೇಕು. ಅದಷ್ಟು ಬೇಗ ಕೊಡಬೇಕು. ಏಕೆಂದರೆ ಚುನಾವಣೆಯ ಸಿದ್ಧತೆ ಈಗಿನಿಂದಲೇ ಆರಂಭವಾಗ ಬೇಕು...."

ಅಷ್ಟು ಹೇಳಿ ಕೊಂಚ ತಡೆದು, ಸಭಿಕರ ಮೇಲೆಲ್ಲ ದೃಷ್ಟಿಯೋಡಿಸುತ್ತ ಅವರೆಂದರು ;

"ನಾನಿಂದು ಎಂದಿನಂತೆ ಭಾಷಣ ಮಾಡುವದಿಲ್ಲ. ಸಭಿಕರು ಏನಾದರೂ ಕೇಳುವದಿದ್ದರೆ ಕೇಳಬೇಕು. ನಾನು ಉತ್ತರ ಕೊಡಲು ಪ್ರಯತ್ನಿಸುತ್ತೇನೆ."

ಅಲ್ಲಿ ನೆರೆದಿದ್ದವರಲ್ಲಿ ಅನೇಕರು ಅಂಥ ಸಂದರ್ಭವನ್ನೇ ಕಾದುಕೊಂಡು ಕುಳಿತಿದ್ದರು, ಸದಾಸ್ಮಿತಪ್ಪನವರಿಗೆ ಅಡ್ಡತಿಡ್ಡ ಪ್ರಶ್ನೆ ಕೇಳಿ ಪೇಚಿಗೆ ಸಿಲುಕಿಸಲೆಂದು ರಾಮರಾಯನೂ ತನ್ನ ಶಿಷ್ಯರನ್ನು ಕಳುಹಿಸಿದ ಹಾಗಿತ್ತು.

ಪ್ರಶ್ನೆ ಕೇಳಲು ಮೊದಲು ಎದ್ದವನು ಗೋಪಾಲಪ್ಪ.

" ಇಂದಿನ ಕಾಂಗ್ರೆಸಿಗರು ಹಿಂದಿನ ಕಾಂಗ್ರೆಸಿಗರ ಹಾಗಿಲ್ಲವಲ್ಲ ಸದಾಸ್ಮಿತಪ್ಪನವರೆ ? "

" ಇಲ್ಲವೆ ? ಅದಕ್ಕೇನು ಮಾಡೋಕಾಗುತ್ತೆ ? ಹೇಳಿ. ಕಾಲ ಬದಲಾಗುತ್ತೆ. ಪರಿಸ್ಥಿತಿ ಬದಲಾಗುತ್ತೆ. ಹಳೆಯ ನೀರು ಹೋಗಿ ಹೊಸ ನೀರು ಬರುತ್ತೆ. "

" ಹೊಸಾ ನೀರು ಬರೀ ಹೊಲಸೇ ಆಗಿದೆಯಲ್ಲರಿ ? "

" ಹೊಲಸಾಗಿದ್ದರೆ ಅದನ್ನ ಫಿಲ್ಟರ್ ಮಾಡಿ ಶುಚಿಗೊಳಿಸೋಣ, " ಎಂದರು ಸದಾಸ್ಮಿತಪ್ಪನವರು.

" ಗಟಾರದ ನೀರನ್ನ ಎಷ್ಟು ಫಿಲ್ಟರ್ ಮಾಡಿದರೇನು ? ಹೊಲಸು ಹೋಗೋದಿಲ್ಲವಲ್ಲ ? " ಎಂದ ಗೋಪಾಲಪ್ಪ

" ಗಟಾರದಲ್ಲೇ ಉರುಳಾಡುವವರಿಗೆ ಯಾವಾಗಲೂ ಗಟಾರವೇ ಕಾಣಿಸೂದು ಸಹಜ ! " ಎಂದ ಕಲ್ಲಪ್ಪ. ಸಭೆಯಲ್ಲಿ ಮತ್ತೆ ನಗೆ ಕೇಳಬಂದಿತು ಆದರೆ ಹೆಚ್ಚು ಜನರಿಗೆ ಕಲ್ಲಪ್ಪನ ಮಾತು ಸರಿಬರಲಿಲ್ಲ. ಸದಾಸ್ಮಿತಪ್ಪನವರೂ ಮುಖ ಕಿವುಚಿದರು.

" ನೋಡಿರಿ ಸದಾಸ್ಮಿತಪ್ಪನವರೆ, ಇಂಥವರು ಹಗಲೆಲ್ಲಾ ನಮ್ಮ ಅಪಮಾನ ಮಾಡುತ್ತಿದ್ದರೆ ನಾವು ಇವರೊಡನೆ ಕೂಡಿ ಕೆಲಸ ಮಾಡುವದಾದರೂ ಹ್ಯಾಗೆ ಅಂತೀನಿ ? " ಎಂದ ಗೋಪಾಲಪ್ಪ.

ಸದಾಸ್ಮಿತಪ್ಪನವರು ಆ ಮಾತನ್ನು ನಗೆಯಲ್ಲಿ ತೇಲಿಸಿಬಿಟ್ಟು, ಸಭೆಯಲ್ಲಿ ಎದ್ದುನಿಂತಿದ್ದ ಮುದ್ದಪ್ಪನ ಕಡೆ ನೋಡಿದರು.

" ನಿಮ್ಮದೇನು ಪ್ರಶ್ನೆ. ಸ್ವಾಮಿ ? "

" ಕಾಂಗ್ರೆಸ್ಸು ಜನಸಾಮಾನ್ಯರ ಸಂಸ್ಥೆಯೋ ? ಬರಿಯ ಶ್ರೀಮಂತರ ಸಂಸ್ಥೆಯೋ ? " ಎಂದ ಮುದ್ದಪ್ಪ.

" ಶ್ರೀಮಂತರು ಬಡವರು ಎಂದೇನಿಲ್ಲ. ಸಂಸ್ಥೆಯನಿಯಮಗಳ ಪ್ರಕಾರ ಯಾರು ಸದಸ್ಯರಾಗುತ್ತಾರೋ ಅವರೆಲ್ಲರ ಸಂಸ್ಥೆ. "

"ಇಂದು ನಮ್ಮ ದೇಶದಲ್ಲಿ ನೂರಕ್ಕೆ ತೊಂಬತ್ತರಷ್ಟು ಬಡವರೇ ಇದಾರೆ. ಸಮಾಜವಾದಿ ಸಮಾಜ ರಚನೆ ಮಾಡಬೇಕಾದ ಕಾಂಗ್ರೆಸ್ಸು ಈ ಬಹುಸಂಖ್ಯಾಕ ಬಡವರನ್ನ ಎತ್ತಿ ಹಿಡಿಯಬೇಕಾಗ್ತದ. ಅಲ್ಲವೇನ್ರಿ ? "

" ಅಗತ್ಯವಾಗಿ. "

" ಹಾಗಾದರೆ, ಕಾಂಗ್ರೆಸ್ ಟಿಕೀಟಿಗೆ ಅರ್ಜಿ ಹಾಕುವವರು ಏಳು ನೂರು ರೂಪಾಯಿ ಡಿಪಾಜಿಟ್ ಇಡಬೇಕಂತ ನೇಮ ಮಾಡಿ ಬಡವರನ್ನ ದೂರವಿರಿಸಿದ್ದು ಯಾಕೆ ? "

" ಹೌದು, ಹೌದು, ಸರಿಯಾದ ಪ್ರಶ್ನೆ ...ಸರಿಯಾದ ಪ್ರಶ್ನೆ...." ಎಂದು ಎಂಟು ಹತ್ತು ಜನರು ಒಮ್ಮೆಲೆ ಕೂಗಿದರು.

ಗಾದಿಯ ಮೇಲೊರಗಿ ಕುಳಿತಿದ್ದ ಬಸೆಟ್ಟಿ–ಮಲ್ಲಿಕಪ್ಪ–ಕಲ್ಲಪ್ಪನ ಮುಖಗಳು ಕಪ್ಪಿಟ್ಟುವು. ಸದಾಸ್ಮಿತಪ್ಪನವರು ಮಾತ್ರ ಕೊಂಚವೂ ವಿಚಲಿತರಾಗದೆ ಸಹಜವಾದ ಸ್ವರದಲ್ಲಿಯೆ ಹೇಳಿದರು :

" ಚುನಾವಣೆ ಅಂದ ಮೇಲೆ ಖರ್ಚು ಬರೋದು ಸ್ವಾಭಾವಿಕ. ಪ್ರತಿಯೊಬ್ಬ ಉಮೇದುವಾರನಿಗಾಗಿಯೂ ನಾವು ಸಾವಿರಾರು ರೂಪಾಯಿ ಖರ್ಚು ಮಾಡಬೇಕಾಗುತ್ತೆ. ಜೀಪು, ಪೆಟ್ರೋಲು, ಮುಖಂಡರ ಪ್ರವಾಸ, ಪೋಸ್ಟರುಗಳು ಪತ್ರಿಕೆಗಳು ಅಂತ ಲಕ್ಷಾಂತರ ರೂಪಾಯಿ ಖರ್ಚಾಗುತ್ತೆ. ಇದನ್ನೆಲ್ಲ ಯಾರು ಕೊಡಬೇಕು ಹೇಳಿ. "

" ಚುನಾವಣೆಯ ಫಂಡು ಬೇರೆ ಕೂಡಿಸ್ತಿದೀರಲ್ಲ ? " ಎಂದ ಮುದ್ದಪ್ಪ

" ಹೌದು. ಅದೂ ಬೇಕು. ಅರ್ಜಿದಾರರಿಂದ ತೆಗೆದುಕೊಳ್ಳುವ ಏಳು ನೂರು ರೂಪಾಯಿಗಳಲ್ಲಿ ಟಿಕೀಟು ಸಿಗದಿದ್ದವರಿಗೆ ಐದು ನೂರು ಹೊರಳಿ ಕೊಡ್ತೇವೆ. ಅಂದರೆ, ಎರಡು ನೂರು ಮಾತ್ರ ಸಂಸ್ಥೆಗೆ ಕೊಟ್ಟಂತಾಗುತ್ತೆ. ಕಾಂಗ್ರೆಸಿನಂಥ ದೊಡ್ಡ ಸಂಸ್ಥೆಯ ಚುನಾವಣೆಯ ಖರ್ಚೂ ದೊಡ್ಡದೇ ಇದೆ. ಅದಕ್ಕಾಗಿ ಅಷ್ಟು ಹಣ ಅಗತ್ಯವಾಗಿದೆ. "

" ಅದೆಲ್ಲಾ ಸರಿ ಸ್ವಾಮಿೂ. ಆದರೆ, ಹೊಟ್ಟೆಬಟ್ಟೆಗಳಿಗೇ ಇಲ್ಲದಂಥ ಬಡವರು ಈ ಏಳುನೂರು ರೂಪಾಯಿ ಎಲ್ಲಿಂದ ತರಬೇಕು ? ಸ್ವಾತಂತ್ರ್ಯಕ್ಕಾಗಿ

ಉಪವಾಸ ವನವಾಸ ಮಾಡಿದ ನಮ್ಮಂಥಾ ಬಡ ಕಾಂಗ್ರೆಸಿಗರು ಈಗ ಏಳು ನೂರು ರೂಪಾಯಿ ಇಲ್ಲದ್ದರಿಂದ ಚುನಾವಣೆಯ ಆಸೆಯನ್ನೇ ಬಿಟ್ಟು, ಬ್ಲ್ಯಾಕ್ ಮಾರ್ಕೆಟ್ ವ್ಯಾಪಾರದಿಂದ ಶ್ರೀಮಂತರಾದ ಸೆಟ್ಟರಿಗೆ ಮಾತ್ರ ಎಂ. ಎಲ್. ಎ. ಎಂ. ಪಿ. ಆಗುವ ಅವಕಾಶ ಮಾಡಿ ಕೊಡಬೇಕೋ ?" ಎಂದ ಮುದ್ದಪ್ಪ.

"ಜನರನ್ನ ಸುಲಿದು, ಮೋಸಗೊಳಿಸಿ, ಅನೈತಿಕ ವ್ಯವಹಾರಗಳಿಂದ ಶ್ರೀಮಂತರಾಗಿರುವವರೇ ಅಸೆಂಬ್ಲಿ–ಪಾರ್ಲಿಮೆಂಟುಗಳಲ್ಲಿ ಪ್ರವೇಶಿಸಿದರೆ ಅಂಥವರಿಂದ ಸಮಾಜವಾದ ಹ್ಯಾಗೆ ಬಂದೀತು ? " ಎಂದ ಇನ್ನೊಬ್ಬ ಕಾರ್ಯ ಕರ್ತ.

"ವಿಚಾರ ಮಾಡಬೇಕಾದ ವಿಷಯ," ಎಂದು ಸದಾಸ್ಮಿತಪ್ಪನವರೂ ಒಪ್ಪಿಕೊಳ್ಳಬೇಕಾಯಿತು.

"ಖೊಟ್ಟಿ ಸದಸ್ಯರನ್ನ ಮಾಡಿ ಅವರ ಬೆಂಬಲದಿಂದ ಅಧಿಕಾರಸ್ಥಾನ ಗಳನ್ನೆಲ್ಲ ಹಿಡುಕೊಳ್ಳುತ್ತಿರುವ ಸ್ವಾರ್ಥಸಾಧಕರನ್ನ ಕಾಂಗ್ರೆಸಿನಿಂದ ಹೊರ ಹಾಕಬೇಕಂತ ನೀವು ಮೇಲಿಂದಮೇಲೆ ಹೇಳುತೀರಲ್ಲ ಸ್ವಾಮಿ ? ಆಡಿದಂತೆ ಮಾಡಬೇಕಾದ ಸಮಯ ಈಗ ಬಂದಿದೆ. ಟಿಕೀಟಿಗೆ ಅರ್ಜಿ ಹಾಕಿದವರು ಹೆಚ್ಚಾಗಿ ಇಂಥಾ ನೀಚರೇ ಇದಾರೆ. ಅವರಿಗೆ ತಾವು ಟಿಕೀಟು ಕೊಡಬಾರದು" ಎಂದು ನಾನು ಹೇಳಿದೆ.

"ಟಿಕೀಟು ಕೊಡೋದು ನನ್ನೊಬ್ಬನ ಕೈಯಲ್ಲಿಲ್ಲವಲ್ಲ ? ಅದಕ್ಕೊಂದು ಕಮಿಟಿ ಇದೆ. ಅದರ ಮೇಲೆ ಎ. ಐ ಸಿ. ಸಿ ಯ ಕಮಿಟಿ ಇದೆ."

"ಅದೇನೇ ಇದ್ದರೂ ವೈಯಕ್ತಿಕವಾಗಿ ನೀವಂತೂ ಇಂಥಾ ಜನರಿಗೆ ಬೆಂಬಲ ಕೊಡದಿದ್ದರೆ ಸರಿ," ಎಂದ ಮುದ್ದಪ್ಪ.

"ಆ ಬಗ್ಗೆ ಸಂಶಯ ಬೇಡ," ಎಂದು ನಗುತ್ತ ನುಡಿದರು ಸದಾಸ್ಮಿತಪ್ಪ ನವರು.

"ಎಲೆಕ್ಶನ್ ಫಂಡಿಗೆ ಐದಾರು ಸಾವಿರ ರೂಪಾಯಿ ಕೊಡುವವರಿಗೇ ಟಿಕೀಟು ಕೊಡದಿದ್ದರೆ ಹ್ಯಾಗ್ರೀ ? ನೀವೊಬ್ಬರು ಹೇಳುವವರು !" ಎಂದು ಯುವಕನೊಬ್ಬ ವ್ಯಂಗ್ಯವಾಗಿ ವಾದಿಸಿದ.

"ಸದಾಸ್ಮಿತಪ್ಪನವರು ಸದಾಕಾಲ ಇರೋದೂ ಅಂಥವರ ಸಂಗದಲ್ಲೇ, ಅವರು ಕೇಳುವದೂ ಇಂಥವರ ಸಲಹೆಯನ್ನೇ. ಹಣವಂತರಲ್ಲದವರ ಮಾತಿಗೆ

ನೀವು ಬೆಲೆ ಕೊಡುವದೇ ಇಲ್ಲಂತ ಜನ ಆಡಿಕೊಳ್ತಾರೆ. ಇದರ ಬಗ್ಗೆ ಏನು ಹೇಳ್ತೀರಿ ? " ಎಂದರೊಬ್ಬರು.

" ಪ್ರತಿಯೊಬ್ಬರಿಗೂ ಅಭಿಪ್ರಾಯ ಸ್ವಾತಂತ್ರ್ಯವಿದೆಯಲ್ಲ ? ತಮಗೆ ಅನಿಸಿದ್ದು ಅವರು ಹೇಳುತಾರೆ. ನನಗನಿಸಿದಂತೆ ನಾನು ಮಾಡುತೇನೆ. ಒಟ್ಟಾರೆ ಸಂಸ್ಥೆಯ ಕಲ್ಯಾಣವೇ ನಮ್ಮ ನಿಮ್ಮೆಲ್ಲರ ಉದ್ದೇಶ. ಅಲ್ಲವೆ ? ಚಿಕ್ಕಪುಟ್ಟ ಭಿನ್ನಾಭಿಪ್ರಾಯಗಳಿಂದ ನಮ್ಮ ನಮ್ಮಲ್ಲಿ ವೈಮನಸ್ಯ ಬೆಳೆಯಬಾರದು "

" ಕುರಿಗಳನ್ನ ಕಾಯಲು ತೋಳಗಳನ್ನ ನಿಯಮಿಸುವಂತೆ ಮಾಡಬೇಡಿ ಸ್ವಾಮಿ. ಬಡವರನ್ನ ಹರಿದು ತಿನ್ನುವ ಸಾಹುಕಾರರಿಗೆ ಟಿಕೀಟು ಕೊಡಬೇಡಿ." ಎಂದ ಮುದ್ದಪ್ಪ.

" ಟಿಕೀಟು ಕೊಡುವ ಮೊದಲು ಪ್ರತಿಯೊಬ್ಬ ಅರ್ಜಿದಾರರ ಪೂರ್ವೇತಿಹಾಸ, ಸಾರ್ವಜನಿಕ ಸೇವೆ, ಸಂಸ್ಥೆಗಾಗಿ ಮಾಡಿದ ಕಾರ್ಯ, ಜನಪ್ರಿಯತೆ ಇವನ್ನೆಲ್ಲಾ ಗಮನಿಸಲಾಗುತ್ತೆ. ಯಾರೂ ಯಾವ ಸಂಶಯವನ್ನೂ ಇಟ್ಟುಕೊಳ್ಳಬಾರದು ", ಎಂದ ಕಲ್ಲಪ್ಪ. "ಈಗ ವೇಳೆಯಾಯ್ತು. ನಮ್ಮ ಮಾನ್ಯ ಮುಂದಾಳುಗಳು ಮುಂದಕ್ಕೆ ಪ್ರಯಾಣ ಬೆಳೆಸಬೇಕು. ಸಭೆಯನ್ನ ಇಲ್ಲಿಗೇ ಮುಗಿಸಿಬಿಡೋಣ," ಎಂದು ಹೇಳಿದವನೆ ಆತ ಹೂಹಾರ ಹಾಕಿ ವಂದನಾರ್ಪಣೆಗಾರಂಭಿಸಿಬಿಟ್ಟ, ಇನ್ನೂ ಕೆಲವು ಪ್ರಶ್ನೆ ಕೇಳಬೇಕೆಂದು ಕಾದಿದ್ದವರೆಲ್ಲ ಉಪಾಯವಿಲ್ಲದೆ ತೆಪ್ಪಗಾದರು.

ಕೈಯೆತ್ತಿ ಸಭಿಕರನ್ನು ವಂದಿಸುತ್ತ ಸದಾಸ್ಮಿತಪ್ಪನವರು ಹೊರಟುಬಿಟ್ಟರು. ಮಹಿಳೆಯರ ಸ್ಥಳದ ಹತ್ತಿರ ಅವರು ಹಾದುಹೋಗುತ್ತಿದ್ದಂತೆ ಬಸೆಟ್ಟಿ ಸದಾಸ್ಮಿತಪ್ಪನವರನ್ನು ತಡೆದು, ಮೂವತ್ತರ ಪ್ರಾಯದ ಸಿಲ್ಕ್ ಸೀರೆಯ ಸುಂದರಿಯೊಬ್ಬಳನ್ನು ಪರಿಚಯ ಮಾಡಿಕೊಟ್ಟ : "ನನ್ನ ಸೌಭಾಗ್ಯವತಿ. ಅವರೂ ಅರ್ಜಿ ಹಾಕಿದಾರ. "

ಸದಾಸ್ಮಿತಪ್ಪನವರು ನಕ್ಕರಷ್ಟೇ. ಮಾತನಾಡಲಿಲ್ಲ. ಮೆರವಣಿಗೆ ಮುಂದೆ ನಡೆಯಿತು.

# ೧೦

ಸದಾಶ್ಶಿವತಪ್ಪನವರ ಜೊತೆಗೆ ಹೋಗುತ್ತಿದ್ದಂತೆ ಬಸೆಟ್ಟಿ ದೃಷ್ಟಿ ಹೊರಳಿಸಿ ನನ್ನನ್ನೊಮ್ಮೆ ನೋಡಿದಂತೆ ಭಾಸವಾಯಿತು. ಆದರೆ ಆ ನೋಟದಿಂದ ಅವನ ಮನಸಿನಲ್ಲಿನ ವಿಚಾರವಾವುದೂ ಸ್ಪಷ್ಟವಾಗಲಿಲ್ಲ. ಅವನ ಸ್ವಭಾವವನ್ನು ಚೆನ್ನಾಗಿ ಅರಿತಿದ್ದ ನನಗೆ ಅದರಿಂದ ಆಶ್ಚರ್ಯವೂ ಆಗಲಿಲ್ಲ. ಎಷ್ಟೇ ಕೋಪವಿದ್ದರೂ ಅದನ್ನು ಒಳಗೇ ನುಂಗಿಕೊಂಡು, ತೋರಿಕೆಗೆ ಶಾಂತವಾಗಿಯೆ ಇದ್ದು. ಪ್ರಸಂಗ ಬಂದಾಗ ಸೇಡು ತೀರಿಸಿಕೊಳ್ಳುವ ಧೂರ್ತರ ಸಾಲಿಗೆ ಸೇರಿದವನು ಬಸೆಟ್ಟಿ

ಸಭೆಗೆ ಸೇರಿದ ಜನರೆಲ್ಲ ಹೊರಟುಹೋಗಿ ಗದ್ದಲ ಮುಗಿಯುವ ವರೆಗೂ ನಾವು ಕೆಲವರು ಅಂಗಳದಲ್ಲಿಯೆ ನಿಂತಿದ್ದೆವು. ಕೊನೆಯದಾಗಿ ಬಸೆಟ್ಟಿಯು ಎರಡನೆಯ ಹೆಂಡತಿ ಪ್ರಭಾವತಿ ಇನ್ನೊಬ್ಬ ಮಹಿಳೆಯೊಡನೆ ನಿಧಾನವಾಗಿ ಬಂದಳು. ಒಳಗಿನ ಹಾಲಿನಲ್ಲಿ ವಿದ್ಯುದ್ದೀಪದ ಪ್ರಖರ ಪ್ರಕಾಶದಲ್ಲಿ ಸುಂದರಿಯಾಗಿ ಕಂಡ ಪ್ರಭಾವತಿ ಈಗ ಹೊರಗಿನ ಬೆಳಕಿನಲ್ಲಿ ಎಲ್ಲರಂತೆ ಸಾಧಾರಣ ಸ್ತ್ರೀಯಾಗಿಯೆ ಕಾಣಿಸಿದಳು.

"ಈಕೆಯನ್ನೊಮ್ಮೆ ಭೆಟ್ಟಿಯಾಗಿ ಇಂಟರ್‌ವ್ಯೂ ತೆಗೆದುಕೊಳ್ಳಲು ಆದೀತೇ ?" ನಾನು ಮೆಲ್ಲಗಿನ ಧ್ವನಿಯಲ್ಲಿ ಕಾಗವಾಡನನ್ನು ಕೇಳಿದೆ.

"ಪ್ರಯತ್ನಮಾಡಿ ನೋಡೋಣ," ಎಂದು ನಗುತ್ತ ಉತ್ತರವಿತ್ತ ಕಾಗವಾಡ.

ರುದ್ರಗೌಡನೂ ನಮ್ಮ ಜೊತೆಯಲ್ಲಿಯೆ ಇದ್ದವನು ಎಲ್ಲರನ್ನೂ ಹೋಟಲಿಗೆ ಕರೆದೊಯ್ದು. ಟೋಸ್ಟು, ಕಾಫಿ ಮುಗಿಸಿ ಮಾತನಾಡುತ್ತ ಕುಳಿತೆವು.

"ನಮ್ಮ ಪ್ರಶ್ನೆಗಳಿಗೆ ಸದಾಸ್ಮಿತಪ್ಪನವರಿಂದ ಸರಿಯಾದ ಉತ್ತರವೇ ಬರಲಿಲ್ಲ ", ಎಂದ ಮುದ್ದಪ್ಪ.

" ಅವರು ಕೊಡುವ ಉತ್ತರಗಳೇ ಹಾಗೆ. ರಾಜಕಾರಣಿಯ ಉತ್ತರಗಳು ಎಲ್ಲಾ ಮೋಘಂ. ಅರ್ಧಂಬರ್ಧ. "

" ಕಲ್ಲಪ್ಪ ಬೇರೆ ಅವಸರದಿಂದ ಸಭೆ ಮುಗಿಸಿಬಿಟ್ಟ. "

" ಅದೂ ಒಂದು ತಂತ್ರ–ರಾಜಕಾರಣಿಗಳದು. ಅಪ್ರಿಯ ಪ್ರಶ್ನೆಗಳನ್ನೆದುರಿಸಬೇಕಾಗಿ ಬಂದಾಗಲೆಲ್ಲಾ ಉಪಾಯದಿಂದ ತಪ್ಪಿಸಿಕೊಂಡು ಹೋಗಿಬಿಡ್ತಾರೆ."

" ಏನ್ರಿ ಗೌಡರೆ, ನಿಮ್ಮ ಕ್ಷೇತ್ರದಿಂದ ಮತ್ತೂ ಯಾರ್ಯಾರು ಹಾಕಿದಾರೆ ಅರ್ಜಿ ? " ಎಂದ ಕಾಗವಾಡ.

" ಮಂಗಾಪುರದ ಸೋಮಪ್ಪಸೆಟ್ಟಿ, ಜಮೀನ್ದಾರ್ ಗೂಳಪ್ಪ ಸೆಟ್ಟಿ. ವ್ಯಾಪಾರಿ ಮಲ್ಲಾಪುರ, ಮತ್ತೂ ಕೆಲವರು ಹಾಕಿದಾರಂತೆ. ಲಿಸ್ಟು ಹೊರ ಬಿದ್ದಾಗಲೇ ಗೊತ್ತಾಗಬೇಕು. "

" ಬಸೆಟ್ಟಿ ? "

" ಎಲ್ಲರಿಗಿಂತ ಮೊದಲು ಅವನೇ ಹಾಕಿದ್ದು. "

" ನಿಮ್ಮ ತಾಲೂಕಿಗೆ ಬಸೆಟ್ಟಿ. ಅವನ ಶ್ರೀಮತಿಯೊ ? "

" ಕ್ಯಾತನೂರು ನಗರಕ್ಕೆ ಹಾಕಿರಬೇಕು. "

" ಈ ನಗರದಿಂದ ಯಾರ್ಯಾರು ಹಾಕಿದಾರೆ ಗೊತ್ತಿದೆಯೊ ? "

" ಪ್ರೆಸಿಡೆಂಟ್ ಮಲಿಕಪ್ಪನೇ ಹಾಕಿರಬೇಕು. ಮಾಲಾದೇವಿಯೂ ನಗರದಿಂದಲೇ ಹಾಕಿದಾರಂತ ಹೇಳುತ್ತಿದ್ದರು. "

" ಕಲ್ಲಪ್ಪ ? "

" ಅವನದಂತೂ ಕಾಯಂ ಕ್ಷೇತ್ರ ಇದ್ವೇ ಇದೆಯಲ್ಲ — ಬಸರಾಳು ತಾಲೂಕು. ಆದರೆ ಈ ಸಲ ಅಲ್ಲೂ ಆರೇಳು ಮಂದಿ ಸ್ಪರ್ಧಿಗಳಿದಾರಂತೆ. "

" ತಾರಾ ಪಾಟೀಲ ? "

" ಅವಳೂ ತನ್ನ ಜಾಗಾಬಿಡಲು ತಯಾರಿಲ್ಲ. ಟಿಕೀಟು ಕೊಡಿಸಲು ಹ್ಯಾಗೂ ಕಲ್ಲಪ್ಪ ಇದ್ದೇಇದಾನಲ್ಲ? ಸದಾಸ್ಮಿತಪ್ಪನವರಂತೂಅವನ ಕಿಸೆಯಲ್ಲೇ."

" ಹೌದೇನು ? ಅಷ್ಟು ಪ್ರಭಾವ ಅಂತೀರಾ ಅವನದು ? "

" ಸದಾಸ್ಮಿತಪ್ಪನವರಿಗೆ ಈ ಭಾಗದಲ್ಲಿ ಹೆಸರು ಬರಲು ಕಾರಣನಾದವನೇ ಕಲ್ಲಪ್ಪನಲ್ಲವೆ ? ಅಂತೇ ಅವರು ಇವ ಹೇಳಿದ್ದೆಲ್ಲಾ ಕೇಳಬೇಕಾಗುತ್ತೆ. "

" ಕಲ್ಲಪ್ಪನ ಗುಂಪಿನವರಿಗೆಲ್ಲಾ ಟಿಕೇಟು ಸಿಗಬಹುದು ಹಾಗಾದರೆ ? "

" ಏನಾಗ್ತದೋ ನೋಡಬೇಕು. ಸದಾಸ್ಮಿತಪ್ಪನವರು ಪಕ್ಷಪಾತ ಮಾಡುವವರಲ್ಲ ಅಂತಲೂ ಹೇಳ್ತಾರ. "

ಹೀಗೆ ಬಹಳ ಹೊತ್ತು ಮಾತು ನಡೆದು ಎಲ್ಲರೂ ಹೊರಟುಹೋದ ತರುವಾಯ ರುದ್ರಗೌಡ ನನ್ನನ್ನು ತನ್ನ ಬಿಡಾರಕ್ಕೆ ಕರೆದೊಯ್ದ. ಅಲ್ಲಿಯೇ ಊಟವೂ ಆಯಿತು.

" ಇವತ್ತು ನೀವು ಔಷಧ ಮುಟ್ಟಿದಂತೆ ಕಾಣೂದಿಲ್ಲ ? " ಎಂದ ರುದ್ರ ಗೌಡ.

" ಇವತ್ತಷ್ಟೇ ಅಲ್ರೀ ಗೌಡರೆ. ಎರಡು ದಿನದಿಂದ ಮುಟ್ಟಿಲ್ಲ. "

ರುದ್ರಗೌಡನಿಗೆ ತುಂಬಾ ಸಮಾಧಾನವೆನಿಸಿತು.

" ಬಿಟ್ಟ ಹಾಗೇ ಆತು ಅನ್ರಿ. "

" ಬಿಟ್ಟಂತೆಯೇ ಎರಡು ಮೂರು ದಿನದಿಂದ ಅದರ ನೆನಪೂ ಆಗಿಲ್ಲ ನೋಡಿರಿ. "

" ಯಾವಾಗಲೂ ಏನಾದರೊಂದು ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದರೆ ಇಂಥಾ ಚಟಗಳ ನೆನಪೇ ಇರೂದಿಲ್ಲ. ಇಲ್ಲಿ ಏನೇನಾಯ್ತು ನಿಮ್ಮ ಕೆಲಸ?"

" ಬಸೆಟ್ಟಿಯನ್ನು ಮಣ್ಣುಗೂಡಿಸುವಷ್ಟು ಸಾಹಿತ್ಯ ತಯಾರಾಗಿದೆ ಆದರೆ ದುರ್ದೈವದಿಂದ ಹಕ್ಕಿಯೊಂದನ್ನು ಹಾರಿಸಿಬಿಟ್ಟರು. "

" ಹಕ್ಕಿ ? "

" ಕಾಮಾಕ್ಷಿ. ನಾನು ಅವಳನ್ನ ಭೆಟ್ಟಿಯಾದದ್ದು ಗೊತ್ತಾದ ಕೂಡಲೇ ಈ ಊರಿನಿಂದಲೇ ಮಾಯುಮಾಡಿ ಬಿಟ್ಟರು. "

" ಪಾಪ....ಪಾಪ....ಅವಳ ಜೀವಕ್ಕೇನಾದರೂ ಮಾಡಿರಲಿಕ್ಕಿಲ್ಲವಷ್ಟೆ ಆ ದುಷ್ಟರು ?"

" ನನಗೂ ಅದೇ ಭಯ. ಬಸೆಟ್ಟಿಯ ಎಲ್ಲಾ ಗುಟ್ಟುಗಳನ್ನೂ ಕಾಮಾಕ್ಷಿ ಬಲ್ಲಳು. ಬಸೆಟ್ಟಿಯ ವಿರುದ್ಧ ಸಾಕ್ಷಿ ಹೇಳಲು ನಾವು ಅವಳನ್ನ ಉಪಯೋ

ಗಿಸಬಹುದಂತ ಅಂಜಿಕೊಂಡೇ ಅವರು ಅವಳನ್ನ ಓಡಿಸಿಬಿಟ್ಟಾರ. ಆದರೂ ಒಂದೇ ರಾತ್ರಿಯಲ್ಲಿ ಅನೇಕ ವಿಷಯ ಗೊತ್ತಾಯ್ತು ನನಗೆ. "

" ಸರಿ ಈಗ ಏನು ನಡಸೀರಿ ? "

" ಮೊದಲನೆಯ ಹೆಂಡತಿಯನ್ನಂತೂ ನೋಡಿದ್ದಾಯ್ತು. ಇನ್ನು ಎರಡನೆಯ ಹೆಂಡತಿಯನ್ನಷ್ಟು ನೋಡಿ ಮಾತಾಡಿಸಬೇಕಂತ ವಿಚಾರ ಮಾಡೀನಿ "

" ಹಾವಿನ ಹುತ್ತಕ್ಕೇ ಕೈ ಹಾಕುವ ಸಾಹಸ ನಿಮ್ಮದು ! "

" ಅದೆಂಥಾ ಹಾವು ಬಿಡಿರೀ! ಕಾಲಿನಿಂದ ಒರೆಸಿದರೆ ಸಟೆದು ಹೋದೀತು!"

" ಹೆಂಗಸರ ಗೊಡವೆಗೆ ಹೋಗುವದು ನನಗಂತೂ ಸರಿಬರುವದಿಲ್ಲ. "

" ನಮ್ಮ ಕಾರ್ಯ ಸಾಧಿಸಬೇಕಾದರೆ ಏನಾದರೂ ಮಾಡಲೇಬೇಕಲ್ಲ ? ಅದಕ್ಕೇ ಸಾಧ್ಯವಾದರೆ ಸೆಟ್ಟಿಯ ಅಂತಃಪುರವನ್ನೇ ಒಡೆಯುವದು..."

" ಅವನ ಅಂತಃಪುರ ಒಡೀಲಿಕ್ಕೆ ಹೋಗಿ ನಿಮ್ಮ ತಲೆ ಒಡಿಸಿಕೊಂಡೀರಿ. ಜೋಕೆ ! " ಎಂದ ರುದ್ರಗೌಡ.

ನನಗೂ ಒಳಗೊಳಗೆ ಆ ಭಯ ಇದ್ದೇ ಇತ್ತು. ನನ್ನ ಪ್ರತಿಯೊಂದು ಚಟುವಟಿಕೆಯನ್ನೂ ಸೋಮಯ್ಯನ ಸಿ. ಐ. ಡಿ. ಗಳು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನಿರೀಕ್ಷಿಸುತ್ತಿರಲು ಸಾಕು. ಇಷ್ಟು ದಿನ ಆತ ಸುಮ್ಮನಿದ್ದುದೇ ದೊಡ್ಡ ವಿಷಯ. ಇನ್ನು ನಾನು ಪ್ರಭಾವತಿಯ ಸುತ್ತಮುತ್ತ ಸುಳಿದಾಡಿದರೆ ಜೇನುಗೂಡಿಗೇ ಕೈ ಹಾಕಿದಂತಾಗುವುದು ಖಂಡಿತ.

" ನನ್ನದೊಂದು ಮಾತು ಕೇಳ್ತೀರೇನು ? " ಎಂದ ರುದ್ರಗೌಡ. " ನೀವು ಕೆಲವು ದಿವಸ ಈ ಊರನ್ನೇ ಬಿಟ್ಟುಬಿಟ್ಟು ನನ್ನ ಸಂಗಡ ತಿರುಗಾಡಬೇಕು. ನನಗೂ ಕಾರ್ಯಕರ್ತರ ಕೊರತೆಯಿದೆ, ನಿಮ್ಮಂಥಾ ತರುಣರ ಸಹಾಯ ಅಗತ್ಯವಾಗಿ ಬೇಕು. "

" ಶಿವಣ್ಣನ್ನ ಕೇಳಬಹುದಲ್ಲ ? "

" ಅವರು ಬರುವರೊ ಇಲ್ಲವೊ. ಯಾಕಂದರೆ ಈ ದರ್ಷ ಅವರ ಪರೀಕ್ಷೆ ಬೇರೆ ಅದ ಅಲ್ಲ ? ಯಾವ ಉಪದ್ವ್ಯಾಪವೂ ಇಲ್ಲದ ನಿಮ್ಮಂಥ ಸ್ವತಂತ್ರ ಮಂದಿ ಬೇಕಾಗ್ತಾರ ಇಲೆಕ್ಶನ್ ಕೆಲಸಕ್ಕ. "

" ಇನ್ನೂ ಏಳು ತಿಂಗಳು ಅದ ಅಲ್ಲ ಗೌಡರೆ ಇಲೆಕ್ಶನ್ನು ? "

"ಏಳು ತಿಂಗಳ್ಯಾಕೆ, ಹತ್ತುಹನ್ನೆರಡು ತಿಂಗಳಾದರೂ ಸಾಕಾಗುವುದಿಲ್ಲ ಇಲೆಕ್ಶನ್ ತಯಾರಿಗೆ. ಐವತ್ತು ಸಾವಿರಕ್ಕಿಂತಾ ಹೆಚ್ಚು ಮತದಾರರು—ಅರವತ್ತು ಎಪ್ಪತ್ತು ಹಳ್ಳಿಗಳು. ಪ್ರತಿಯೊಂದು ಹಳ್ಳಿಗೂ ಭೆಟ್ಟಿ ಕೊಡಲಿಕ್ಕೆ ಬೇಕು. ಹಳ್ಳಿಗಳಲ್ಲಿ ಎಲ್ಲಾ ಮತದಾರರನ್ನ ಭೆಟ್ಟಿಯಾಗಲಿಕ್ಕಾಗದಿದ್ದರೂ ಮುಖ್ಯ ಮುಖ್ಯ ಜನರನ್ನಾದರೂ ಭೆಟ್ಟಿಯಾಗಲಿಕ್ಕೆ ಬೇಕು. ಅವರ ಕಷ್ಟಸುಖ ತಿಳಕೋಬೇಕು. ಪ್ರತಿಯೊಂದು ಹಳ್ಳಿಗೆ ಆಗಬೇಕಾದ ಕೆಲಸಗಳ ಯಾದಿ ತಯಾರಿಸಬೇಕು. ಹೀಗೇ ಅನೇಕ ಕೆಲಸ ಅವ. ಅಲ್ಲದೆ ಇದೇ ತಿಂಗಳು ಇಪ್ಪತ್ತಕ್ಕೆ ಬೆಂಗಳೂರಿಗೆ ಬೇರೆ ಹೋಗಿಬರಬೇಕು. ನನ್ನ ಸಂಗಡ ನೀವೂ ಬಂದರೆ ಚಲೋದು."

"ನನ್ನದೇನ್ರೀ ಕೆಲಸ ಬೆಂಗಳೂರಲ್ಲಿ ?"

"ಅಲ್ಲಿ ಕೆಲವರಾದರೂ ಲೀಡರುಗಳನ್ನ ಭೆಟ್ಟಿಯಾಗಿ ಮಾತಾಡಬೇಕಾಗ್ತದ. ನನ್ನ ಪರವಾಗಿ ಮಾತಾಡಲು ಎಂಟುಹತ್ತು ಜನರಾದರೂ ಬೆಂಗಳೂರಿಗೆ ಹೋದರೊಳ್ಳೆಯದು."

"ಹೀಗೆ ಅರ್ಜಿ ಹಾಕಿದವರೆಲ್ಲಾ ಬೆಂಗಳೂರಿಗೆ ಜನರನ್ನ ಒಯ್ಯುತಾರೋ ಏನೋ ?"

"ಒಯ್ಯಲೇಬೇಕಲ್ಲ ? ಈಗಾಗಲೇ ನೂರಾರು ಮಂದಿ ಹೋಗಿ ಬಂದರಂತೆ. ಬೆಂಗಳೂರಿನಲ್ಲೆಲ್ಲ ಬರೀ ಅವರದೇ ಗದ್ದಲವಂತೆ."

"ಅಂತೂ ಬಹಳ ಹಣ ಹಾಳಾಗ್ತದ ಅನ್ನಿರಿ."

"ಎಲೆಕ್ಶನ್ ಅಂದಮೇಲೆ ಹಣ ಹಾಳಾಗತಕ್ಕದ್ದೇ. ಅದಕ್ಕೇನು ಯೋಚನೆ ಮಾಡಬಾರದು," ಎಂದ ರುದ್ರಗೌಡ.

ಇಪ್ಪತ್ತನೆಯ ತಾರೀಖು ಎಂದರೆ ಇನ್ನು ಐದಾರುದಿನ ಉಳಿದಿತ್ತು. ನಾನೂ ಬೆಂಗಳೂರು ನೋಡಿರಲಿಲ್ಲ. ನೋಡಬೇಕೆಂಬ ಇಚ್ಛೆಯೂ ಇತ್ತು. ಸರಿ. ಯಾರದೋ ದುಡ್ಡಿನಲ್ಲಿ ಪುಕ್ಕಟೆಯಾಗಿ ಬೆಂಗಳೂರು ಯಾತ್ರೆಯಾಗುವಂತಿದ್ದರೆ ನಾನಾದರೂ ಯಾಕೆ ಬಿಡಬೇಕು ?

ಅಂದು ರಾತ್ರಿ ಈ ವಿಷಯವನ್ನು ರಾಧೆಗೆ ತಿಳಿಸುತ್ತಲೂ ತಾನೂ ಬೆಂಗಳೂರಿಗೆ ಬರುವುದಾಗಿ ಅವಳು ಹಟ ಹಿಡಿದಳು.

"ನೀವೊಬ್ಬರೇ ನೋಡುವವರೇನು ? ನನ್ನನ್ನೂ ಕರಕೊಂಡು ಹೋಗಿ ರಲ್ಲ ? "

"ಈಗ ನನ್ನನ್ನೇ ಇನ್ನೊಬ್ಬರು ಕರಕೊಂಡು ಹೋಗುವವರು. ನಾವು ಹೋಗುವದು ಇಲೆಕ್ಶನ್ ಕೆಲಸಕ್ಕೆ. ಕಾಂಗ್ರೆಸ್ ಆಫೀಸು, ಲೀಡರುಗಳ ಮನೆ ಅಂತ ಎಷ್ಟೋ ಕಡೆ ನಾವು ತಿರುಗಬೇಕಾಗ್ತದ. ಅಂಥಲ್ಲೆಲ್ಲಾ ನಿನ್ನನ್ನ ಕಟ್ಟಿ ಕೊಂಡು ಹೋಗಲಿಕ್ಕಾಗ್ತದೇನು ? ಅಲ್ಲದೆ ಖರ್ಚಿನ ವಿಷಯ ಬೇರೆಯೆ."

"ಖರ್ಚಿನ ಚಿಂತೆ ನಿಮಗ್ಯಾಕೆ ? ನನ್ನ ಹತ್ತರ ಸ್ವಲ್ಪ ಹಣ ಅದ. ನನ್ನದು ನಾ ನೋಡಿಕೊಂತೀನಿ."

"ಈ ಸಲ ಬೇಡ ರಾಧಾ. ಇಲೆಕ್ಶನ್ ಗದ್ದಲ ಮುಗಿದ ಮೇಲೆ ಒಮ್ಮೆ ನಾವಿಬ್ಬರೇ ಹೋಗೋಣವಂತೆ. ಬೆಂಗಳೂರು ಮೈಸೂರು ಮದರಾಸು ಎಲ್ಲಾ ನೋಡಿಕೊಂಡು ಬರೋಣವಂತೆ.... " ಎಂದು ಭರವಸೆಯಿತ್ತು ಅಂದಿನ ಮಟ್ಟಿ ಗಾದರೂ ಅವಳನ್ನು ಸಮಾಧಾನಪಡಿಸಿದೆ.

೧೯ನೆಯ ತಾರೀಖು ಶನಿವಾರ ಹೊರಡುವುದೆಂದು ನಿಶ್ಚಿತವಾಗಿತ್ತು. ಅಂದು ಮಿರಜ-ಬೆಂಗಳೂರು ಪ್ಯಾಸೆಂಜರಿನಲ್ಲಿ ಬರಿಯ ಬಿಳಿಯ ಟೋಪಿಗಳೇ ಕಾಣುತ್ತಿದ್ದುವು. ಮಲಗುವ ಡಬ್ಬಿಯಲ್ಲಂತೂ ಕಾಲಿಡಲೂ ಸ್ಥಳವಿರಲಿಲ್ಲ. ಅಂಥ ದರಲ್ಲೂ ಹೇಗೋ ಒಳನುಗ್ಗಿ ಸ್ಥಳ ಹಿಡಿದುಕೊಂಡೆವು. ನಾನು, ರುದ್ರಗೌಡ. ಅವನ ಸಂಗಡಿಗ ಶಿವಲಿಂಗ. ಕೈಯಲ್ಲೊಂದು ಚೀಲ ಹಿಡಿದುಕೊಂಡು ಮುದ್ದ ಪ್ಪನೂ ನಮ್ಮ ಜೊತೆಗೇ ಗಾಡಿ ಏರಿದ.

ನಾಲ್ವರೂ ಒಂದೇ ಕಡೆ ಕುಳಿತುಕೊಂಡೆವು.

" ಅಂತೂ ಅರ್ಜಿ ಕೊಡೋದು ನಿಶ್ಚಯ ಮಾಡಿದಿರಿ ಹಾಗಾದರೆ ? " ಎಂದು ಮುದ್ದಪ್ಪನನ್ನು ಕೇಳಿದೆ.

"ಅದಕ್ಕೇ ಹೊರಟೇನಿ ಬೆಂಗಳೂರಿಗೆ. "

"ಜಿಲ್ಲಾ ಕಾಂಗ್ರೆಸ್ ಕಮೀಟಿಯಲ್ಲೇ ಕೊಡಬಹುದಾಗಿತ್ತಲ್ಲ ? "

"ಕೊಡಬಹುದಿತ್ತು. ಆದರೆ ಅವರನ್ನ ನಂಬುವದು ಹ್ಯಾಗೆ ? ಅರ್ಜಿ ಹರಿದೊಗೆದು, ಎಲ್ಲೋ ಕಳೆದುಹೋಯ್ತು ಅಂದುಬಿಟ್ಟರೆ ಅವರನ್ನ ಕೇಳುವವ ರ‍್ಯಾರು ? ನಾನು ಬಹಳ ಕಷ್ಟಬಟ್ಟು ಕೂಡಿಸಿದ ಏಳುನೂರು ರೂಪಾಯಿ

ಯನ್ನೂ ತಿಂದುಬಿಡುವ ಹೇಸಿ ಜನ ಇದು. ಅದಕ್ಕೇ ಮತ್ತೊಂದು ಐವತ್ತು ಖರ್ಚಾದರೂ ಚಿಂತೆಯಿಲ್ಲಂತ ಬೆಂಗಳೂರಿಗೇ ಹೊರಟೇನಿ."

"ಐವತ್ತು ಯಾತಕ್ಕಾಗಬೇಕು ಮುದ್ದಣ್ಣ ? ಬರೀ ಗಾಡಿಯ ಖರ್ಚಿಗೇ ಮೂವತ್ತು ಹೋಗತಾವಲ್ಲ ? ಬೆಂಗಳೂರಿನಲ್ಲಿ ಹೋಟೇಲು ರೂಮು, ಊಟ ತಿಂಡಿ ಅಂತ ಮೇಲೆ ನಲವತ್ತು ರೂಪಾಯಿಯಾದರೂ ಬೇಕಾಗತಾವ."

"ಕಡಿಮೆ ಬಿದ್ದರೆ ಇದ್ದೀರಲ್ಲ ನಿಮ್ಮಂಥಾ ಮಿತ್ರರು. ಆ ಧೈರ್ಯದ ಮೇಲೇ ಹೊರಟೇನಿ ಆಯ್ತು."

ರುದ್ರಗೌಡನ ಸಂಗಡ ಬಂದಿದ್ದ ಶಿವಲಿಂಗ ಮೂವತ್ತರ ಯುವಕ. ಖಾದಿಯ ನೆಹರು ಶರ್ಟು. ಖಾದಿಯ ಧೋತರ. ತಲೆಯ ಮೇಲೆ ದಟ್ಟವಾದ ಕೂದಲು; ಆದರ ಮೇಲೆ ಅರ್ಧಾತ್ ಬಿಳಿಯ ಟೋಪಿ. ಬೆರಳಿನ ಗಾತ್ರದ ಮೀಸೆ ಬಿಟ್ಟು ಆಗಾಗ ಅದರ ತುದಿಗಳನ್ನು ಹುರಿಗೊಳಿಸುತ್ತಿದ್ದ. ಅವನ ದೇಹ ಜಟ್ಟಿಗಳಂತೆ ಭವ್ಯವಾಗಿದ್ದುದರಿಂದ ಹತ್ತು ಜನರ ಗುಂಪಿನಲ್ಲಿ ಧಟ್ಟನೆ ಎದ್ದು ಕಾಣಿಸುವಂತಿದ್ದ.

"ಇವರೇನು ನಿಮ್ಮ ಬಾಡಿ ಗಾರ್ಡ್ ಇದ್ದಂತೆ ಕಾಣತಾರಲ್ಲರೀ ಗೌಡರೆ?" ಎಂದು ನಾನು ಕೇಳುತ್ತಲೂ ರುದ್ರಗೌಡ ನಗುನಗುತ್ತ ಉತ್ತರವಿತ್ತ :

"ಶಿವಲಿಂಗ ಅಂಥಾ ಬಂಟನೇ ಇದಾನೆ. ಜೀವಕ್ಕೆ ಜೀವಾ ಕೊಡುವಂಥ ಗೆಳೆಯ. ಇಂದಿನ ಕಾಲಕ್ಕೆ ಇಂಥಾ ನಂಬಿಕೆಯುವರು ಅಪರೂಪ."

ಶಿವಲಿಂಗನೂ ಕೆಲವು ವರ್ಷಗಳಿಂದ ಕಾಂಗ್ರೆಸ್ ಸದಸ್ಯನಾಗಿದ್ದುಕೊಂಡು ರುದ್ರಗೌಡನ ಚಟುವಟಿಕೆಗಳಲ್ಲಿ ನೆರವಾಗುತ್ತ ಬಂದಿದ್ದನೆಂದು ಗೊತ್ತಾಯಿತು. ರುದ್ರಗೌಡನಂತೆ ಅವನೂ ರೈತನೇ. ಏಳೆಂಟು ಎಕರೆ ಹೊಲವಿದ್ದಿತಂತೆ. ಅದನ್ನು ನೋಡಿಕೊಳ್ಳುವ ತಾಪತ್ರಯವೂ ಇವನಿಗಿರಲಿಲ್ಲ, ಶಿವಲಿಂಗನ ಮಾವ ಅವನ ಮನೆಯಲ್ಲಿಯೇ ಇದ್ದು ಹೊಲಮನೆಗಳ ಹೊಣೆಗಾರಿಕೆ ವಹಿಸಿಕೊಂಡಿದ್ದನಂತೆ. ಶಿವಲಿಂಗನಾದರೋ ಮೂರು ಹೊತ್ತು ಊಟ ಮಾಡಿ ಯಾವಾಗಲೂ ರುದ್ರ ಗೌಡನ ಜೊತೆಗೇ ಇರುತ್ತಿದ್ದನಂತೆ. ಅವನ ಬಗೆಗೆ ಆಗ ತಿಳಿದುಬಂದದ್ದು ಅಷ್ಟೇ. ಪ್ರವಾಸ ಮುಂದುವರಿದಹಾಗೆಲ್ಲ ಶಿವಲಿಂಗನ ಹಾಗೂ ರುದ್ರಗೌಡನ ವ್ಯಕ್ತಿತ್ವದ ಹಲವಾರು ವಿಶೇಷಗಳು ಒಂದೊಂದಾಗಿ ತಿಳಿಯತೊಡಗಿದುವು.

ಒಂದು ದಿನಪತ್ರಿಕೆಯನ್ನೂ ಒಂದು ವಾರಪತ್ರಿಕೆಯನ್ನೂ ಕೊಂಡು ಕೊಂಡು ನಾನು ಓದುತ್ತ ಕುಳಿತಿದ್ದೆ. ರುದ್ರಗೌಡ–ಶಿವಲಿಂಗ–ಮುದ್ದಪ್ಪ ಮೂವರೂ ಒಂದೆಸವನೆ ಹರಟುತ್ತಲೇ ಇದ್ದರು. ಎಷ್ಟು ಹರಟಿದರೂ ಅವರಿಗೆ ಬೇಸರವೆಂಬುದಿರಲಿಲ್ಲ. ಪತ್ರಿಕೆ ಬೆಂಚಿನ ಮೇಲೆ ಬಿದ್ದುಕೊಂಡಿದ್ದರೂ ಅದನ್ನೆತ್ತಿ ಕೊಂಡು ಓದುವ ಮನಸ್ಸು ಅವರಲ್ಲೊಬ್ಬನಿಗೂ ಇರಲಿಲ್ಲ. ರಾತ್ರೆಯಾಯಿತು; ಊರಿನಿಂದ ಕಟ್ಟಿತಂದಿದ್ದ ಬುತ್ತಿ ಬಿಚ್ಚಿದ ರುದ್ರಗೌಡ. ಮುದ್ದಪ್ಪನೂ ತನ್ನ ರೊಟ್ಟಿಯ ಗಂಟು ಹೊರದೆಗೆದ. ರೊಟ್ಟಿ, ಬದನೆಕಾಯಿ ಎಣ್ಣೆಗಾಯಿ, ಉಸುಳಿ ಪಲ್ಯ. ಚಟ್ನಿ–ಊಟ ರುಚಿಕರವಾಗಿತ್ತು. ಹೊಟ್ಟೆ ತುಂಬಿದೊಡನೆ ನನಗೆ ಆಕ ಳಿಕೆ ಬರತೊಡಗಿತು. ನನ್ನ ಬೆಂಚಿನ ಮೇಲೆ ಜಮಖಾನ ಹಾಸಿ ಪತ್ರಿಕೆಯೋ ದುತ್ತ ಒರಗಿಕೊಂಡೆ. ರುದ್ರಗೌಡ–ಶಿವಲಿಂಗ–ಮುದ್ದಪ್ಪ ಮಾತ್ರ ಮಲಗಿಕೊ ಳ್ಳುವ ಅವಸರ ಮಾಡಲಿಲ್ಲ. ಶಿವಲಿಂಗ ತನ್ನ ಚೀಲದಿಂದ ಇಸ್ಪೀಟು ಎಲೆಗಳ ಕಟ್ಟು ಹೊರದೆಗೆದ. ಮೂವರೂ ಎದುರುಬದುರಾಗಿ ಕುಳಿತುಕೊಂಡರು. ಎಲೆ ಗಳನ್ನು 'ಟಿಪಾಯಿಸುತ್ತ' ಶಿವಲಿಂಗ ನನ್ನನ್ನು ಕೂಗಿದ.

"ಬರ್‍ರೀ. ಈಗಲೇ ನಿದ್ದೆ ಬಂತೇನು ನಿಮಗೆ ? ಸ್ವಲ್ಪ ಆಡೋಣಂತೆ ಬರ್‍ರಿ."

"ಇಸ್ಪೀಟಾಡುವದು ನನಗೆ ಗೊತ್ತಿಲ್ಲರಿ ! ನೀವು ಆಡಿರಿ."

ಶಿವಲಿಂಗ ಗಹಗಹಿಸಿ ನಕ್ಕ "ಇಸ್ಪೀಟಾಟ ಬರೂದಿಲ್ಲಂದರ ನಕ್ಕಾರು ಯಾರಾದರೂ ! ಅದರಾಗೇನದ ಅಂಥಾದ್ದು ? ಬರ್‍ರಿ. ನಾ ಕಲಿಸ್ತೀನಿ."

"ಬೇಡ ಶಿವಲಿಂಗಪ್ಪ. ನೀವು ಆಡಿರಿ. ನನಗೆ ನಿದ್ದೆ ಬಂದದ."

ಮೂರು ಜನರು ಆಡುವಂತಿರಲಿಲ್ಲವೊ ಏನೋ. ಕಿಟಕಿಯ ಹತ್ತಿರದ ಬೆಂಚಿನ ಮೇಲಿದ್ದ, ನಮ್ಮ ಜಿಲ್ಲೆಯವನೇ ಆಗಿದ್ದ ಇನ್ನೊಬ್ಬ ಕಾಂಗ್ರೆಸ್ಸಿಗನನ್ನು ಅವರು ಆಟಕ್ಕೆ ಕರೆದುಕೊಂಡರು. ಸ್ವಲ್ಪ ಹೊತ್ತು ಪತ್ರಿಕೆ ಓದುತ್ತಿದ್ದಂತೆ ನನಗೆ ನಿದ್ದೆ ಹತ್ತಿತು. ನಡುವೆ ಒಮ್ಮೆ ಆಕಸ್ಮಾತ್ತಾಗಿ ಎಚ್ಚರವಾದಾಗ ಕೆಳಗಡೆ ಇಸ್ಪೀಟು ಆಟ ರಭಸದಿಂದ ನಡೆದಿದ್ದುದು ಕಾಣಿಸಿತು. ಶಿವಲಿಂಗನ ಕೈಯಲ್ಲಿ ಒಂದೆರಡು ರೂಪಾಯಿಗಳೂ ಇದ್ದುವು. ಅಂತೂ ಅವರು ಹಣ ಹಚ್ಚಿ ಜೂಜು ಆಡುತ್ತಿದ್ದರು ! ರುದ್ರಗೌಡ–ಮುದ್ದಪ್ಪ ಇಬ್ಬರೂ ಬಾಹ್ಯಲೋಕವನ್ನೆಲ್ಲ ಮರೆತು ಆಟದಲ್ಲಿ ತಲ್ಲೀನರಾಗಿದ್ದರು ! ಡಬ್ಬಿಯ ಇನ್ನಿತರ ಕಡೆಗಳಲ್ಲೂ ಅದೇ

ಆಟ ನಡೆದಂತಿತ್ತು. " ಗುಲ್ಲ್ಯಾ, ಜಾಕಿ, ರಾಜಾ, ರಾಣಿ, ಹುಕುಂ " ಎಂಬ ಶಬ್ದಗಳು ಆಗಾಗ ಕೇಳಬರುತ್ತಿದ್ದುವು. ದೂರದಿಂದ ಒಂದು ಸಿನಿಮಾ ಗೀತೆಯೂ ಅಸ್ಪಷ್ಟವಾಗಿ ಕೇಳಿಸುತ್ತಿತ್ತು.

ಮತ್ತೆ ನಾನು ನಿದ್ರಾಧೀನನಾದವನು, ರೈಲು ತುಮಕೂರು ನಿಲ್ದಾಣದಲ್ಲಿ ನಿಂತುಕೊಂಡಾಗ ಎಚ್ಚತ್ತು ಕೆಳಗಿಳಿದು ಬಂದೆ. ನನ್ನ ಸಂಗಡಿಗರು ಅದೇ ತಾವೆ ಇಸ್ಪೀಟಾಟ ಮುಗಿಸಿದಂತಿತ್ತು. ಪ್ರತಿಯೊಬ್ಬರೂ ತಾವು ಸಂಪಾದಿಸಿದ ಹಣ ವನ್ನು ಎಣಿಸುತ್ತಲಿದ್ದರು. ರಾತ್ರಿಯಿಡೀ ಜಾಗರಣೆ ಮಾಡಿದುದರ ಫಲವಾಗಿ ಎಲ್ಲರ ಕಣ್ಣುಗಳೂ ಕೆಂಪಗಾಗಿದ್ದುವು. ಶಿವಲಿಂಗ ಏನನ್ನೋ ಗುಣುಗುಣಿಸುತ್ತ ಉತ್ಸಾಹದಿಂದ ನಗುತ್ತಿದ್ದ, ರುದ್ರಗೌಡನ ಮುಖ ಮಾತ್ರ ಸಪ್ಪಗಾಗಿತ್ತು. ಆಟದಲ್ಲಿ ಆತ ಬಹಳಷ್ಟು ಹಣ ಕಳೆದುಕೊಂಡಿದ್ದುದು ಸ್ಪಷ್ಟವಿತ್ತು

ಲಗುಬಗೆಯಿಂದ ಮುಖ ತೊಳೆದುಕೊಂಡು ಎಲ್ಲರೂ ಕಾಫಿ ಸೇವಿಸಿದೆವು. ತುಮಕೂರಿನಿಂದ ರೈಲು ಬೇಗ ಹೊರಡಲಿಲ್ಲ. ಶಿವಲಿಂಗ ಸಿಗರೇಟು ಎಳೆ ಯುತ್ತ ಪ್ಲಾಟ್‌ಫಾರ್ಮಿನ ಮೇಲೆ ಓಡಿಯಾಡುತ್ತಿದ್ದವನು, ಹೋಗಿ ಬರು ತ್ತಿದ್ದ ಮಹಿಳೆಯರನ್ನು ಲಜ್ಜೆಯಿಲ್ಲದೆ ದಿಟ್ಟಿಸುತ್ತಿದ್ದ. ನಮ್ಮ ಡಬ್ಬಿಯ ಎದುರಿಗೆ ಕುಳಿತಿದ್ದ ಹದಿನಾರರ ಹುಡುಗಿಯೊಬ್ಬಳನ್ನು ರುದ್ರಗೌಡನೂ ತದೇಕ ದೃಷ್ಟಿಯಿಂದ ನೋಡುತ್ತಿದ್ದ.

ಹತ್ತೂವರೆಯ ಸುಮಾರಿಗೆ ರೈಲು ಬೆಂಗಳೂರು ನಿಲ್ದಾಣ ತಲುಪಿತು. ಗಾಡಿಯಿಂದಿಳಿದ ಜನರಲ್ಲಿ ಹೆಚ್ಚು ಮಂದಿ ಬಿಳಿಟೋಪಿಯವರೇ ಇದ್ದರೆಂದು ಹೇಳಬೇಕಾದ ಅಗತ್ಯವಿಲ್ಲ.

" ಎಲ್ಲಿ ಬಿಡಾರ ಮುದ್ದಣ್ಣ ? "

" ಲೆಜಿಸ್ಲೇಚರ್ಸ್ ಹೋಮಿನಲ್ಲಿ ನನ್ನ ಗುರುತಿನವರೊಬ್ಬರಿದಾರ. ನಾನು ಅಲ್ಲಿಗೇ ಹೋಗುತೀನಿ. ಹೋಟಲಿನಲ್ಲಿ ರೂಮು ಮಾಡಲು ನನ್ನ ಹತ್ತರ ರೊಕ್ಕ ಆದರೂ ಎಲ್ಲಿ ಅದ ?" ಎಂದ ಮುದ್ದಪ್ಪ. " ನೀವೆಲ್ಲಿ ಇಳು ಕೊಳ್ತೀರಿ ? "

" ಎಲ್ಲಿಯಪಾ ಶಿವಲಿಂಗಾ ?" ಎಂದ ರುದ್ರಗೌಡ.

ಶಿವಲಿಂಗ ರುದ್ರಗೌಡ ಇಬ್ಬರೂ ಬೆಂಗಳೂರನ್ನು ಅನೇಕ ಬಾರಿ ನೋಡಿ ದಂತಿತ್ತು. ಎಂತಲೇ ಕೊಂಚವೂ ಅನುಮಾನ ಮಾಡದೆ ಶಿವಲಿಂಗ ಹೇಳಿದ :

" ಛತ್ರದಲ್ಲೇ ಇಳಕೊಂಡರೆ ಮಜಾ ಅಲ್ಲೇನು ಗೌಡರೆ ? "

ರುದ್ರಗೌಡ ರಸಿಕತನದ ನಗೆ ತುಳುಕಿಸುತ್ತ ನುಡಿದ :

" ಹಾಗೇ ಮಾಡೂಣಪಾ. ಹಾಗೇ ಮಾಡೂಣು. ಆಗಲಿ ಮುದ್ದಣ್ಣ, ಕಾಂಗ್ರೆಸ್‌ಭವನದಲ್ಲಿ ಭೆಟ್ಟಿಯಾಗುತೀವಲ್ಲ ? "

ತನ್ನ ಚೀಲ ಹಿಡಿದುಕೊಂಡು ಮುದ್ದಪ್ಪ ಹೊರಟುಹೋದ.

ಸಾರ್ವಜನಿಕ ಛತ್ರವೊಂದಕ್ಕೆ ನಾವು ಬಂದೆವು. ಛತ್ರವೆಂಬ ಹೆಸರಿಗೆ ತಕ್ಕ ಹಾಗೆ ಅದು ಜನಗಳಿಂದ ತುಂಬಿಹೋಗಿತ್ತು. ಗಂಡಸರು, ಹೆಂಗಸರು, ಮಕ್ಕಳು ಅಂಗಳದಲ್ಲೆಲ್ಲ ಓಡಿಯಾಡುತ್ತಿದ್ದರು. ಛತ್ರದ ವ್ಯವಸ್ಥಾಪಕ ರುದ್ರ ಗೌಡನನ್ನು ಗುರುತಿಸಿ, " ಬನ್ನಿ ಸ್ವಾಮಿೂ ಗೌಡರೆ, ಯಾವಾಗ ಬಂದದ್ದು ?" ಎಂದು ಸಲುಗೆಯ ಸ್ವರದಲ್ಲಿ ವಿಚಾರಿಸಿದ.

" ಈಗ ತಾನೆ ಬಂದದ್ದು ಸ್ವಾಮಿೂ. ರೂಮು ಬೇಕಲ್ಲ ?"

" ಯಾವ ರೂಮೂ ಖಾಲಿಯಿಲ್ಲವಲ್ಲ ಗೌಡರೆ ? "

" ನೋಡಿರಪ್ಪ. ಒಂದು ಒಳ್ಳೇ ರೂಮು ಖಾಲಿ ಮಾಡಿಕೊಡಿರಿ. "

" ತಮ್ಮಂಥವರಿಗಲ್ಲದಿದ್ದರೆ ಇನ್ನಾರಿಗೆ ಕೊಡೋದು ಹೇಳಿ. ತಡೀರಿ ನೋಡುತ್ತೇನೆ, " ಎಂದು ಹೇಳಿ ಪುಸ್ತಕದ ಹಾಳೆಗಳನ್ನು ತಿರುವಿ, ಹುಡುಗ ನನ್ನು ಕೂಗಿ, " ಲೋ ಪ್ರಭು, ನಮ್ಮ ಗೌಡರನ್ನು ಹತ್ತನೆಯ ನಂಬರ್ ರೂಮಿಗೆ ಕರೆದುಕೊಂಡು ಹೋಗಯ್ಯ, " ಎಂದು ಹೇಳಿದ.

ಆ ಕೊಟಡಿಗೆ ಹೋಗುತ್ತಿದ್ದಂತೆ ರುದ್ರಗೌಡನೂ ಶಿವಲಿಂಗನೂ ಪ್ರತಿ ಯೊಂದು ಕೊಟಡಿಯ ಕಡೆಗೂ ದೃಷ್ಟಿ ಹೊರಳಿಸುತ್ತಿದ್ದರು. ಒಂದೆರಡು ಕೊಟಡಿಗಳ ಬಾಗಿಲು ಅರ್ಧ ತೆರೆದಿದ್ದು, ಒಳಗೆ ಕುಳಿತ ಯುವತಿಯರು ಅಸ್ಪಷ್ಟವಾಗಿ ಕಾಣಿಸುತ್ತಿದ್ದರು. ಶಿವಲಿಂಗ—ರುದ್ರಗೌಡರು ಪರಸ್ಪರರ ಮುಖ ನೋಡಿ ಅರ್ಥಪೂರ್ಣ ನಗು ಬೀರಿದರು.

ಹತ್ತನೆಯ ನಂಬರಿನ ಕೋಣೆಯಲ್ಲಿ ಕಸ ತಾನೇತಾನಾಗಿ ಮೆರೆಯು ತ್ತಿತ್ತು. ಗೋಡೆಗಳ ಮೇಲೆ ತಿಗಣೆಗಳ ರಕ್ತದ ಕಲೆಗಳು. ಮೂಲೆಗಳಲ್ಲಿ ಉಗುಳಿನ ವಾಸನೆ. ಬಿರುಕುಗಳಲ್ಲಿ ತಿಗಣೆಗಳ ಸಂಸಾರ. ಬೆಂಗಳೂರಿನಂಥ ಮಹಾನಗರದ ಛತ್ರದಲ್ಲಿಯೂ ಇಂಥ ಹೊಲಸೇ ? ಇಲ್ಲಿ ನಿದ್ರೆ ಬರುವು ದಾದರೂ ಹೇಗೆ ಸಾಧ್ಯ ? ಎಂದು ನಾನು ಚಿಂತಿಸುತ್ತಿದ್ದೆ. ನನ್ನ ಸಂಗಡಿಗರಿಗೆ

ಮಾತ್ರ ಇದಾವುದರ ಕಡೆಗೂ ಗಮನವಿರಲಿಲ್ಲ. ಸಾಮಾನು ಇಳಿಸುತ್ತಲೂ ರುದ್ರಗೌಡ ಪ್ರಭುವಿಗೆ ಒಂದು ರೂಪಾಯಿ ಕೊಟ್ಟು, "ಮೊದಲು ಇಲ್ಲಿಯ ಕಸ ಅಷ್ಟು ತೆಗೆದುಬಿಡಪ್ಪ. ಆ ಮೇಲೆ ಜಳಕದ ವ್ಯವಸ್ಥಾ ಮಾಡು," ಎಂದು ಹೇಳಿದ.

"ಈಗ ಬಿಸಿನೀರು ಸಿಕ್ಕೋಲ್ಲವಲ್ಲ ಸ್ವಾಮಿ ?"

"ಸಿಕ್ಕದಿದ್ದರಿಲ್ಲ. ತಣ್ಣೀರಾದರೂ ಅದನೋ ಇಲ್ಲೋ ?"

"ಅದೂ ಸಿಕ್ಕೋಲ್ಲ ಈ ಟೈಮಿಗೆ. ಆದರೂ ತಮಗಾಗಿ ನಾ ವ್ಯವಸ್ಥೆ ಮಾಡ್ತೀನಿ," ಎಂದು ಹೇಳಿ ಪ್ರಭು ಹೊರಟುಹೋದ.

ಕಸಬರಿಗೆ ತೆಗೆದುಕೊಂಡು ಆತ ಬರುತ್ತಲೂ ನಾವೆಲ್ಲ ಹೊರಗಿನ ಪಡಸಾಲೆಗೆ ಬಂದೆವು. ಮತ್ತೊಂದು ಸಿಗರೇಟು ಹೊತ್ತಿಸಿ ಹೊಗೆಯೆಳೆಯುತ್ತ ಶಿವಲಿಂಗ ಪಡಸಾಲೆಯ ಉದ್ದಕ್ಕೂ ಅಡಿಯಿಡುತ್ತ ಕೊಟಡಿಗಳ ಕಡೆ ದೃಷ್ಟಿ ಬೀರತೊಡಗಿದ. ಆತ ಒಂದೆರಡು ಬಾರಿ ಓಡಿಯಾಡುತ್ತಲೂ ಫಳನೆಯ ನಂಬರಿನ ಕೊಟಡಿಯ ಬಾಗಿಲಲ್ಲಿ ಯುವತಿಯೊಬ್ಬಳು ಕಾಣಿಸಿಕೊಂಡು ಶಿವಲಿಂಗನ ಕಡೆಗೆ ಓರೆನೋಟ ಬೀರಿದಳು. ಅವನೂ ನಗುನಗುತ್ತ ಅವಳನ್ನು ನೋಡಿ ಹುಬ್ಬು ಹಾರಿಸಿದ. ಅದಕ್ಕೆ ಪ್ರತಿಯಾಗಿ ಅವಳು ಏನು ಸಂಜ್ಞೆ ಮಾಡಿದಳೊ ತಿಳಿಯದು. ಶಿವಲಿಂಗ ಕೊಂಚವೂ ಅನುಮಾನ ಮಾಡದೆ ಅವಳ ಕೋಣೆಯಲ್ಲಿ ಪ್ರವೇಶಿಸಿದ.

ನಡೆದಿದ್ದುದೇನೆಂಬುದನ್ನು ಅರ್ಥಮಾಡಿಕೊಳ್ಳದಷ್ಟು ಅಜ್ಞನೇನೂ ಆಗಿರಲಿಲ್ಲವಲ್ಲ ನಾನು ? ವೇಶ್ಯೆಯರ ಕಸಬು ನನಗೇನು ಅಪರಿಚಿತವಾಗಿರಲಿಲ್ಲ. ಮಾದಾಪುರದಲ್ಲಿ ನಾನಿದ್ದುದೇ ಆ ನಿತ್ಯವಧುಗಳ ನಡುವೆ. ಆದರೆ, ಬೆಂಗಳೂರಿನಂಥ, ರಾಜ್ಯದ ರಾಜಧಾನಿಯಲ್ಲಿ ಛತ್ರದಲ್ಲಿಯೇ ಸೂಳೆಗಾರಿಕೆ ನಡೆಯುತ್ತಿದ್ದುದನ್ನು ಗಮನಿಸಿದಾಗ ಆಶ್ಚರ್ಯವಾಗದಿರಲಿಲ್ಲ.

ಎಂಟು ಹತ್ತು ನಿಮಿಷಗಳ ತರುವಾಯ ಶಿವಲಿಂಗ ಹೊರಗೆ ಬಂದು ರುದ್ರಗೌಡನನ್ನು ಒಂದು ಬದಿಗೆ ಕರೆದೊಯ್ದು ಏನೇನನ್ನೋ ಹೇಳಿದ. ನಾನು ಅವರ ಜೊತೆಯಲ್ಲಿಯೇ ಇರುವಾಗ ನನಗೆ ಗೊತ್ತಾಗದಂತೆ ಅಂಥ ಕೆಲಸ ಮಾಡಲು ಸಾಧ್ಯವಾಗಲಾರದೆಂದು ಮನಗಂಡು ರುದ್ರಗೌಡ ನನ್ನನ್ನೂ ವಿಶ್ವಾಸ

ದಲ್ಲಿ ತೆಗೆದುಕೊಳ್ಳಲು ನಿಶ್ಚಯಿಸಿಕೊಂಡಿರಬೇಕು. ಎಂತಲೇ ಆತ ನಗುತ್ತಲೇ ಹೇಳದೊಡಗಿದ :

" ಬೆಂಗಳೂರಿನಂಥಾ ನಗರಕ್ಕೆ ಬಂದ ಮೇಲೆ ಸ್ವಲ್ಪಿಲ್ಲ ಸ್ವಲ್ಪ ಚೈನೀ ಮಾಡಿದರೇ ಚಂದ. ಅಲ್ಲಾ ಸದಾಶಿವ ? "

" ಮಾಡಿರಲ್ಲ ! ಯಾರು ಬೇಡಂತಾರ ? "

" ನಿಮಗೆ ಇಂಥಾದ್ದು ಸರಿಬರುವದಿಲ್ಲೋ ಏನೊ ? "

" ನಾನೇನು ಸಕಲಗುಣಸಂಪನ್ನ ಅಂತ ತಿಳಿದೀರೇನ್ರಿ ಗೌಡರೆ ? ನಿಮ್ಮಷ್ಟಕ್ಕೆ ನೀವು ಸ್ವತಂತ್ರರಿದೀರಿ. ಬೇಕಾದ್ದು ಮಾಡಬಹುದು. "

" ಹಾಗಿದ್ದರಡ್ಡಿಯಿಲ್ಲಪಾ. "

" ಅವರು ಮೂವರಿದಾರಂತೆ ಸದಾಶಿವಪ್ಪ. ನೀವೂ ಒಬ್ಬಳನ್ನ ನೋಡಿಕೊಂಡು ಬಿಡಿರಿ, ಮೂವರೂ ಕೂಡಿ ಮಜಾ ಮಾಡಿದರಾಯ್ತು ", ಎಂದ ಶಿವಲಿಂಗ.

" ನನಗೀಗ ಅಂಥಾದ್ದಕ್ಕೆಲ್ಲಾ ಮನಸ್ಸಿಲ್ಲರಿ. ನೀವಿಬ್ಬರೂ ಸಂತೋಷ ಪಡಬಹುದು. ನಾನು ಹಾಗೇ ಊರು ಸುತ್ತಾಡಿ ನೋಡುತೀನಿ. "

ಅವರು ನನಗೆ ಆ ವಿಚಾರವಾಗಿ ಹೆಚ್ಚು ಒತ್ತಾಯ ಮಾಡಲಿಲ್ಲ.

ಸ್ನಾನ–ಊಟ ಮುಗಿಯುತ್ತಲೂ ಕೊಂಚ ನಿದ್ದೆ ಮಾಡಿದರಾಯಿತೆಂದು ನಾನು ಹಾಸಿಗೆ ಬಿಚ್ಚಿ ಮಲಗಿಕೊಂಡೆ. ಬಾಗಿಲು ಹಾಕಿಕೊಂಡು ಶಿವಲಿಂಗ ರುದ್ರಗೌಡ ಹೊರಗೆ ಹೊರಟರು. " ನೀವು ಮಲಕೊಂಡಿರಿ. ಈಗ ಬಂದು ಬಿಡ್ತೀವಿ, " ಎಂದು ಹೇಳಿದ ಶಿವಲಿಂಗ. ನಾನು ಅತ್ತ ಲಕ್ಷ್ಯವೀಯದೆ ನಿದ್ರಿಸಲು ಪ್ರಯತ್ನಿಸತೊಡಗಿದೆ.

ಅವರು ಮತ್ತೆ ಕೊಟಡಿಗೆ ಬಂದಾಗ ಸಂಜೆಯಾಗುತ್ತ ಬಂದಿತ್ತು. ನಾನೂ ಚೆನ್ನಾಗಿ ನಿದ್ರೆಮಾಡಿ ಎದ್ದು ಮುಖ ತೊಳೆದುಕೊಂಡು ಬಂದೆ. ಮಳೆಗಾಲವಾದುದರಿಂದ ಹೊರಗೆ ಹವೆ ತಂಪಾಗಿತ್ತು. ರುದ್ರಗೌಡ ಶಿವಲಿಂಗ ಇಬ್ಬರೂ ಬಟ್ಟೆ ಬದಲಿಸಿದರು. ನೆಹರುಶರ್ಟಿನ ಮೇಲೆ ಉಣ್ಣೆಯ ಕೋಟು ಧರಿಸಿ ಶುಭ್ರವಾದ ಟೋಪಿಯಿಟ್ಟುಕೊಂಡು ರುದ್ರಗೌಡ ಸಿದ್ಧವಾದ. ಶಿವಲಿಂಗನಾದರೋ ರೇಶಿಮೆಯ ಅಂಗಿ ತೊಟ್ಟು ಕ್ರಾಪು ತೀಡಿಕೊಂಡು ಮೀಸೆ ತಿರುವಿಕೊಂಡು ತಯಾರಾದ. ನಾನೂ ಬೇರೆ ಪ್ಯಾಂಟು–ಬುಶ್‌ಶರ್ಟು ಧರಿಸಿ ಅವರೊಡನೆ ಹೊರಟೆ.

# ೧೧

ಎಂ ಪಿ ಸಿ. ಸಿ. ಕಚೇರಿಯೆದುರು ಗದ್ದಲವೋ ಗದ್ದಲ. ವಿಸ್ತಾರವಾದ ಅಂಗಳದಲ್ಲೆಲ್ಲ ಕಾರು, ಜೀಪು, ಟ್ಯಾಕ್ಸಿ ನಿಂತುಕೊಂಡಿದ್ದುವು. ಒಳಗಡೆ ಸ್ಥಳ ಸಾಲದಿದ್ದುದರಿಂದ ಅಂಗಳದೆದುರಿನ ರಸ್ತೆಯ ಪಕ್ಕದಲ್ಲೂ ಹಲವು ಕಾರುಗಳನ್ನು ನಿಲ್ಲಿಸಲಾಗಿತ್ತು. ಸುತ್ತಲೂ ಖಾದೀಧಾರಿಗಳು ನೆರೆದು ಹರಟುತ್ತಲಿದ್ದರು. ಐದಾರು ಜನರದೊಂದು ಗುಂಪಾಗಿತ್ತು. ಜನ ಬರುತ್ತಿದ್ದರು, ಹೋಗುತ್ತಿದ್ದರು. ಮೈಸೂರಿನ ಅಡ್ಡ ಪಂಚೆಯವರು, ಉತ್ತರ ಕರ್ನಾಟಕದ ದೋತರದವರು, ಮುಚ್ಚುಕಾಲರ್ ಕೋಟು-ಪ್ಯಾಂಟಿನವರು, ಸೂಟಿನವರು, ನೆಹರು ಶರ್ಟು ಪೈಜಾಮದವರು, ಟೋಪಿಯಿದ್ದವರು, ಟೋಪಿಯಿಲ್ಲದವರು—ಎಲ್ಲ ಭಾಗಗಳ ಜನರೂ ಅಲ್ಲಿ ಸೇರಿದ್ದರು. ಎಡಗೈಲಿ ಜಂಬದ ಚೀಲ ಹಿಡಿದು ಅಲೆದಾಡುವ ಖಾದೀ ಸೀರೆಯ ಮಹಿಳಾಮಣಿಯರೂ ಕೆಲವರು ಆಗಾಗ ಕಾಣಿಸುತ್ತಿದ್ದರು.

ಕಾರ್ಯಾಲಯದ ಕೆಳಭಾಗದಲ್ಲಿನ ಎಡಗಡೆಯ ಕೊಟಡಿಯೆದುರು ಯುವಕ ಕಾಂಗ್ರೆಸ್ಸಿನ ಬೋರ್ಡು ನೇತಾಡುತ್ತಿತ್ತು. ಅದರ ಪಕ್ಕದಲ್ಲಿ ಮಹಿಳಾ ವಿಭಾಗದ ಕಚೇರಿಯಿತ್ತು. ಅದರ ಎದುರು ಹಾಯ್ದು ನಾವು ಮಹಡಿಯ ಕಡೆಗೆ ಹೋಗುತ್ತಿದ್ದಂತೆ ಒಳಗೆ ಕುಳಿತಿದ್ದವರಾರೋ ನನ್ನ ಹೆಸರು ಹಿಡಿದು ಕೂಗಿದುದರಿಂದ ಅತ್ತ ತಿರುಗಿ ನೋಡಿದರೆ ರಮಾ ಕಾಣಿಸಿಕೊಂಡಳು.

ಕೊಟಡಿಯ ಬಾಗಿಲ ಬಳಿ ನಾನು ಹೋಗಿ, "ಯಾವಾಗ ಬಂದಿರಿ ?" ಎಂದು ಕೇಳಿದೆ.

"ನಿನ್ನೆ ಸಂಜೆ ಬಂದೆವು. ಮಾಲಾದೇವಿ ಕರೆದುಕೊಂಡು ಬಂದಾರೆ."

"ನೀವೂ ಅರ್ಜಿ ಹಾಕಿದೀರೋ ಏನು ಮತ್ತೆ ?"

" ನನಗ್ಯಾಕ್ರೀ ಅಂಥಾ ಉಪದ್ವ್ಯಾಪ ? ಮಾಲಾದೇವಿ ಹಾಕುವವರಿದಾರೆ. ಕಾರು ಹೊರಟಿತ್ತು. ಜೊತೆಗೆ ಎರಡು ಜನ ಇರಲಿ ಅಂತ ಕರೆದುಕೊಂಡು ಬಂದಾರೆ. "

" ಅವರೆಲ್ಲಿದಾರೆ ? "

" ಮೇಲೆ ಇರಬೇಕು ಆಫೀಸಿನಲ್ಲಿ. "

" ಅರ್ಜಿ ಕೊಟ್ಟರೇನು ? "

" ಅಧ್ಯಕ್ಷರನ್ನ ಕೇಳಿ ಕೊಡುತೀನಂತ ಹೇಳುತಿದ್ದರು. "

" ಬರ್ರಿ ಹಾಗಾದರೆ, ನೋಡೋಣ. "

ರಮಾ ಕೊಂಚವೂ ಅನುಮಾನ ಮಾಡದೆ ಎದ್ದು ಬಂದಳು. ಅವಳು ಬಂದುದನ್ನು ಕಂಡು ನನಗೇ ಅಚ್ಚರಿಯೆನಿಸಿತು. ನಿಜವಾಗಿ ಅವಳಿಗೂ ನನಗೂ ಅಂಥ ವಿಶೇಷ ಪರಿಚಯುವೇನೂ ಇರಲಿಲ್ಲ. ಅಂದು ರಾಮರಾಯನೊಡನೆ ಅವರ ಮನೆಯಲ್ಲಿ ನೋಡಿದ್ದುದೆಷ್ಟೋ ಅಷ್ಟೆ. ಅನಂತರ ಅವಳು ನನಗೆ ಭೆಟ್ಟಿಯಾಗಿರಲಿಲ್ಲ.

ರಮಾ ನನ್ನ ಸಂಗಡ ಬಂದುದನ್ನು ನೋಡಿ ರುದ್ರಗೌಡ—ಶಿವಲಿಂಗರು ತುಟಿಗಳಲ್ಲಿಯೆ ನಕ್ಕಂತೆ ಭಾಸವಾಯಿತು. " ಇವನೂ ನಮ್ಮ ಹಾದಿಗೆ ಬಂದ !" ಎಂದೂ ಅಂದುಕೊಂಡಿರಬೇಕು ಶಿವಲಿಂಗ. ಆದರೆ, ರಮಾ ವಿಚಾರವಾಗಿ ನನ್ನ ಮನಸ್ಸಿನಲ್ಲಿ ಅಂಥ ಭಾವನೆ ಯಾವುದೂ ಇರಲಿಲ್ಲ. ಅಲ್ಪ ಪರಿಚಯದಿಂದಲೇ ಆಕೆಯ ಸರಳತನವನ್ನು ನಾನು ಮೆಚ್ಚಿಕೊಂಡಿದ್ದೆ. ಆ ಮೆಚ್ಚುಗೆಯನ್ನು ಬಿಟ್ಟರೆ ನನ್ನಲ್ಲಿ ಬೇರಾವ ವಿಕಾರವೂ ಇರಲಿಲ್ಲವೆಂದು ಪ್ರಮಾಣ ಮಾಡಿ ಹೇಳಬಲ್ಲೆ.

ಮಹಡಿಯ ಮೇಲೆ ದಕ್ಷಿಣದಿಕ್ಕಿನ ಕೊಟಡಿಯಲ್ಲಿ ಚುನಾವಣಾ ಸಮಿತಿಯ ಕಚೇರಿಯಿತ್ತು. ಅಲ್ಲಿ ನೂರಾರು ಜನರು ನೆರೆದಿದ್ದುದರಿಂದ ಒಳಗೆ ನಡೆಯುತ್ತಿದ್ದುದೇನೆಂಬುದೂ ತಿಳಿಯುವಂತಿರಲಿಲ್ಲ. ಎಂತಲೇ ನಾವು ಅತ್ತ ಹೋಗದೆ ಮಹಡಿಯ ನಡುಮನೆಗೆ ಬಂದೆವು. ಅಲ್ಲಿ ಮಾತ್ರ ಅಷ್ಟೊಂದು ಗದ್ದಲವಿರಲಿಲ್ಲ. ಅಲ್ಲಲ್ಲಿ ಇರಿಸಿದ್ದ ಬೆಂಚುಗಳ ಮೇಲೆ ಟೋಪಿಧಾರಿಗಳು ಕುಳಿತು ಹರಟುತ್ತಿದ್ದರು. ಕಾರ್ಯದರ್ಶಿಯ ಕೊಟಡಿಯಲ್ಲಿ ಮಲ್ಲಿಕಾರ್ಜುನಪ್ಪನ ಸಂಗಡ ಮಾಲಾದೇವಿ ಕುಳಿತಿದ್ದುದು ಕಾಣಿಸಿತು. ಮಹಾರಾಷ್ಟ್ರೀಯರಂತೆ

ತುರುಬು ಕಟ್ಟಿ ಅದರ ಸುತ್ತಲೂ ಅರ್ಧಚಂದ್ರಾಕಾರದ ಮಲ್ಲಿಗೆಯ ದಂಡೆ ಮುಡಿದು, ರೇಶಿಮೆ ಸೀರೆ ಉಟ್ಟು ಅಲಂಕೃತಳಾಗಿದ್ದಳು ಮಾಲಾದೇವಿ.

ಮಾಲಾದೇವಿಯ ವಿಚಾರವಾಗಿ ನನ್ನ ಮನಸ್ಸಿನಲ್ಲಿ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಮಲ್ಲಿಕಾರ್ಜುನಪ್ಪ ಹಾಗೂ ಮತ್ತಿತರ ಸಾಹುಕಾರರೊಡನೆ ಅವಳು ಸ್ವಚ್ಛಂದವಾಗಿ ತಿರುಗುವುದನ್ನು ಕಂಡು ಅವಳ ಬಗೆಗೆ ಮನಸ್ಸು ಕೆಟ್ಟು ಹೋಗಿತ್ತು. ಅಂಥವಳ ಜೊತೆಯಲ್ಲಿ ರಮೆಯಂಥ ಸರಳಸ್ವಭಾವದ ಯುವತಿ ಬೆಂಗಳೂರಿನಂಥ ನಗರಕ್ಕೆ ಬರಬಾರದಾಗಿದ್ದಿತೆಂದೇ ನನಗನ್ನಿಸಿತು.

" ಎಲ್ಲಿ ಇಳುಕೊಂಡೀರಿ ರಮಾ ? "

" ಮಾಲಾದೇವಿಯ ಅಕ್ಕನ ಮನೆಯಿದೆ ಈ ಊರಲ್ಲಿಯೆ. ಅಲ್ಲೇ ಇದೀವಿ. "

" ಅಕ್ಕನ ಮನೆಯೆ ? ಏನ್ಮಾಡ್ತಾರೆ ಅವರು ?"

" ಅವರ ಯಜಮಾನರು ಬೆಂಗಳೂರಿನಲ್ಲಿ ದೊಡ್ಡ ವ್ಯಾಪಾರಿಗಳು. ಹೋಲ್‌ಸೇಲ್ ಅರಿವೆ ವ್ಯವಹಾರ ಮಾಡ್ತಾರೆ. ಮಲ್ಲೇಶ್ವರದಲ್ಲಿ ಮನೆಯಿದೆ. ನಮಗಾಗಿ ಎರಡು ರೂಮುಗಳನ್ನೇ ಬಿಟ್ಟು ಕೊಟ್ಟಿದ್ದಾರೆ. "

ಮಾತನಾಡುತ್ತಿದ್ದಂತೆಯೆ ನಾವು ಬಿಸಿಲುಮಚ್ಚಿನ ಕಡೆ ಹೋದೆವು ಆ ಸಮಯದಲ್ಲಿ ಅಲ್ಲಿ ಯಾರೂ ಇರಲಿಲ್ಲವಾದುದರಿಂದ ಸಂಕೋಚವಿಲ್ಲದೆ ಮಾತನಾಡಲು ಅನುಕೂಲವಾಗಿತ್ತು.

" ನೀವ್ಯಾಕೆ ಬಂದೀರಿ ಸದಾಶಿವ ? " ಎಂದಳು ರಮಾ.

" ನಾ ಬಂದದ್ದೂ ನಿಮ್ಮ ಹಾಗೇ. ನಿಮ್ಮನ್ನ ಒಬ್ಬರು ಕರಕೊಂಡು ಬಂದರೆ ನನ್ನನ್ನೂ ಒಬ್ಬರು ಕರಕೊಂಡು ಬಂದಾರೆ. "

" ಯಾರು ? ಆ ಹಳ್ಳೀ ಗೌಡ ? "

" ಹೌದು. ಅವರ ಗುರುತಿದೆಯೇನು ? "

" ಎಲ್ಲಿಯ ಗುರುತು ? ನಾಲ್ಕೈದು ಸಲ ನೋಡೀನಿ ಜಿಲ್ಲಾ ಕಾಂಗ್ರೆಸ್ ಆಫೀಸಿನಲ್ಲಿ. ಅವರದೆಲ್ಲಿ ದೋಸ್ತಿಯಾಯ್ತು ಸದಾಶಿವ ? "

" ಯಾಕೆ ? ಆಗಬಾರದಾಗಿತ್ತು ಅಂತೀರೇನು ? "

" ಸ್ನೇಹಕ್ಕೆ ಯೋಗ್ಯ ವ್ಯಕ್ತಿಯಲ್ಲ ಅದು. ಸಭ್ಯನಂತೂ ಅಲ್ಲವೇ ಅಲ್ಲ."

" ಯಾಕ್ರೀ ? ಅಂಥಾದ್ದು ಏನು ಮಾಡಿದಾರೆ ? "

" ಹೆಂಗಸರ ವಿಷಯದಲ್ಲಿ ಬಹಳ ಲೂಸ್. ಕಾಂಗ್ರೆಸ್ ಕಚೇರಿಗೆ ಬರುವ ಕಾರ್ಯಕರ್ತೆಯರೆಲ್ಲಾ ವ್ಯಭಿಚಾರಿಗಳೇ ಇರ್ತ್ತಾರಂತ ಅವರು ತಿಳುಕೊಂಡಿರ ಬೇಕು. ಎಲ್ಲರ ಸಂಗಡವೂ ಕಚಕ್‌ಪಿಚಕ್ ಮಾತಾಡಲು ಬರ್‍ತ್ತಾರೆ. ಒಮ್ಮೆ ಮಾಲಾ ದೇವಿಯವರನ್ನೂ ಮುಟ್ಟಲು ಬಂದಿದ್ದರಂತೆ. ಅವರು ಚೆನ್ನಾಗಿ ಮಂಗ ಳಾರತಿ ಮಾಡಿದರು. ನನ್ನ ಸಂಗಡಲೂ ಒಮ್ಮೆ ಸಲಿಗೆ ಮಾಡಲು ಬಂದಿದ್ದರು. ಅವರ ಆಟ ನಡೀಲಿಲ್ಲ. "

" ಇದೆಲ್ಲಾ ನನಗೇನು ಗೊತ್ತು, ಬಿಡಿರಿ. ಅಂತೂ ಹೀಗಿದಾನೆ ಅಂತೀರಾ ಮನುಷ್ಯ ? ಹಳೆಯ ಕಾಂಗ್ರೆಸ್ ಕಾರ‍್ಯಕರ್ತ, ದೇಶಕ್ಕಾಗಿ ತ್ಯಾಗ ಮಾಡಿದವ ಅಂತ ನಾನು ತಿಳಿದಿದ್ದೆ. "

" ಅದೇನು ಸುಳ್ಳಲ್ಲ. ಮೂರು ನಾಲ್ಕು ಸಲ ಜೇಲಿಗೆ ಹೋಗಿಬಂದಾರ. ಮೊದಲಿಂದಲೂ ಕಾಂಗ್ರೆಸಿನಲ್ಲೇ ಇದಾರ, ಎಲ್ಲಾ ನಿಜ. ಆದರೆ ಇವು ಕೆಲವು ಕೆಟ್ಟ ಚಟ ಇವೆ. ಇಸ್ಪೀಟು ಆಟ ಬೇರೆ. ಅದರಲ್ಲಿ ಹೊಲಮನೆ ಎಲ್ಲಾ ಹಾಳು ಮಾಡಿಕೊಂಡಾರಂತೆ. "

ನಿಜವಾಗಿ ನನಗೆ ಇದಾವುದರ ಗಂಧವೂ ಇರಲಿಲ್ಲ. ರುದ್ರಗೌಡನ ಬಗೆಗೆ ನನಗಿಂತಲೂ ಹೆಚ್ಚು ರಮೆಗೇ ಗೊತ್ತಿದ್ದಿತು ಹಾಗಾದರೆ ! ಇದೆಲ್ಲ ಇವಳಿಗೆಂತು ಗೊತ್ತಾಗಿರಬಹುದು ? ಅಂತೂ ರಮಾ ಸಾಮಾನ್ಯ ಯುವತಿಯಾಗಿರಲಿಲ್ಲ !

" ಲಿಂಗಣ್ಣ ಬರಲಿಲ್ಲವೇನು ? " ಎಂದು ನಾನು ಸಹಜವಾಗಿಯೇ ವಿಚಾ ರಿಸಿದೆ.

ಆ ಪ್ರಶ್ನೆಯಿಂದ ರಮಾ ತಬ್ಬಿಬ್ಬಾಗಲಿಲ್ಲ. ಅವಳೂ ಸಹಜವಾದ ಸ್ವರ ದಲ್ಲಿಯೇ ಉತ್ತರವಿತ್ತಳು :

" ಅವರೇತಕ್ಕೆ ಬಂದಾರು ? "

" ನಮ್ಮಂತೆಯೇ ಅವರನ್ನೂ ಯಾರಾದರೊಬ್ಬ ಅರ್ಜಿದಾರರು ಕರ ಕೊಂಡು ಬಂದಿರಬಹುದೇನೊ ಅಂತನ್ನಿಸಿತು. "

" ಅವರು ಹಾಗೆಲ್ಲ ಬರುವವರಲ್ಲ. ಅಲ್ಲದೆ ಪರೀಕ್ಷೆ ಬೇರೆ ಸಮೀಪಿಸಿದೆ ಯಲ್ಲ ? ಇದು ಅವರ ಫೈನಲ್ ಇಯರ್. ಫಸ್ಟ್‌ಕ್ಲಾಸ್ ತೆಗೆದುಕೊಳ್ಳುವ ಮಹತ್ವಾಕಾಂಕ್ಷೆಯಿದೆಯಂತೆ. "

" ನಿಮ್ಮದೂ ಫೈನಲ್ ಇಯರೇ ಇರಬೇಕಲ್ಲ ? ನಿಮಗೂ ಇಂಥಾ ಆಸೆ ಇಲ್ಲೇನು ? "

" ಬರೀ ಆಸೆಯಿಂದೇನಾದೀತು ? ನಮ್ಮಂಥವರು ಪಾಸಾದರೇ ದೊಡ್ಡದು. "

" ಅದ್ಯಾಕ್ರೀ ಹೀಗೆ ಹೇಳ್ತೀರಿ ? ಪುರುಷರಿಗೆ ಯಾವದರಲ್ಲಿ ಕಡಿಮೆ ಸ್ತ್ರೀಯರು ? ನೀವೂ ಯಾಕೆ ಫಸ್ಟ್‌ಕ್ಲಾಸ್ ಬರಬಾರದು ? "

" ಬರಬಹುದಾಗಿತ್ತೋ ಏನೊ. ಪರಿಸ್ಥಿತಿ ಸರಿಯಾಗಿಲ್ಲ. "

ರಮಾ ಹಾಗೆ ಹೇಳುತ್ತಲೂ ಅವಳ ತಾಯಿ ಇಂದಿರಾಬಾಯಿಯ ನೆನಪು ಬಂದಿತು ನನಗೆ. ನನ್ನ ಎದುರಿನಲ್ಲಿಯೇ ಅವಳು ರಮೆಗೆ ಆಡಿದ ಹಲವು ಚುಚ್ಚು ನುಡಿಗಳನ್ನು ಜ್ಞಾಪಿಸಿಕೊಂಡು ನಾನು ಸುಮ್ಮನಾದೆ. ಆ ವಿಷಯವನ್ನು ಅಲ್ಲಿಗೇ ಬಿಟ್ಟು,

" ರಾಮರಾಯರು ಬಂದಾರೋ ಏನೊ ? " ಎಂದು ಕೇಳಿದೆ.

" ಅವರು ಹಾಗೆಲ್ಲಾ ಬರುವವರಲ್ಲ. ಅಲ್ಲದೆ ಅವರೇನು ಟಿಕೀಟು ಬೇಡುವವರಲ್ಲವಲ್ಲ ? "

" ಯಾಕೆ ಬೇಡಬಾರದು ? "

" ಬೇಡಿದರೂ ಕೊಡುವವರಾರು ? "

" ಯಾಕೆ ಕೊಡಬಾರದು ? ಅವರೂ ಹಳೆಯ ಕಾಂಗ್ರೆಸ್ ಕಾರ್ಯಕರ್ತರಲ್ಲೇನು ? ಇಪ್ಪತ್ತು ಇಪ್ಪತ್ತೈದು ವರ್ಷಗಳಿಂದ ಕಾಂಗ್ರೆಸ್ಸಿಗಾಗಿ ದುಡಿದವರು. ಸೆರೆಮನೆಗೆ ಹೋದವರು. ಜಿಲ್ಲಾ ಕಾಂಗ್ರೆಸ್ ಪದಾಧಿಕಾರಿಯಾಗಿಯೂ ಇದ್ದವರು. ಮಲ್ಲಿಕಾರ್ಜುನಪ್ಪನಂಥವರಿಗೇ ಟಿಕೀಟು ಸುಲಭವಾಗಿ ಸಿಗುವಾಗ ರಾಮರಾಯರಿಗೇಕೆ ಸಿಗಬಾರದು ? "

" ಒಂದು ವೇಳೆ ಅವರಿಗೆ ಸಿಕ್ಕರೂ ಅವರು ಆರಿಸಿಬರಬೇಕಲ್ಲ ? "

" ಇದೆಂಥಾ ಮಾತು ರಮಾ ? ಜಿಲ್ಲೆಯ ಪ್ರಸಿದ್ಧ ಮುಖಂಡರಾದ ರಾಮರಾಯರು ಆರಿಸಿಬರದಿದ್ದರೆ ಕಾಂಗ್ರೆಸ್ಸಿನ ಕಿಮ್ಮತ್ತು ಏನುಳಿದೀತು ? "

" ಇವತ್ತು ಅದನ್ನೆಲ್ಲ ಯಾರು ನೋಡ್ತಾರೆ ? ಅಲ್ಲದೆ ನಿಮಗೆ ರಾಮರಾಯರ ವಿಷಯ ಸರಿಯಾಗಿ ಗೊತ್ತಿದ್ದಂತೆ ಕಾಣುವದಿಲ್ಲ. "

" ಇಲ್ಲ. ಅವರಿಗೂ ನನಗೂ ಅಂಥಾ ವಿಶೇಷ ಪರಿಚಯವೇನೂ ಇಲ್ಲ. ಏನೋ ಸ್ವಲ್ಪ ಗುರುತು. ಅಷ್ಟೆ. "

" ಅದಕ್ಕೇ ನಿಮಗೆ ತಪ್ಪುಕಲ್ಪನೆಯಾಗಿರಬೇಕು ಅವರ ಬಗ್ಗೆ ...ಅವರು. " ಎಂದು ರಮಾ ಹೇಳುತ್ತಿದ್ದಂತೆ ಮಾಲಾದೇವಿ ಆಕೆಯನ್ನು ಹುಡುಕುತ್ತ ಬಿಸಿಲು ಮಚ್ಚಿಗೆ ಬಂದಳು.

" ಇಲ್ಲಿದೀಯೇನೋ? ನಾನು ಒಳಗೆಲ್ಲಾ ತಿರುಗಿಬಂದೆ. ಓ . ಇವರ್ಯ್ಯಾರು? ಎಲ್ಲೋ ನೋಡಿದ ಹಾಗೆ ಕಾಣ್ತದಲ್ಲ ? "

" ಕಾಂಗ್ರೆಸ್ ಕಮೀಟಿಯಲ್ಲಿ ನೋಡಿರಬಹುದು. ಇವರೂ ನಮ್ಮ ಜಿಲ್ಲೆಯವರೇ. ಸದಾಶಿವ ಅಂತ ಹೆಸರು. "

" Glad to meet you ! ಸೆಟ್ಟರ ವಿರುದ್ಧ ಲೇಖ ಬರೆದವರು ನೀವೇ ಏನು ? How daring ! " ಎಂದಳು ಮಾಲಾದೇವಿ, ತನಗೆ ಸಹಜವಾದ ಆಕರ್ಷಕ ನಗೆ ಬೀರುತ್ತ.

" ಅದರಲ್ಲಿ daring ಏನದರೀ ? "

" ಸೆಟ್ಟರೆಂದರೆ ಜಿಲ್ಲೆಯ all powerful person. ಅಂಥವರ ವಿರುದ್ಧ ಬರೆಯೋದಂದರೇನು ಸಾಮಾನ್ಯ ಅಲ್ಲ. ನಿಮ್ಮದು ಯಾವ ಊರು ? ಏನು ವಿಷಯ ? ಮತ್ತೊಮ್ಮೆ ಭೆಟ್ಟಿಯಾಗಬೇಕು ಹಂ ! ನನಗೂ ನಿಮ್ಮಂಥ ಸಾಹಸಿಗರ ಸಹಾಯ ಬೇಕಾಗ್ತದ ಇನ್ನು ಮೇಲೆ. ನಿಮ್ಮ ಸ್ನೇಹಿತ ಕಾಗವಾಡರಿಗೂ ಹೇಳಬೇಕು ನನ್ನ ಬಗ್ಗೆ.... "

" ಅಂದರೆ ...ನಿಮಗೆ ಟಿಕೀಟು ಸಿಕ್ಕೇ ಸಿಗ್ತದ ಅನ್ನಿರಿ. "

" ನನಗೆ ಸಿಗದೆ ಇನ್ಯಾರಿಗೆ ಸಿಗಬೇಕು ? ನೂರರಲ್ಲಿ ಹತ್ತರಷ್ಟು ಸೀಟುಗಳನ್ನಾದರೂ ಮಹಿಳೆಯರಿಗೆ ಕೊಡಬೇಕಂತ ಎ. ಐ. ಸಿ. ಸಿ. ಯ ಆದೇಶವೇ ಇದೆಯಲ್ಲ ? ಎಂ. ಪಿ. ಸಿ. ಸಿ. ಯವರೂ ಆ ಆದೇಶದಂತೆ ನಡಕೊಳ್ಳಬೇಕಾಗ್ತದ. ನಮ್ಮ ಜಿಲ್ಲೆಗೆ ಏನಿಲ್ಲೆಂದರೂ ನಾಲ್ಕು ಸೀಟು ಆದರೂ ಸ್ತ್ರೀಯರಿಗೆ ಕೊಡಬೇಕಾಗ್ತದ. ಅದರ ಪೈಕಿ ನನಗೊಂದು...."

" ತಾರಾ ಪಾಟೀಲರಿಗೊ ? "

ಮಾಲಾದೇವಿ ಮೂಗು ತಿರುವಿದಳು, ತುಟಿ ಉಬ್ಬಿಸಿದಳು. ತಾರಾ

ಪಾಟೀಲಳ ಬಗೆಗೆ ಈಕೆಯಲ್ಲಿ ಸದಭಿಪ್ರಾಯವಿರಲಿಲ್ಲವೆನ್ನುವುದನ್ನು ಅವಳ ಮುಖ ಸಾರಿ ಹೇಳುತ್ತಿತ್ತು.

" ತಾರಾ ಪಾಟೀಲ ! ತಾರಾ ಪಾಟೀಲ ! ಅವಳಿಗೂ ಟಿಕೀಟು ! ಅವಳೂ ಎಂ. ಎಲ್. ಎ. ಆಗತಕ್ಕವಳು ! ಏನು ಕಲಿತವಳೇ ? ಓದಿದವಳೇ ? ತಿಳು ಕೊಂಡವಳೇ ? ಭಾಷಣ ಮಾಡಬಲ್ಲವಳೇ ? ಕಾಂಗ್ರೆಸ್ ಸಂಘಟನೆ ಮಾಡ್ತ್ರ ವವಳೇ ? ಸೀಳಿದರೆ ಒಂದು ಅಕ್ಷರ ಬರದ ಅಂಧವಳೂ ಡೌಲು ಮಾಡುತ್ತ ದೊಡ್ಡ ಲೀಡರ್ ಸೋಗು ಹಾಕಿದಾಳೆ. ಏನೋ ಕಲ್ಲಪ್ಪನವರ ಕೃಪೆಯಿದೆ ಅಂತ ನಾಲ್ಕು ಜನರು ಮಾತಾಡಿಸ್ತಾರೆ. ಇಲ್ಲದಿದ್ದರೆ ಈ ಬೆಂಗಳೂರಿನಲ್ಲಿ ನಾಯಿ ಕೇಳು ತ್ತಿರಲಿಲ್ಲ ನಾಯಿ.... "

ನಾನು ದೇಶಾವರಿ ನಗು ಬೀರಿ,–"ಮಲ್ಲಿಕಾರ್ಜುನಪ್ಪನ ಕೃಪೆಯಿರದಿದ್ದರೆ ಇವಳನ್ನಾದರೂ ಯಾರು ಮಾತನಾಡಿಸುತ್ತಿದ್ದರು ?" ಎಂದು ಮನಸ್ಸಿನಲ್ಲಿಯೇ ಅಂದುಕೊಂಡು,

" ಅಂತೂ ನಿಮಗೆ ಚಾನ್ಸ್ ಇದೆಯಲ್ಲ ಮಾಲಾದೇವಿ ? Wish you good luck ! ಬಹಳ ಮಾಡಿ ನೀವು ಡೆಪ್ಯೂಟಿ ಮಿನಿಸ್ಟರೂ ಆಗಬಹುದಂತ ಕಾಣ್ತದ ..."

ಮಾಲಾದೇವಿಯ ಮುಖದ ಮೇಲೆ, ಕಣ್ಣುಗಳಲ್ಲಿ, ತುಟಿಗಳಲ್ಲಿ ಹರ್ಷದ ಹೊಳೆ ಹರಿದಾಡಿತು. ಹಣೆಯ ಮೇಲೆ ಬಂದಿದ್ದ ಮುಂಗುರುಳು ತಿದ್ದಿ ಕೊಳ್ಳುತ್ತ ಅವಳೆಂದಳು :

" ಮುಖಂಡರು ಮನಸು ಮಾಡಿದರೆ ಅದೂ ಆಗಬಹುದಲ್ಲ ? ನಾನೂ ಗ್ರಾಜುಯೇಟ್ ಇದೀನಿ. ಸಾಕಷ್ಟು ಅನುಭವ ಅದ. "

ಅವಳು ಮಾತನಾಡುತ್ತಿದ್ದಂತೆಯೆ ಒಳಗಿನಿಂದ ಮಲ್ಲಿಕಾರ್ಜುನಪ್ಪನ ಕರೆ ಕೇಳ ಬಂದಿತು.

"ಪ್ರೆಸಿಡೆಂಟರು ಕರೀತಾರೆ.ಹೋಗೋಣವೇ ರಮಾ? ಇನ್ನೂ ಚೀಫ್ ಮಿನಿ ಸ್ಟರನ್ನ ಭೆಟ್ಟಿಯಾಗಬೇಕು....ಸದಾಶ್ಶಿವಪ್ಪನವರನ್ನ ನೋಡಬೇಕು...well.. ನಮಸ್ತೆ, ಸದಾಶಿವರಾವ್ . ಮತ್ತೆ ಸಿಗ್ತೀರಲ್ಲ ? " ಎಂದು ಹೇಳಿ ತನ್ನ ಸೌಂದ ರ್ಯದ ಮಾಟಗಾರಿಕೆಯನ್ನೆಲ್ಲ ನನ್ನ ಮೇಲೆ ಪ್ರಯೋಗಿಸಿ ಮಾಲಾದೇವಿ ಹೊರಟು ಹೋದಳು. ಸ್ತಂಭೀಭೂತನಂತೆ ಕೆಲಹೊತ್ತು ನಾನು ಹಾಗೆಯೆ ನಿಂತು

ಕೊಂಡಿದ್ದೆ. ಮಾಲಾದೇವಿಗೆ ಟಿಕೇಟು ಸಿಕ್ಕುವುದು, ಅವಳು ಆರಿಸಿಬರುವುದು, ಉಪಮಂತ್ರಿಯಾಗುವುದು ತೀರಾ ಸುಲಭವೆಂದೇ ತೋರಿತು. ತನ್ನ ಲಾವಣ್ಯದ ಮಂತ್ರದಿಂದ ಅವಳು ಎಲ್ಲರನ್ನೂ ಮರುಳುಗೊಳಿಸುವುದು ಖಚಿತವೆಂದೇ ಅನ್ನಿಸಿತು, ಹೆಣ್ಣೆಂದರೆ ಬಾಯಿ ಬಿಡದ ಅಣ್ಣಗಳಾರು ? ಅಲ್ಲದೆ ಇಂಥ ಅಸಾಮಾನ್ಯ ಹೆಣ್ಣು ! ಮೇಲೆ ಪದವೀಧರೆ !

" ಏನ್ರಿ, ಏನು ನಡಸೀರಿ ಇಲ್ಲಿ ನಿಂತು ? "

ನಾನು ಥಟ್ಟನೆ ಹೊರಳಿ ನೋಡಿದರೆ ಮುದ್ದಪ್ಪ ಕಾಣಿಸಿಕೊಂಡ. ಆಗಲೂ ಅವನ ವೇಷದಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಎಂದಿನಂಥದೇ ಆದ ಕೊಳಕು ಅಂಗಿ, ಹೊಲಸು ದೋತರ, ಬಣ್ಣಗೆಟ್ಟ ಟೋಪಿ....

" ಅರ್ಜಿ ಕೊಟ್ಟಿರಾ ಮುದ್ದಪ್ಪ ? "

" ಇನ್ನೂ ಕೊಡಲಿಲ್ಲ. ವಿಚಾರ ನಡಸೀನಿ. "

" ಬೆಂಗಳೂರಿಗೆ ಬಂದದ್ದೇ ಅರ್ಜಿ ಕೊಡಲಿಕ್ಕೆ. ಅಲ್ಲಾ ? ಮತ್ತೇನು ವಿಚಾರ ನಡಸೂದು ? "

" ಮುಖಂಡರನ್ನೆಲ್ಲಾ ಭೆಟ್ಟಿಯಾಗಿ ನನಗೆ ಟಿಕೇಟು ಕೊಡ್ತಾರೋ ಇಲ್ಲೋ ಅಂತ ಕೇಳುತಾ ಇದೀನಿ. ಸುಮ್ಮನೆ ಯಾಕೆ ಎರಡು ನೂರು ರೂಪಾಯಿ ಅವರ ಹೆಣಕ್ಕ ಸುರಿಯೂದು ? ಅದೇ ಎರಡು ನೂರು ಇದ್ದರೆ ಹೆಂಡರುಮಕ್ಕಳಿಗೆ ಎರಡು ವರ್ಷ ಅರಿವೆ ಅಂಚಡಿ ಆಗುತಾವ. "

" ಸರಿ ಏನಂತಾರೆ ಮುಖಂಡರು ? "

" ಒಬ್ಬನಾದರೂ ಒಂದಾದರೂ ಭರವಸೆಯ ಮಾತು ಆಡಿದರೆ ದೇವರಾಣೆ ! ಅರ್ಜಿ ಹಾಕಲಿಕ್ಕೆ ಎಲ್ಲರಿಗೂ ಅಧಿಕಾರ ಅದ ಅಲ್ಲ ? ನೀವೂ ಹಾಕಲು ನಾವು ಬೇಡ ಅನ್ನುವದಿಲ್ಲ—ಅಂತ ಮುತ್ಸದ್ದಿತನದ ಮಾತಾಡುವವರೇ ಎಲ್ಲರೂ. "

" ಹಾಗಾದರೆ ಏನು ವಿಚಾರ ಮಾಡಿದೀರಿ ? "

" ಇನ್ನೂ ನಾಳೆಯು ವರೆಗೆ ಸಮಯ ಅದ ಅಲ್ಲ ? ಅಷ್ಟರೊಳಗಾಗಿ ಏನಾರ ನಿಶ್ಚಯಿಸಬೇಕು. ನಮ್ಮ ಗೆಳೆಯರಂತೂ ಅರ್ಜಿ ಕೊಟ್ಟೇ ಬರ್ರಿ ಅಂತ ಹೇಳಿಕಳಿಸ್ಯಾರ. ಈ ಏಳು ನೂರು ರೂಪಾಯಿಯೂ ಅವರೇ ವರ್ಗಣಿಮಾಡಿ ಕೂಡಿಸಿಕೊಟ್ಟದ್ದು. ಇಲ್ಲಿ ಬಂದು ನೋಡಿದರೆ ನಮ್ಮಂಥ ಬಡವರನ್ನ ಮಾತಾ

ಡಿಸುವವರೇ ಇಲ್ಲ. ಎಲ್ಲಾ ಸೂಟುಬೂಟಿನವರಿಗೇ ಮರ್ಯಾದೆ. ಮಿನಿಸ್ಟರುಗಳ ಬಂಗಲೆಯೊಳಗೂ ನಮ್ಮಂಥವರನ್ನ ಬಿಡುವದಿಲ್ಲ. ಮೋಟರುಕಾರಿನಲ್ಲಿ ಬರುವ ಸಾವುಕಾರರು ಮಾತ್ರ ಕಾವಲಿನ ಪೋಲೀಸರಿಂದ ಸಲಾಂ ತಗೋತಾರ. "

"ಅದಂತೂ ಇದ್ದದ್ದೇ ಬಿಡಿರಿ. ದುಡ್ಡಿದ್ದವನೇ ದೊಡ್ಡಪ್ಪ ಎಲ್ಲಾ ಕಡೆಗೂ, "

ಹಾಗೆ ಮಾತನಾಡುತ್ತ ನಾವು ಒಳಗಿನ ಭಾಗಕ್ಕೆ ಬಂದೆವು. ಅಧ್ಯಕ್ಷರ ಕೊಟಡಿಯೆದುರು ನಿಂತಿದ್ದ ರುದ್ರಗೌಡ ನಮ್ಮನ್ನು ನೋಡಿ ನಮ್ಮ ಬಳಿ ಬಂದ.

" ಪ್ರೆಸಿಡೆಂಟರು ಭೆಟ್ಟಿಯಾದರೇನ್ರಿ ಗೌಡರೆ ? "

" ಎಲ್ಲಿಯ ಭೆಟ್ಟಿ ಮಾರಾಯಾ ? ಅವರು ಒಳಗೆ ಇದ್ದಾರೋ ಇಲ್ಲೋ ಅನ್ನುವದು ಕೂಡಾ ತಿಳಿಯಲೊಲ್ಲದು. "

" ಹೋಗಿ ನೋಡಬೇಕಾಗಿತ್ತು ? "

" ಹೋಗಬೇಕೆಂದರೆ ಸಿಪಾಯಿ ಬಿಡಲೊಲ್ಲ. ಒಳಗೆ ಖಾಸಗೀ ಮೀಟಿಂಗ್ ನಡೆದಿದೆ ಅಂತಾನ. "

"ಇರಲೇಳ್ರಿ. ನಾಳೆ ಕುಮಾರಕೃಪಾದಲ್ಲಿ ನೋಡಿದರಾಯ್ತು. ಮುಂಜಾನೆ ಲಗೂ ಹೋಗಬೇಕು. ಅಂದರೆ ಭೆಟ್ಟಿಯಾಗಬಹುದು, " ಎಂದ ಮುದ್ದಪ್ಪ.

" ನೀವು ಭೆಟ್ಟಿಯಾಗಿದ್ದಿರಾ ? "

" ಎಲ್ಲಿಯ ಭೆಟ್ಟಿ ? ಮಧ್ಯಾಹ್ನ ಹೋಗಿದ್ದೆ ಕುಮಾರಕೃಪಾಕ್ಕೆ. ಅವರ ಕೋಣೆಯ ಮುಂದೆ ಎರಡುಮೂರುನೂರು ಜನ ಗುಂಪುಗೂಡಿದ್ದರು. ಒಬ್ಬರ ಹಿಂದೊಬ್ಬರಂತೆ ಹೋಗಿ ಬರುತ್ತಲೇ ಇದ್ದರು. ಅಧ್ಯಕ್ಷರಿಗೆ ಪಾಪ, ಸಾಕಾಗಿ ಹೋಗಿರಬೇಕು. ಇಂಥಾ ಗದ್ದಲದಾಗ ಅವರನ್ನ ನೋಡಿ ಉಪಯೋಗ ಇಲ್ಲಂತ ತಿಳಿದು ನಾಳೆ ನೋಡಿದರಾಯ್ತು ಅಂತ ಬಂದುಬಿಟ್ಟೆನಿ. "

" ನಾಳೆಯೂ ಈ ಗದ್ದಲ ಮುಗಿಯುವಂತೆ ಕಾಣುವದಿಲ್ಲ. "

" ನಾಳೆ ಆಗದಿದ್ದರೆ ಇನ್ನೊಂದು ವಾರ ಹೋಗಲಿ. ಅಲ್ಲಿಯತನಕಾ ಇಲ್ಲೇ ಇದ್ದು ಇವರನ್ನೆಲ್ಲಾ ಪರೀಕ್ಷೆ ಮಾಡೇ ಬರ್ತೀನಿ. ಹೆಂಗೂ ನಮ್ಮ ಮಿತ್ರ ಎಂ. ಎಲ್. ಎ. ಇದಾನ. ಊಟ–ತಿಂಡಿ ಎಲ್ಲಾ ನೋಡಿಕೊಳ್ತಾನ ನನಗಾ ವರೂ ಏನು ಖರ್ಚು ? "

ನಾವು ಮಾತನಾಡುತ್ತ ನಿಂತುಕೊಂಡಿದ್ದಂತೆಯೆ ನಮ್ಮ ಜಿಲ್ಲೆಯ ನಾಲ್ಕಾರು ಜನ ಕಾಂಗ್ರೆಸ್ ಪುಢಾರಿಗಳು ಕಾಣಿಸಿಕೊಂಡರು. ಎಲ್ಲರೂ ತಮ್ಮ ತಮ್ಮ ಅವಸರದಲ್ಲಿಯೆ ಇದ್ದರಾದುದರಿಂದ ಯಾರೂ ನಮ್ಮನ್ನು ಮಾತನಾಡಿಸ ಲಿಲ್ಲ.

ಕಾಂಗ್ರೆಸ್ ಭವನದಿಂದ ಹೊರಬಿದ್ದು ತುಸು ದೂರ ಹೋಗಿ ಒಂದು ಹೋಟಲಲ್ಲಿ ಕಾಫಿ ಸೇವಿಸಿದುದಾಯಿತು.

" ಏನು ಕಾರ್ಯಕ್ರಮ ಮುದ್ದಣ್ಣ? ಸಿನಿಮಾಕ್ಕೆ ಬರುತ್ತೀರೋ ? " ಎಂದ ರುದ್ರಗೌಡ.

" ಎಲ್ಲಿಯ ಸಿನಿಮಾರೀ ಗೌಡರೆ ? ನಾನಿನ್ನೂ ಒಬ್ಬರನ್ನ ನೋಡಬೇಕು. ನಿಮ್ಮಂತೆ ನಾನು ಚೈನಿ ಮಾಡಿದರೆ ನಡೆದೀತೇನು ? "

" ಯಾವಾಗಲೋ ಒಮ್ಮೆ ಮಾಡಿದರೆ ಏನಾಗ್ತದ ? ಬರ್ರಿ. ಒಂದು ಫಸ್ಟ್‌ಕ್ಲಾಸ್ ಸಿನಿಮಾ ನೋಡೋಣವಂತೆ. "

" ಊಹೂಂ. ನೀವು ಹೋಗಿಬರ್ರಿ. ನಾ ಮತ್ತೆ ಕಾಂಗ್ರೆಸ್ ಭವನಕ್ಕೆ ಹೋಗಬೇಕು. "

ಮುದ್ದಪ್ಪ ಹೊರಟುಹೋದ ಬಳಿಕ ಶಿವಲಿಂಗ ನನ್ನ ಕಡೆ ತಿರುಗಿ ಕೇಳಿದ:

" ಏನಂತಾರ ದೇಶಸೇವಿಕೆಯರು? ಬಹಳ ಹೊತ್ತು ಚರ್ಚಾ ನಡದಿತ್ತಲ್ಲ?"

" ಮಾಲಾದೇವಿ ಕರಕೊಂಡು ಬಂದಾರಂತೆ. ಅದೂ ಇದೂ ಹೇಳುತ್ತಿದ್ದರು. ವಿಶೇಷ ಏನಿಲ್ಲ. "

" ವಿಶೇಷ ಇದ್ದರೂ ನಮಗ್ಯಾಕೆ ಹೇಳೀರಿ! "

" ಹೇಳುವಂಥಾದ್ದು ಇದ್ದರೆ ಹೇಳುತಿದ್ದೆ. ಏನೂ ಇಲ್ಲದಿದ್ದರೆ ಏನು ಹೇಳೋದು ! "

ಶಿವಲಿಂಗ ಮೀಸೆಗಳಲ್ಲಿಯೆ ನಕ್ಕು ಸುಮ್ಮನಾದ. ಆಗ ರುದ್ರಗೌಡ ಮಾತ ನಾಡಿದ.

" ರಮಾ–ಮಾಲಾರ ಸಂಗಡ ನಿಮಗಿಷ್ಟು ಸಲಿಗೆ ಅಂತ ನನಗೆ ಗೊತ್ತಿರ ಲಿಲ್ಲ ಬಿಡಿರಿ. ನಮಗೂ ಸ್ವಲ್ಪ ಸಲಿಗೆ ಮಾಡಿಕೊಡಿರಲ್ಲ ? "

" ಎಲ್ಲಿಯ ಸಲಿಗೆ ಗೌಡರೆ ? ಮಾಲಾದೇವಿಯನ್ನಂತೂ ನಾನು ಇವತ್ತೇ ನೋಡಿದ್ದು. ರಮಾಳನ್ನು ಹಿಂದೆ ಒಮ್ಮೆ ನೋಡಿದ್ದೆ. ಅಷ್ಟೆ."

" ಇಷ್ಟರಿಂದಲೇ ಇಷ್ಟು ಸಲಿಗೆ ಹೇಗಾಗ್ತದ ? ನಮ್ಮ ಹತ್ತರ ಯಾಕೆ ಸುಳ್ಳಾಡ್ತೀರಿ ? ಅವರ ಸಂಗಡ ನೀವು ಮಜಾ ಮಾಡಿದರೂ ನಾವೇನು ಬೇಡ ಅನ್ನುವದಿಲ್ಲ. ನಮಗೂ ಅಷ್ಟು ಚಾನ್ಸ್ ಕೊಡಿಸಿರಿ ಅಂತೀವಿ. ಇಷ್ಟೆ "

ರುದ್ರಗೌಡನ ಮಾತಿನ ಸರಣಿಯಿಂದ ನನಗೆ ಕೋಪವೇರಿದಂತಾಯಿತು. ಈ ಮನುಷ್ಯ ಇಷ್ಟು ಚಿಲ್ಲರೆ ಇರಬಹುದೆಂದು ನನಗನ್ನಿಸಿರಲಿಲ್ಲ. ಈಗ ಅವನ ನಿಜಸ್ವರೂಪದ ದರ್ಶನವಾಗುತ್ತಲೂ ತುಂಬಾ ಬೇಸರವುಂಟಾಯಿತು.

ಸಿನಿಮಾ ನೋಡಲು ನನಗೇನು ಇಚ್ಛೆಯಿರಲಿಲ್ಲ. ಆದರೆ ನನ್ನನ್ನು ಬೆಂಗಳೂರಿಗೆ ಕರೆದುತಂದ ರುದ್ರಗೌಡನನ್ನು ಬಿಟ್ಟು ಒಬ್ಬನೇ ತಿರುಗುವುದೂ ಒಳ್ಳೆಯದೆನಿಸುವಂತಿರಲಿಲ್ಲ. ಎಂತಲೇ ಅವರ ಜೊತೆಯಲ್ಲಿ ಯಾವುದೋ ಒಂದು ಕನ್ನಡ ಸಿನಿಮಾ ನೋಡಬೇಕಾಯಿತು. ಅದೊಂದು ಜಾನಪದ ಕಥೆಯಂತೆ. ಮೂರು ಗಂಟೆಗಳ ವರೆಗೆ ಆಕಳಿಸುತ್ತ ಕುಳಿತಿರಬೇಕಾಯಿತು. ಎದೆ ಕುಣಿಸಿ ನರ್ತಿಸುವ ನರ್ತಕಿಯರನ್ನು ನೋಡುತ್ತ ರುದ್ರಗೌಡ–ಶಿವಲಿಂಗರು ತಲೆದೂಗುತ್ತಿದ್ದರು. ನನಗೆ ಮಾತ್ರ ಆ ಕೀಳು ನರ್ತನದಿಂದ ವಾಂತಿಯಾಗುವಂತಾಯಿತು.

ಸಿನಿಮಾ ಮುಗಿದ ತರುವಾಯ ಯಾವುದೋ ಹೋಟಲಿನಲ್ಲಿ ಊಟವಾಯಿತು. ಅನಂತರ ಟ್ಯಾಕ್ಸಿಯಲ್ಲಿ ಛತ್ರಕ್ಕೆ ಒಂದೆವು. ರುದ್ರಗೌಡನೂ ಶಿವಲಿಂಗನೂ ಮತ್ತೆ ತಮ್ಮ ಗೆಳತಿಯರ ಕೋಣೆ ಹೊಕ್ಕರು. ಹತ್ತನೆಯ ನಂಬರಿನ ಕೊಟಡಿಯಲ್ಲಿ ತಿಗಣೆಗಳಿಂದಲೂ ಸೊಳ್ಳೆಗಳಿಂದಲೂ ಕಡಿಸಿಕೊಳ್ಳುತ್ತ ಆ ಛತ್ರವನ್ನೂ ಅದರ ವ್ಯವಸ್ಥಾಪಕರನ್ನೂ ಶಪಿಸುತ್ತ ನಾನೊಬ್ಬನೇ ಬಿದ್ದುಕೊಂಡೆ. ರಾತ್ರೆಯಿಡೀ ನಿದ್ದೆ ಬರಲಿಲ್ಲವೆಂದು ಹೇಳಬೇಕಾಗಿಯೆ ಇಲ್ಲ. ಆಗಾಗ ರಾಧೆಯ ಮೂರ್ತಿ ಕಣ್ಣೆದುರು ಸುಳಿದಂತಾಗುತ್ತಿತ್ತು. ಒಂದೆರಡು ಬಾರಿ ರಮಾ–ಮಾಲಾ ನೆನಪೂ ಬಾರದಿರಲಿಲ್ಲ. ರಮೆಯ ಸ್ನೇಹ ಬೆಳಸಿದರೆ ಏನಾಗಬಹುದು ? ಎಂದೂ ಸ್ವಲ್ಪ ಹೊತ್ತು ಯೋಚಿಸಿದೆ.

# ೧೨

ಮಾರನೆಯ ದಿನ ರುದ್ರಗೌಡ–ಶಿವಲಿಂಗರು ನಮ್ಮ ಕೊಟಡಿಗೆ ಬರುವು ದಕ್ಕೇ ಒಂಭತ್ತು ಗಂಟೆಯಾಯಿತು. ಅಷ್ಟರೊಳಗಾಗಿ ನಾನು ಸ್ನಾನ ತೀರಿಸಿ ಕೊಂಡು ಬಟ್ಟೆ ಧರಿಸಿ, ಹೊರಗೆ ಹೊರಡಲು ಸಿದ್ಧವಾಗಿದ್ದೆ. ಅವರಿಗಾಗಿ ಕಾದು ಕಾದು ಬೇಸರವಾಗಿ ಹೋಗಿತ್ತು. ಅವರನ್ನು ಅಲ್ಲಿಯೇ ಬಿಟ್ಟು ಹೊರ ಡುವಂತೆಯೂ ಇರಲಿಲ್ಲವಲ್ಲ ? ನನ್ನ ಕೆಲಸವಾದರೂ ಏನಿತ್ತು ಆ ನಗರದಲ್ಲಿ ? ನಿಜ. ಆ ಮಹಾನಗರದಲ್ಲೆಲ್ಲ ಸುತ್ತಿ ನೋಡಬೇಕಾದ ಸ್ಥಳಗಳನ್ನು ನೋಡ ಬಹುದಾಗಿತ್ತು. ಆದರೆ ನಾನು ಬಂದದ್ದು ರುದ್ರಗೌಡನ ಜೊತೆಗೆ–ಅವನ ಕೆಲಸಕ್ಕಾಗಿ–ಎಂಬುದನ್ನು ಮರೆಯುವಂತಿರಲಿಲ್ಲ.

ನಾವು ಕಾಂಗ್ರೆಸ್ ಭವನಕ್ಕೆ ಬಂದಾಗ ನಿನ್ನೆನಕಿಂತಲೂ ಹೆಚ್ಚು ಜನಸಂದಣಿ ಅಲ್ಲಿ ನೆರೆದಿದ್ದುದು ಕಾಣಿಸಿತು. ರುದ್ರಗೌಡ-ಶಿವಲಿಂಗ ಮಹಡಿಗೆ ಹೋದರು. ನಾನು ಮಾತ್ರ ಅಂಗಳದಲ್ಲಿನ ಶಿಲಾಸನವೊಂದರ ಮೇಲೆ ಕುಳಿತುಕೊಂಡು ಸುತ್ತ ಲಿನ ಚಟುವಟಿಕೆಗಳನ್ನೆಲ್ಲ ವೀಕ್ಷಿಸುತ್ತಿದ್ದೆ. ಕೊಂಚ ಹೊತ್ತಿನಲ್ಲಿಯೇ ಜಿಲ್ಲಾ ಕಾಂಗ್ರೆಸ್ ಸಮಿತಿಯ ಜೀಪಿನಲ್ಲಿ ತಾರಾ ಪಾಟೀಲ ಮತ್ತು ಕಲ್ಲಪ್ಪ ಬಂದರು. ಆ ಜೋಡಿಯನ್ನು ನೋಡಿ ಕೆಲವರು ಪಿಸುಮಾತನಾಡಿಕೊಂಡು ನಕ್ಕರು. ಕಲ್ಲಪ್ಪ ಜೀಪಿನಿಂದಿಳಿದು ಸುತ್ತಲಿನ ಜನರನ್ನು ಗೃಹಮಂತ್ರಿಯಂಥ ದರ್ಪದಿಂದ ದಿಟ್ಟಿ ಸುತ್ತ ಮಹಡಿಗೆ ನಡೆದ. ತಾರಾದೇವಿಯಾದರೋ ಯಾರ ಕಡೆಗೂ ದೃಷ್ಟಿ ತಿರುಗಿಸದೆ ಬಿಂಕದಿಂದ ಅಡಿಯಿಡುತ್ತ ಮಹಿಳಾವಿಭಾಗದ ಕಾರ್ಯಾಲಯಕ್ಕೆ ನುಗ್ಗಿದಳು.

ಹತ್ತು ಹದಿನೈದು ನಿಮಿಷಗಳಲ್ಲಿಯೆ ಶಿವಲಿಂಗ ರುದ್ರಗೌಡರು ಮಹಡಿ ಯಿಂದ ಬಂದರು.

" ಅಧ್ಯಕ್ಷರಿನ್ನೂ ಬಂದಿಲ್ಲವಂತೆ. ಕುಮಾರಕೃಪಾಕ್ಕೇ ಹೋಗಿ ಬರೋಣ," ಎಂದ ರುದ್ರಗೌಡ.

ನಮ್ಮಂತೆಯೇ ಅನೇಕ ಖಾದೀಧಾರಿಗಳು ಅತ್ತ ಕಡೆಗೇ ನಡೆದಿದ್ದರು. ಕೆಲವರು ಜೀಪುಗಳಲ್ಲಿ, ಕೆಲವರು ಕಾರುಗಳಲ್ಲಿ, ಕೆವಲರು ಟ್ಯಾಕ್ಸಿಗಳಲ್ಲಿ.

" ಅದೇನು ಅಷ್ಟು ದೂರವಿಲ್ಲ. ನಡೆದುಕೊಂಡೇ ಹೋಗೋಣವೇ?" ಎಂದ ರುದ್ರಗೌಡ.

" ನಡೀರಲ್ಲ ? "

ನಾವು ರೇಸ್‌ಕೋರ್ಸ್ ರಸ್ತೆಯಲ್ಲಿ ನಡೆದಿದ್ದಂತೆ ಹಿಂದಿನಿಂದ ಒಂದು ಜೀಪು ಭುರ್‍ರೆಂದು ಬಂದಿತು. ಅದಕ್ಕೆ ದಾರಿ ಬಿಡಲು ನಾನು ಕೊಂಚ ಸರಿದಾಗ ಜೀಪಿನಲ್ಲಿದ್ದ ಮಲ್ಲಿಕಾರ್ಜುನಪ್ಪ, ಮಾಲಾದೇವಿ, ರಮಾ ಕಾಣಿಸಿದರು. ರಮಾ ನನ್ನನ್ನು ನೋಡಿ ಮುಗುಳು ನಗೆ ಬೀರಿದಳು. ಮಾಲಾ ಮಾತ್ರ ನನ್ನತ್ತ ಹೊರಳಲಿಲ್ಲ.

" ಇವರೂ ಅತ್ತಲೇ ನಡೆದಂಗ ಕಾಣ್ತದ, " ಎಂದ ರುದ್ರಗೌಡ.

" ಎಲ್ಲರೂ ಹೋಗೋದು ಈಗ ದೇವರ ಗುಡಿಗೇ, " ಎಂದು ಹೇಳಿ ಶಿವಲಿಂಗ ಗಹಗಹಿಸಿ ನಕ್ಕ.

ವಿಸ್ತಾರವಾದ ಬಯಲಿನ ನಟ್ಟ ನಡುವೆ, ಸುಂದರವಾದ ಗಿಡಗಳಿಂದಲೂ ಉದ್ಯಾನದಿಂದಲೂ ಸುತ್ತುವರಿಯಲ್ಪಟ್ಟು ಅರಮನೆಯಂತೆ ಕಂಗೊಳಿಸುತ್ತಿದ್ದ 'ಕುಮಾರಕೃಪಾ' ಕಟ್ಟಡವನ್ನು ಮೊದಲು ಬಾರಿಗೆ ನಾನು ನೋಡುತ್ತಿದ್ದೆ. ಅದನ್ನು ಕಂಡು ನನ್ನ ಮುಖದಿಂದ ವಿಷಾದ ಬೆರೆತ ನಿಟ್ಟುಸಿರೊಂದು ಹೊರ ಹೊರಟಿತೆಂದು ಮಾತ್ರ ಹೇಳದಿರಲಾರೆ. ಭಾರತ ದೇಶದ ಕೋಟ್ಯಂತರ ರೈತ ಕೂಲಿಕಾರರ ಮುರುಕು ಗುಡಿಸಲುಗಳು ನನ್ನ ಬಗೆಗಣ್ಣಿನೆದುರು ಸುಳಿದು ಹೋದುವು. ಆ ದರಿದ್ರ ಜನರ ಪ್ರತಿನಿಧಿಗಳಾಗಿರುವ ಕಾಂಗ್ರೆಸ್ ಮುಖಂಡರು ವಾಸಿಸುವುದು ಇಂಥ ಅರಮನೆಗಳಂಥ ಭವನಗಳಲ್ಲಿ ! ಎಂದು ನಾನು ಖಿನ್ನನಾದೆ.

ಕಟ್ಟಡದೆದುರಿನ ಅಂಗಳವೆಲ್ಲ ಕಾರು—ಜೀಪು—ಟ್ಯಾಕ್ಸಿಗಳಿಂದ ತುಂಬಿ ಹೋಗಿತ್ತು. ವರಾಂಡದಲ್ಲಿ ನೂರಾರು ಜನರು ನೆರೆದು, ಕಟ್ಟಡದ ಹೊರ ಭಾಗದಲ್ಲಿಯೆ ಇದ್ದ ಕೊಟಡಿಯ ಕಡೆಗೆ ಆಶೆಯಿಂದ ದಿಟ್ಟಿಸುತ್ತಲಿದ್ದರು. ಅಧ್ಯಕ್ಷರ ಬಿಡಾರ ಆ ಕೊಟಡಿಯಲ್ಲಿಯೆ ಇದ್ದುದು ಸ್ಪಷ್ಟವಿತ್ತು.

ಒಂದು ವಿಷಯವನ್ನು ಮಾತ್ರ ನಾನು ಮೆಚ್ಚಿಕೊಳ್ಳದಿರಲಿಲ್ಲ. ಅಧ್ಯಕ್ಷರ ಕೊಟಡಿಯೆದುರು ಸಿಪಾಯಿಯಾಗಲಿ, ಸೇವಕನಾಗಲಿ ಕಾಣಿಸುತ್ತಿರಲಿಲ್ಲ, ಅವರ ಕೊಟಡಿಯ ಬಾಗಿಲೂ ಮುಚ್ಚಿಕೊಂಡಿರಲಿಲ್ಲ ಅದರ ಒಂದು ಫಲಕ ಯಾವಾಗಲೂ ತೆರೆದೇ ಇರುತ್ತಿತ್ತು. ಜನ ಒಳಗೆ ನುಗ್ಗುತ್ತಿದ್ದರು, ಬರುತ್ತಿದ್ದರು. ಒಂದೊಂದು ಬಾರಿಗೆ ಮೂರು ನಾಲ್ಕು ಜನರೂ ಒಮ್ಮೆಲೆ ಒಳಗೆ ಪ್ರವೇಶಿಸುತ್ತಿದ್ದರು. ಚೀಟಿ ಕಳಿಸುವ ಆಡಂಬರವಿಲ್ಲ. ಅಪ್ಪಣೆ ಪಡೆಯುವ ನಿಯಮವಿಲ್ಲ. ದೇವರ ಗುಡಿಗೆ ಹೋಗಲು ಮುಕ್ತವಿರುವ ಹಾಗೆಯೇ ಈ ಅಧ್ಯಕ್ಷ ಮಹಾಶಯರ ಕೊಟಡಿಯಲ್ಲೂ ಎಲ್ಲರಿಗೂ ಯಾವಾಗಲೂ ಸ್ವಾಗತವಿರುತ್ತಿತ್ತು.

ಒಂದು ಗಂಟೆಯ ಕಾಲ ಕಾದು ನಿಂತ ಮೇಲೆ ನಮ್ಮ ಸರದಿ ಬಂದಿತು. ರುದ್ರಗೌಡ ಉದ್ಯಾನದಲ್ಲಿ ಶತಪಥ ಹಾಕುತ್ತಿದ್ದ. ಶಿವಲಿಂಗ ಮತ್ತು ನಾನು ಇಬ್ಬರೇ ಅಧ್ಯಕ್ಷರನ್ನು ನೋಡುವುದೆಂದು ನಿಶ್ಚಿತವಾಗಿತ್ತು. ಅವರಿಗೆ ಹೇಳಬೇಕಾದ ಸಂಗತಿಗಳನ್ನು ಕುರಿತೂ ಮೊದಲೇ ಚರ್ಚಿಸಿದ್ದೆವು.

ಕೊಟಡಿಯಲ್ಲಿ ಅಡಿಯಿರಿಸಿದೊಡನೆ ಮೊದಲು ನನ್ನ ಗಮನ ಸೆಳೆದದ್ದು ಅಲ್ಲಿನ ಬೆಳಕು. ಪೂರ್ವದಿಕ್ಕಿನಲ್ಲಿನ ದೊಡ್ಡ ಕಿಟಕಿಯಿಂದ ಸುರಿಯುತ್ತಿದ್ದ ಬೆಳಗಿನ ಸೂರ್ಯನ ಬೆಳಕು ಆ ವಿಶಾಲವಾದ ಕೊಟಡಿಯ ತುಂಬಾ ಒಂದು ಬಗೆಯ ದಿವ್ಯ ವಾತಾವರಣ ನಿರ್ಮಿಸಿತ್ತು. ಶುಭ್ರವಾದ ಹಾಸುಗೆಯನ್ನೊಳಗೊಂಡ ಒಂದು ಮಂಚ. ಒಂದೆರಡು ಸೋಫಾಗಳು, ಕೆಲವು ಕುರ್ಚಿಗಳು, ಹಲವು ಪುಸ್ತಕಗಳು, ಕಾಗದಗಳು. ಉತ್ತರದ ಬಾಗಿಲ ಬಳಿ ಅಧ್ಯಕ್ಷರು ಕುಳಿತುಕೊಂಡಿದ್ದರು. ಅವರ ಒಂದು ಕಾಲು ಎದುರಿನ ಕುರ್ಚಿಯ ಮೇಲಿತ್ತು. ಯುವಕನೊಬ್ಬ ಆ ಕಾಲಿಗೆ ಎಣ್ಣೆ ಹಚ್ಚಿ ತಿಕ್ಕುತ್ತಿದ್ದ. ಅವರ ಪಾದಕ್ಕೆ ಏನೋ ನೋವಾಗಿರಬೇಕು. ಅಧ್ಯಕ್ಷರು ಆಗಾಗ ಮೊಳಕಾಲ ಮೇಲೆ ಕೈ ಆಡಿಸುತ್ತ ಮುಗುಳುನಗು ತುಳುಕಿಸುತ್ತ ಕುಳಿತಿದ್ದರು, ಅವರ ಪಕ್ಕದಲ್ಲಿನ ಕುರ್ಚಿಯ ಮೇಲೆ ಕುಳಿತುಕೊಂಡು, ಬಂದ ಜನರು ಮಾತನಾಡುತ್ತಿದ್ದರು.

ಆ ಕುರ್ಚಿ ತೆರವಾಗುತ್ತಲೂ ಅಧ್ಯಕ್ಷರು ನಗುನಗುತ್ತ ನಮ್ಮ ಕಡೆಗೆ ನೋಡಿದರು.

" ಬನ್ನಿ, ಕೂತುಕೊಳ್ಳಿ. ಏನಾದರೂ ಹೇಳುವುದಿತ್ತೊ ? " ಎಂದರು. ಅವರ ಮುಗುಳುನಗೆಯಂತೆ ಅವರ ಧ್ವನಿಯೂ ಅತ್ಯಂತ ಮೋಹಕವಾಗಿತ್ತು. ಇವರು ರಾಜಕಾರಣಿಯಾಗಿರದಿದ್ದರೆ ಒಳ್ಳೆಯ ಸಂಗೀತಗಾರರಾಗಬಹುದಿತ್ತೆಂದು ನನಗನ್ನಿಸದಿರಲಿಲ್ಲ. ಮಾಧುರ್ಯ ತುಂಬಿದ ಗಂಭೀರವಾದ ಧ್ವನಿ. ದುಂಬಿಯ ಧ್ವನಿಯಂಥ ನಾದ.

ಶಿವಲಿಂಗ ತಡವರಿಸುತ್ತ ಅವರನ್ನು ಸಮೀಪಿಸಿ,

"ರುದ್ರಗೌಡ ಪಾಟೀಲರ ಬಗ್ಗೆ ವಿನಂತಿ ಮಾಡಿಕೊಳ್ಳಲಿಕ್ಕೆ ಬಂದೀವ್ರಿ." ಎಂದ.

" ಹೀಗೇನು ? ಸಂತೋಷ. ಕೂತುಕೊಳ್ಳಿರಲ್ಲ ? "

ಆತ ಅಂಜುತ್ತಂಜುತ್ತಲೇ ಕುಳಿತುಕೊಂಡ. ದೂರದಲ್ಲಿಯೆ ಇದ್ದ ನನ್ನನ್ನೂ ಕರೆದು, ಕೂತಿರಲು ಹೇಳಿದರು ಅಧ್ಯಕ್ಷರು.

" ಯಾವ ಜಿಲ್ಲೆ ? "

" ಮಾದಾಪುರ. "

" ಸರಿ. ತುಂಬಾ ಸಂತೋಷ. ರುದ್ರಗೌಡರೂ ಅರ್ಜಿ ಹಾಕಿದಾರೇನು ? "

" ಹೌದ್ರೀ. "

" ಅವರು ನಿಮಗೆ ಏನಾಗಬೇಕು ? "

" ಏನಿಲ್ಲರಿ. ನಾವು ಅವರ ಶಿಷ್ಯರು, ಕಾರ್ಯಕರ್ತರು. "

" ಸರಿ ಸರಿ. ಅರ್ಜಿ ಹಾಕಿದಾರಲ್ಲ.... ನೋಡೋಣ ... "

" ಅವರೊಬ್ಬರೇ ಹಾಕಿಲ್ಲರಿ. ಇನ್ನೂ ನಾಕೈದು ಮಂದಿ ಇದಾರ. "

" ನಾಕೈದು ಮಂದಿ ? ಯಾರ್‍ಯಾರು ? "

" ಬಸೆಟ್ಟಿಯವರು. .... "

" ಓ... ಅವರೂ ಹಾಕಿದಾರೋ ? "

ಆಗ ನಾನು ಮುಂದಾಗಿ ಬಸೆಟ್ಟಿಯ ಬಗೆಗೆ ನನಗೆ ಗೊತ್ತಿದ್ದುದೆಲ್ಲವನ್ನೂ ದಡಬಡನೆ ಹೇಳಿದೆ. ನಾನು ಮುಗಿಸುವವರೆಗೂ ಶಾಂತವಾಗಿ ಕೇಳುತ್ತಿದ್ದು ಆನಂತರ ತಲೆಯೆತ್ತಿ ಅಧ್ಯಕ್ಷರೆಂದರು :

" ನೀವು ಹೇಳಿದ್ದೆಲ್ಲ ನೆನಪಿಟ್ಟುಕೊಳ್ಳುತ್ತೇನೆ. ಮತ್ತೇನಾದರೂ ಹೇಳುವ ದಿದೆಯೋ ? "

" ರುದ್ರಗೌಡರು ಜನಸಾಮಾನ್ಯರ ಪ್ರತಿನಿಧಿ. ಬಸೆಟ್ಟಿಯವರಾದರೋ ಜನರನ್ನ ಸುಲಿದು ತಿನ್ನುವ ವ್ಯಾಪಾರಿ. ರುದ್ರಗೌಡರಿಗೆ ಟಿಕೀಟು ಕೊಡುವದೇ ನ್ಯಾಯ. "

ನಾನು ಹೇಳುತ್ತಿದ್ದಂತೆಯೇ ಮಲ್ಲಿಕಾರ್ಜುನಪ್ಪ–ಮಾಲಾದೇವಿ ಕೊಟಡಿಯಲ್ಲಿ ಅಡಿಯಿರಿಸಿದರು.

" ಬನ್ನಿ ಬನ್ನಿ, " ಎಂದು ಅವರನ್ನು ಸ್ವಾಗತಿಸಿ ಅಧ್ಯಕ್ಷರು ನನ್ನನ್ನು ಕುರಿತು ಹೇಳಿದರು :

" ನಿಮ್ಮ ಜಿಲ್ಲೆಯೆಲ್ಲಾ ಇಲ್ಲೇ ಸೇರಿದಂತಾಯಿತಲ್ಲ ? ಇವರು ನಿಮಗೆ ಗೊತ್ತಿರಬೇಕಲ್ಲ ಮಲ್ಲಿಕಾರ್ಜುನಪ್ಪನವರೇ ? "

ಮಲ್ಲಿಕಾರ್ಜುನಪ್ಪ ನನ್ನ ಕಡೆಗೊಂದು ತಾತ್ಸಾರದ ದೃಷ್ಟಿ ಬೀರಿ,

" ಒಂದೆರಡು ಸಲ ನೋಡೀನ್ರಿ, " ಎಂದು ಹೇಳಿದ.

" ಇವರನ್ನು ? "

" ಇವರ್‍ಯಾರೋ ನನಗೆ ಗೊತ್ತಿಲ್ಲ, " ಎಂದ ಮಲ್ಲಿಕಾರ್ಜುನಪ್ಪ, ಶಿವಲಿಂಗನನ್ನು ಕುರಿತು.

ಶಿವಲಿಂಗನಿಗೆ ಅಪಮಾನವಾದಂತಾಯಿತು. ಅವನು ಕೆರಳಿ ಉತ್ತರವಿತ್ತ :

" ನಮ್ಮಂಥಾ ಕಾರ್ಯಕರ್ತರದು ಹ್ಯಾಗೆ ಗೊತ್ತಾಗಬೇಕು ನಿಮಗೆ ? ನಿಮಗೆ ಗೊತ್ತಾಗೂದು ಬ್ಲಾಕ್‌ಮಾರ್ಕೆಟ್ ಭಂಡರಷ್ಟೇ...."

ಮಲ್ಲಿಕಾರ್ಜುನಪ್ಪ ಸಹಜವಾಗಿಯೆ ಕಿಡಿಕಿಡಿಯಾದ. ಆದರೆ ಅಧ್ಯಕ್ಷರೆದುರು ಅವನೇನನ್ನೂ ಮಾಡುವಂತಿರಲಿಲ್ಲ. ಎಂತಲೇ, ತುಟಿ ಕಚ್ಚಿ ಕೋಪವನ್ನು ಅದುಮಿಕೊಂಡು ಸೋಫಾದಲ್ಲಿ ಕುಕ್ಕರಿಸಿದ.

ಮತ್ತೆ ನಾವು ಅಲ್ಲಿ ಕುಳಿತಿರುವಂತಿರಲಿಲ್ಲ. ಅಧ್ಯಕ್ಷರಿಗೆ ನಮಸ್ಕಾರ ಮಾಡಿ ಕೊಟಡಿಯಿಂದ ಹೊರಬಂದೆವು.

ವರಾಂಡದಲ್ಲಿನ ಬೆತ್ತದ ಕುರ್ಚಿಯಲ್ಲಿ ಕುಳಿತಿದ್ದ ರಮಾ ಎದ್ದು ನನ್ನ ಬಳಿ ಬಂದಳು.

" ದೇವಿಯವರ ಸಂಗಡ ನೀವೂ ಯಾಕೆ ಒಳಗೆ ಹೋಗಲಿಲ್ಲ ? "

" ಅವರದೇನೋ ಖಾಸಗಿ ಇರಬೇಕು. ನನ್ನನ್ನವರು ಕರೀಲಿಲ್ಲ. "

" ಮತ್ತೇನಿರೋದು ಖಾಸಗಿ ? ಅದೇ ಅಲ್ಲ, ಟಿಕೀಟಿನ ಬೇಟೆ. "

ಅವಳು ನಕ್ಕು ಸುಮ್ಮನಾದಳು.

" ಇನ್ನೂ ಎಷ್ಟು ದಿನ ಇರೋದು ? "

" ಮಾಲಾದೇವಿ ಏನು ಮಾಡ್ತಾರೋ ಗೊತ್ತಿಲ್ಲ. ನಾನು ಮಾತ್ರ ಹೊರಟು ಬಿಡಬೇಕಂತ ಮಾಡಿದೀನಿ. "

" ಬೇಸರವಾಯಿತೇ ?"

" ಆಗದಿರ್ತದೇನು ? ಇಲ್ಲೇನು ಕೆಲಸವಿಲ್ಲ ಏನಿಲ್ಲ. ಸುಮ್ಮನೆ ಆಕೆಯ ಸಂಗಡ ತಿರುಗೂದು. ಅಲ್ಲದೆ ಯಾವಾಗಲೂ ಆ ಮಲ್ಲಿಕಾರ್ಜುನಪ್ಪ ಬೇರೆ. "

" ನಾನೂ ಹೊರಡಬೇಕಂತ ಮಾಡೀನಿ ಇವತ್ತು. "

" ನಿಮ್ಮ ಗೆಳೆಯರು ? "

" ಅವರು ಹೊರಟರೂ ಸರಿ, ಹೊರಡದಿದ್ದರೂ ಸರಿ. "

" ಯಾವ ಗಾಡಿಗೆ ? ನಾನೂ ಬರಬಹುದಲ್ಲ ನಿಮ್ಮ ಸಂಗಡ ? "

" ಅವಶ್ಯವಾಗಿ ಬರ್ರಿ "

ಶಿವಲಿಂಗ ರುದ್ರಗೌಡನ ಕಡೆಗೆ ಹೋಗಿದ್ದ. ನಾನು ರಮಾ ಮಾತ ನಾಡುತ್ತ ಅಂಗಳಕ್ಕಿಳಿದು ಬಂದೆವು.

" ಏನಂದರು ಅಧ್ಯಕ್ಷರು ? ಗೌಡರಿಗೆ ಟಿಕೀಟು ಕೊಡ್ತಾರಂತೇನು ? "

" ಹಾಗೆಲ್ಲಾ ಹೇಳಿಯಾರೆ ರಮಾ ? ನೋಡೋಣ ಅಂದರು ಅಷ್ಟೆ. "

" ಅವರು ಹೇಳೋದು ಎಲ್ಲರಿಗೂ ಅದೊಂದೇ—ನೋಡೋಣ.... ನೋಡೋಣ.... " ಎಂದಳು ರಮಾ.

" ಅವರಾದರೂ ಏನು ಮಾಡಿಯಾರು ರಮಾ ? ಒಂದೊಂದು ಕ್ಷೇತ್ರಕ್ಕೆ ಏಳೆಂಟು ಮಂದಿ ಅರ್ಜಿ ಕೊಟ್ಟಿರ್ತಾರ. ಎಲ್ಲರೂ ಕಾಂಗ್ರೆಸಿಗರೇ. ಎಲ್ಲರೂ ಅಧ್ಯಕ್ಷರಿಗೆ ಬೇಕಾದವರೇ. ಯಾರಿಗೂ ಆಶ್ವಾಸನ ಕೊಡಲು ಬರೂದಿಲ್ಲವಲ್ಲ? ಯಾರ ಮನಸ್ಸು ಯಾಕೆ ನೋಯಿಸಬೇಕು ಅಂತ ಹಾಗೆ ಹೇಳ್ತಿರಬೇಕು. "

ಮಲ್ಲಿಕಾರ್ಜುನಪ್ಪ—ಮಾಲಾದೇವಿ ಅಧ್ಯಕ್ಷರ ಕೊಟಡಿಯಿಂದ ಹೊರ ಬಂದು ಜೀಪ್ ಹತ್ತಿದರು. ಸಾಯಂಕಾಲ ಕಾಂಗ್ರೆಸ್‌ಭವನದ ಹತ್ತಿರ ಸಿಕ್ಕುವು ವಾಗಿ ಹೇಳಿ ರಮಾ ಅವರೊಡನೆ ಹೊರಟು ಹೋದಳು.

ಹೂವಿನ ಗಿಡಗಳ ಹತ್ತಿರ ಅಲೆಯುತ್ತಿದ್ದ ರುದ್ರಗೌಡ ನನ್ನ ಹತ್ತಿರ ಬಂದು ಹೇಳಿದ :

"ಚುನಾವಣಾ ಸಮಿತಿಯ ಬೇರೆ ಮೆಂಬರುಗಳನ್ನೂ ನೋಡಿದರೆ ಚಲೋದು ಸದಾಶಿವ. ನೀವು-ಶಿವಲಿಂಗ ಇಬ್ಬರೂ ಹೋಗಿ ನೋಡಿ ಬರ್ತೀರಾ?"

ಒಂದು ಟ್ಯಾಕ್ಸಿ ಮಾಡಿಕೊಂಡು ಬೆಂಗಳೂರಿನ ಬೇರೆ ಬೇರೆ ಭಾಗಗಳಲ್ಲಿ ಅಲೆದು ಎಲ್ಲ ಸದಸ್ಯರನ್ನೂ ನೋಡಿದುದಾಯಿತು. ಪ್ರತಿಯೊಂದು ಕಡೆಗೂ ಹುರಿಯಾಳುಗಳ, ಅವರ ಬೆಂಬಲಿಗರ ಗಲಾಟೆಯೋ ಇತ್ತು. ಸದಸ್ಯರನ್ನು ನೋಡುವುದಕ್ಕಾಗಿ ಕೆಲವು ಕಡೆ ಸಾಲು ಹಿಡಿದು ನಿಲ್ಲಬೇಕಾಯಿತು. ಟಿಕೀಟಿನ ಬೇಟೆಯಾಡುವ ಈ ಜನರನ್ನು ನೋಡಿ ನೋಡಿ, ಅವರ ಮಾತು ಕೇಳಿ ಕೇಳಿ ಸಮಿತಿಯ ಸದಸ್ಯರಿಗೆಲ್ಲ ಬೇಸರವಾಗಿದ್ದುದು ಸ್ಪಷ್ಟವಿತ್ತು. ಮುಖ್ಯಮಂತ್ರಿಗಳ ಬಂಗಲೆಯೆದುರು ನಾಲ್ಕೈದು ನೂರು ಜನ ಸೇರಿದ್ದರು. ಬಸೆಟ್ಟಿಯೂ ತನ್ನ ಪತ್ನಿಯೊಡನೆ ಕಾರಿನಲ್ಲಿ ಕುಳಿತುಕೊಂಡು ಮುಖ್ಯಮಂತ್ರಿಗಳ ಸಮಯ ಕಾಯುತ್ತಿದ್ದುದು ಕಾಣಿಸಿತು.

ನಮ್ಮ ಸರದಿ ಬರುತ್ತಲೂ ನಾವು ಒಳಸೇರಿ ಮುಖ್ಯ ಮಂತ್ರಿಗಳಿಗೆ ನಮಸ್ಕಾರ ಮಾಡುವುದರೊಳಗಾಗಿಯೆ ಇನ್ನಿಬ್ಬರು ಒಳಗೆ ಬಂದರು. ಬಸೆಟ್ಟಿಯ ಅನಾಚಾರಗಳನ್ನು ಕುರಿತು ನಾವು ಮುಖ್ಯ ಮಂತ್ರಿಗೆ ವರದಿ ಮಾಡುತ್ತಿದ್ದಂತೆಯೆ ಮತ್ತೆ ನಾಲ್ವರು ಬಂದರು. ನಾವು ಹೇಳುತ್ತಿದ್ದುದರ ಕಡೆಗೆ ಮುಖ್ಯ ಮಂತ್ರಿಯ ಲಕ್ಷ್ಯವೇ ಇದ್ದ ಹಾಗಿರಲಿಲ್ಲ. ಬರುವವರನ್ನು ಸ್ವಾಗತಿಸುವುದರಲ್ಲಿಯೆ ಅವರ ಸಮಯ ಕಳೆಯುತ್ತಿತ್ತು.

ನಮ್ಮ ಮಾತಿನ್ನೂ ಮುಗಿದಿರಲಿಲ್ಲ. ಅಷ್ಟರಲ್ಲಿಯೆ ಬೇರೆಯವರೂ ತಮ್ಮ ಪುರಾಣ ಬಿಚ್ಚಿದರು. ಅದನ್ನು ಆಲಿಸುತ್ತಿದ್ದಂತೆಯೋ ಮುಖ್ಯಮಂತ್ರಿ ನಮ್ಮ ಕಡೆ ತಿರುಗಿ. "ನೀವು ಹೇಳೋದನ್ನ ಬರೆದು ಕಳಿಸಿ ಬಿಡಿರಿ. ಈ ಗದ್ದಲದಲ್ಲಿ ಏನೂ ಅರ್ಥವಾಗೋದಿಲ್ಲ," ಎಂದು ಅಪ್ಪಣೆ ಕೊಡಿಸಿದರು.

ಅಲ್ಲಿ ಕಂಠಶೋಷಣೆ ಮಾಡಿಕೊಳ್ಳುವುದು ವ್ಯರ್ಥವೆಂದು ನಮಗೂ ಮನವರಿಕೆಯಾಗಿದ್ದಿತಾದುದರಿಂದ, ಮುಖ್ಯಮಂತ್ರಿ ಹೇಳುವಂತೆ ಎಲ್ಲವನ್ನೂ ಬರೆದು ತಿಳಿಸುವುದೇ ಒಳ್ಳೆಯದೆಂದುಕೊಂಡು ಹೊರಟು ಬಂದೆವು.

ಮತ್ತೆ ಕಾಂಗ್ರೆಸ್‌ಭವನದತ್ತ ನಡೆದಿದ್ದಂತೆ ನಾನೆಂದೆ :

"ಈ ಜನರ ಗದ್ದಲ ನೋಡಿದರೆ—ಪಾಪ, ಈ ಮಂತ್ರಿಗಳಿಗೆ ಊಟಕ್ಕೂ ವೇಳೆ ಸಿಗ್ತಿರಲಿಕ್ಕಿಲ್ಲ ಅಂತನಿಸ್ತದ. ಏನಂತೀರಿ ಶಿವಲಿಂಗಪ್ಪ ?"

“ ಊಟ ಅಷ್ಟs ಯಾಕ ? ತಂಬಿಗೀ ತಗೊಂಡು ಹೋಗಲಿಕ್ಕೂ ಪುರ ಸತ್ತು ಇರಲಿಕ್ಕಿಲ್ಲ, ” ಎಂದು ಹೇಳಿ ಶಿವಲಿಂಗ ಗಹಗಹಿಸಿ ನಕ್ಕ.

“ ಚುನಾವಣೆ ಮುಗಿಯುವವರೆಗೂ ಹೀಗೇ ಗದ್ದಲ ಇರೂದೇ. ನಾವು ಎರದು ಕಳಿಸಿದ್ದನ್ನ ಓದಲಿಕ್ಕಾದರೂ ಇವರಿಗೆ ಸವಡು ಸಿಗ್ತದೋ ಇಲ್ಲೋ !” ಎಂದೆ ನಾನು.

“ ನನಗೂ ಹಂಗೇ ಅನಿಸ್ತದ, ” ಎಂದ ಶಿವಲಿಂಗ.

“ ಆದರೂ ಮಾಡಬೇಕಾದ್ದನ್ನ ಮಾಡೇ ಬಿಡೋಣ. ಬಸೆಟ್ಟಿಯ ಕಥೀ ಎಲ್ಲಾ ಇಂಗ್ಲೀಷಿನಾಗ ಬರೆಸಿ ಟೈಪ್ ಮಾಡಿಸಿ ಸಮಿತಿಯ ಸದಸ್ಯರಿಗೆಲ್ಲಾ ಕಳಿಸಿಕೊಟ್ಟರ ಉಪಯೋಗ ಆಗಬಹುದು. ”

ಆ ಯೋಜನೆ ರುದ್ರಗೌಡನಿಗೂ ಒಪ್ಪಿಗೆಯಾಯಿತು. ಐದು ರೂಪಾಯಿ ಖರ್ಚು ಮಾಡಿ, ಇಂಗ್ಲೀಷಿನಲ್ಲಿ ಎಲ್ಲವನ್ನೂ ಟೈಪ್ ಮಾಡಿಸಿ ಅದೇ ದಿನ ಎಲ್ಲ ಸದಸ್ಯರಿಗೂ ಕಳಿಸಿಕೊಟ್ಟೆವು.

ಮಧ್ಯಾಹ್ನ ಊಟ ಮುಗಿಸಿ ಛತ್ರಕ್ಕೆ ಬರುತ್ತಲೂ ನಾನೆಂದೆ :

“ ಇಲ್ಲಿಯ ಕೆಲಸ ಅಂತೂ ಮುಗಿದಂಗೇ ಆಯ್ತು. ಇನ್ನು ಇಲ್ಲಿ ಯಾಕೆ ಇರಬೇಕು ? ಸಂಜೀ ಗಾಡಿಗೆ ಹೊರಟು ಬಿಡೂಣೇನು ಗೌಡರೆ ?”

“ ಈಗಲೇ ಏನಪಾ ಅವಸರ ? ಇನ್ನೂ ನಾಲ್ಕೈದು ದಿವಸ ಇದ್ದು ಹೋಗೂಣಲ್ಲ ? ಚುನಾವಣಾಸಮಿತಿಯ ಸದಸ್ಯರನ್ನ ಮೇಲಿಂದ ಮೇಲೆ ನೋಡುತ್ತಿರೂದು ಚಲೋ, ” ಎಂದ ರುದ್ರಗೌಡ.

“ ಮ್ಯಾಲಿಂಡ ಮ್ಯಾಲ ಏನು ನೋಡೂದ್ರೀ ಗೌಡರೆ ? ಪಾಪ . ಅವರಿಗೂ ಸವಡಿರೂದಿಲ್ಲ. ಸುಮ್ಮನೆ ನಾವು ತ್ರಾಸ ಕೊಡಬಾರದು.”

“ ಇದೆಂಥಾ ತ್ರಾಸ ಸದಾಶಿವ ? ಹಿರೇತನ ಮಾತ್ರ ಬೇಕು, ಜನರನ್ನ ಭೆಟ್ಟಿಯಾಗೂದು ಬ್ಯಾಡ ಅಂದರೆ ಹೆಂಗ ? ಅವರು ಕಮಿಟಿ ಮೆಂಬರ್ ಆಗಿ ರೂದೇ ನಮ್ಮಂಥವರನ್ನ ನೋಡೂದಕ್ಕ ! ” ಎಂದ ರುದ್ರಗೌಡ.

“ ಸರಿಯಪಾ. ನೀವು ನೋಡಿಕೊಂಡು ಬರ್ರಿ ಹಂಗಾದರೆ. ನನಗಂತೂ ಇಲ್ಲಿ ಬೇಸರವಾಗಿಹೋಯ್ತು. ನಾ ಹೊರಟುಬಿಡ್ತೀನಿ,” ಎಂದೆ.

“ ಹಾಗೇ ಮಾಡಿರಿ, ನಾವೂ ಇನ್ನು ಮೂರುನಾಲ್ಕು ದಿನಗಳಲ್ಲಿ ಬರ್ತೀವಿ.” ಎಂದ ರುದ್ರಗೌಡ.

ಅಂದು ಸಂಜೆ ಮಿರಜ ಪ್ಯಾಸೆಂಜರಿನಿಂದ ಊರಿಗೆ ಹೊರಡಲೆಂದು ರೈಲು ನಿಲ್ದಾಣಕ್ಕೆ ಬಂದಾಗ ಪ್ಲಾಟ್‌ಫಾರ್ಮಿನ ಮೇಲೆ ಗಾಡಿಗಾಗಿ ಕಾಯುತ್ತ ನಿಂತಿದ್ದ ರಮಾ ಕಾಣಿಸಿಕೊಂಡಳು. ನನ್ನನ್ನು ನೋಡುತ್ತಲೂ ನಗುನಗುತ್ತ ನನ್ನ ಬಳಿ ಬಂದು ನುಡಿದಳು :

"ಚಲೋ ಆಯ್ತು. ಒಬ್ಬಳೇ ಅಷ್ಟು ದೂರ ಪ್ರವಾಸ ಮಾಡಬೇಕಲ್ಲಾ ಅಂತ ಬೇಸರವಾಗಿತ್ತು. ಈಗ ನೀವು ಜತೆಯಾದಿರಿ. ಅಡ್ಡಿಯಿಲ್ಲ."

"ಮಾಲಾದೇವಿ ಬರಲೇ ಇಲ್ಲೇನ್ರಿ ? "

"ಇನ್ನೂ ಎರಡುವಾರ ಬರೂದಿಲ್ಲವಂತೆ. ಇರು, ಇರು, ಇಬ್ಬರೂ ಕೂಡೇ ಹೋಗೋಣಂತ ಅಂದಳು. ನನಗೋ ಭಯಂಕರ ಬೇಸರವಾಗಿತ್ತು. ಹೊರಟು ಬಿಟ್ಟೆ."

ಗಾಡಿ ಪ್ಲಾಟ್‌ಫಾರ್ಮಿಗೆ ಬರುತ್ತಲೂ ಚಿಕ್ಕ ಡಬ್ಬಿಯೊಂದರಲ್ಲಿ ಸ್ಥಳ ಹಿಡಿದು ಎದುರು ಬದುರಾಗಿ ಕುಳಿತುಕೊಂಡೆವು. ಮತ್ತೆ ಆ ಮಾತು ಈ ಮಾತು ಆಡುತ್ತ ನಿದ್ರೆ ಬರುವವರೆಗೂ ಹರಟುತ್ತಿದ್ದೆವು. ತಿಪಟೂರಿಗೆ ಬರುವುದರೊಳಗಾಗಿ ಡಬ್ಬಿಯಲ್ಲಿನ ಜನಸಂದಣಿ ಕಡಿಮೆಯಾಗಿತ್ತು. ಜಮಖಾನ ಹಾಸಿ ರಮಾ ಮಲಗಿಕೊಂಡಳು. ನಾನೂ ಹಾಗೆಯೇ ನಿದ್ರೆಹೋದೆ.

ಹುಬ್ಬಳ್ಳಿ ನಿಲ್ದಾಣದಲ್ಲಿ ಸಿಗರೇಟು ಕೊಳ್ಳಲೆಂದು ನಾನು ಗಾಡಿಯಿಂದಿಳಿದು ಬಂದಾಗ ಕೂಲಿಯ ಮೇಲೆ ಸಾಮಾನು ಹೊರೆಯಿಸಿಕೊಂಡು ಯಾವುದೋ ರೈಲು ಹಿಡಿಯಲು ನಡೆದಿದ್ದ ಮಹಿಳೆಯೊಬ್ಬಳನ್ನು ಕಂಡು ಚಕಿತನಾಗಿ ನಿಂತುಕೊಂಡೆ. ಸೆಟ್ಟಿಯ ಪ್ರಥಮ ಪತ್ನಿ ಕಾಮಾಕ್ಷಿ! ನನ್ನನ್ನು ನೋಡಿಯೂ ನೋಡದವರಂತೆ ಕೂಲಿಯ ಹಿಂದೆ ಧಾವಿಸುತ್ತಿದ್ದ ಅವಳನ್ನು ತಡೆದು ಕೇಳಿದೆ :

"ಏನ್ರಿ, ಗುರುತೇ ಇಲ್ಲದವರಂತೆ ನಡದೀರಲ್ಲ ? ಎಲ್ಲಿದೀರಿ ? ಏನು ವಿಷಯ ? "

ಕಾಮಾಕ್ಷಿ ಬೆದರಿದವಳಂತೆ ಅತ್ತಿತ್ತ ದೃಷ್ಟಿಯೋಡಿಸುತ್ತ ಮೆಲುದನಿಯಲ್ಲಿ ಹೇಳಿದಳು :

"ಬಿಜಾಪುರದ ಗಾಡಿ ಹಿಡೀಬೇಕು. ಟೈಂ ಆಗ್ಯದ, ನಾ ಹೋಗ್ತೀನಿ."

"ಒಮ್ಮಿಂದೊಮ್ಮೆಲೇ ಮಾಯವಾಗಿಬಿಟ್ಟಿರಲ್ಲ ಮಾದಾಪುರದಿಂದ ? ಈಗೇನು ಬಿಜಾಪುರದಲ್ಲೇ ಇದೀರೇನು ? "

"ಎಲ್ಲೋ ಇದೀನಿ. ನಾಲ್ಕುದಿನಗಳಿಗಂತ ತವರುಮನೆಗೆ ಬಂದಿದ್ದೆ. ಈಗ ಮತ್ತೆ ಹೋಗಬೇಕು. ನೀವು ಸುಮ್ಮನೆ ನನ್ನ ಪೀಡಿಸಬೇಡಿರಿ. ನಾ ಹೋಗುತೀನ್ರಿ" ಎಂದು ಹೇಳಿದವಳೆ ಕಾಮಾಕ್ಷಿ ಬರಬರನೆ ಹೊರಟುಹೋದಳು.

ಅವಳೀಗ ಇರುವ ಸ್ಥಳವನ್ನು ತಿಳಿದುಕೊಳ್ಳದೆ ಅವಳನ್ನು ಬಿಡಬಾರದೆಂದು ನಿಶ್ಚಯಿಸಿ ನಾನೂ ಅವಳ ಹಿಂದೆ ಹೊರಟೆ. ಬಿಜಾಪುರದ ರೈಲು ಹಿಡಿಯುವುದಾಗಿ ನನಗೆ ಹೇಳಿದ್ದಳಾದರೂ ಅವಳು ಆ ರೈಲಿನ ಕಡೆಗೆ ಹೋಗದೆ ನಾನು ಕುಳಿತು ಬಂದಿದ್ದ ಮಿರಜ ಗಾಡಿಯಲ್ಲೇ ಹತ್ತಿದಳು.

ರೈಲು ಹೊರಡುವವರೆಗೆ ಪ್ಲಾಟ್‌ಫಾರ್ಮಿನ ಮೇಲೆಯೆ ಶತಪಥ ಹಾಕುತ್ತಿದ್ದು ಕೊನೆಯ ಸಿಳ್ಳು ಕೇಳಿಸುತ್ತಲೂ ಕಾಮಾಕ್ಷಿಯಿದ್ದ ಡಬ್ಬಿಗೆ ನುಗ್ಗಿದೆ. ಅವಳು ಕುಳಿತಿದ್ದ ಸ್ಥಳದಲ್ಲಿ ಹೆಚ್ಚಿನ ದಟ್ಟಣೆಯೇನೂ ಇರಲಿಲ್ಲ. ಹಳ್ಳಿಯ ಹೆಂಗಸರಿಬ್ಬರು ಎಲೆಅಡಕೆ ಮೆಲ್ಲುತ್ತ ಏನನ್ನೋ ಹರಟುತ್ತ ಕುಳಿತಿದ್ದರು.

ನಾನು ಹೋಗಿ ಕಾಮಾಕ್ಷಿಯ ಎದುರಿಗೇ ಕುಳಿತುಕೊಂಡು ನನ್ನ ಮೋಹ ಕತೆಯನ್ನೆಲ್ಲ ಪ್ರಯೋಗಿಸುತ್ತ ಮಾತನಾಡಿದೆ :

"ಬಿಜಾಪುರಕ್ಕೆ ಹೋಗುವವರು ಮಿರಜ್ ಗಾಡಿ ಹತ್ತುವದಿಲ್ಲವಲ್ಲ ಕಾಮಾಕ್ಷಿ ? ನನಗ್ಯಾಕೆ ಸುಳ್ಳು ಹೇಳುತ್ತೀರಿ ?"

"ನನ್ನ ಪರಿಸ್ಥಿತಿ ಚೆನ್ನಾಗಿಲ್ಲ. ನನ್ನ ಕಾಡಬೇಡಿರಂತ ಆಗಲೇ ಹೇಳಿದಿನಲ್ಲ ? ನಾನೆಲ್ಲಿ ಹೋದರೆ ನಿಮಗೇನಂತೆ ?" ಎಂದಳು ಕಾಮಾಕ್ಷಿ. ಆಗಲೂ ಹೆದರಿಕೆಯಿಂದ ಅವಳ ಧ್ವನಿ ನಡುಗುತ್ತಲೇ ಇತ್ತು.

"ಇಷ್ಟ್ಯಾಕೆ ಅಂಜುತ್ತೀ ಕಾಮಾಕ್ಷೀ ? ಇಲ್ಲಿ ನಮ್ಮನ್ನ ಗುರುತಿಸುವವರಾದರೂ ಯಾರಿದಾರ ? ಸೆಟ್ಟರಂತೂ ಬೆಂಗಳೂರಲ್ಲಿದಾರ. ನಾನೂ ಅಲ್ಲಿಂದಲೇ ಬಂದೆನಲ್ಲ !"

"ಅವರು ಬೆಂಗಳೂರಲ್ಲಿದ್ದರೇನು, ಮದರಾಸಿನಲ್ಲಿದ್ದರೇನು ? ಅವರ ಸಿ. ಐ. ಡಿ. ಗಳಂತೂ ಎಲ್ಲಾ ಕಡೆಗೂ ಇದ್ದಾರ. ನಿಮಗದು ಗೊತ್ತಿಲ್ಲ."

"ಹುಬ್ಬಳ್ಳಿಯಲ್ಲಿ, ರೈಲಿನಲ್ಲಿ ಎಲ್ಲಿಯು ಸಿ. ಐ. ಡಿ. ಗಳೇ ಕಾಮಾಕ್ಷಿ ? ನೀನು ಸುಮ್ಮನೆ ಅಂಜಿಕೊಂಡಿದ್ದೀಯ. ಅದೂ ಅಲ್ಲದೆ, ಅವರು ಮಾಡುವದಾದರೂ ಏನು ?"

"ನಿಮಗಿನ್ನೂ ಗೊತ್ತಿಲ್ಲ ಸೆಟ್ಟರ ಸಹವಾಸ. ಅದಕ್ಕೇ ಹೀಗೆಲ್ಲ ಮಾತಾಡ್ತೀರಿ. ಅವತ್ತು ನಿಮಗೇ ಗೊತ್ತಾತ್ತಯ್ತಲ್ಲ ? ನೀವು ನನ್ನ ಭೆಟ್ಟಿಯಾದದ್ದು ತಿಳಿದಕೂಡಲೇ ನನ್ನನ್ನ ಮಾದಾಪುರದಿಂದ ಎಬ್ಬಿಸಿ ಬಿಟ್ಟರು..."

"ಅದು ನಿನ್ನದೇ ತಪ್ಪು. ಅವರು ಹೇಳಿದಂತೆ ನೀನ್ಯಾಕೆ ಕೇಳಬೇಕು ? ಮಾದಾಪುರ ಬಿಟ್ಟು ಹೋಗುವದಿಲ್ಲ ಅಂದಿದ್ದರೆ ಅವರು ನಿನಗೇನು ಮಾಡ್ತಿದ್ದರು ? ಬಲಾತ್ಕಾರದಿಂದ ಹೊತ್ತುಕೊಂಡು ಹೋಗುತಿರಲಿಲ್ಲವಲ್ಲ ? "

"ಅದು ಅವರಿಗೆ ಅಶಕ್ಯ ಅಂತ ತಿಳಿದೀರೇನು ? ಏನು ಬೇಕಾದ್ದು ಮಾಡಬಲ್ಲರು ಅವರು. ಮನಸಿಗೆ ಬಂದರೆ. ನನ್ನ ಮರ್ಡರ್ ಕೂಡಾ ಮಾಡಿಸಬಲ್ಲರು..." ಎಂದು ಹೇಳುತ್ತಿದ್ದಂತೆ ಕಾಮಾಕ್ಷಿಯ ಕಣ್ಣುಗಳಲ್ಲಿ ನೀರು ಕಾಣಿಸಿಕೊಂಡಿತು.

ಬಸೆಟ್ಟಿಯ ನಿಷ್ಠುರ, ಕ್ರೂರ ಸ್ವಭಾವವನ್ನು ನಾನೂ ಚೆನ್ನಾಗಿಯೇ ಬಲ್ಲವನಾಗಿದ್ದೆ. ಈಗಾಗಲೆ ಎರಡು ಮೂರು ಕೊಲೆ ಮಾಡಿಸಿ ಪಚನಮಾಡಿಕೊಂಡಿದ್ದ ಆ ದುಷ್ಟ. ಕಾಮಾಕ್ಷಿಯನ್ನು ಮುಗಿಸಿಬಿಡಲೂ ಹಿಂಜರಿಯುವವನಲ್ಲವೆಂಬುದು ಗೊತ್ತೇ ಇತ್ತು.

"ನಿನ್ನ ಅವ ಹ್ಯಾಗೆ ಮರ್ಡರ್ ಮಾಡಿಸ್ತಾನೋ ನೋಡುತೀನಿ. ನೀನು ಮಾತ್ರ ಯಾರಿಗೂ ಅಂಜದೆ ನನ್ನ ಸಂಗಡ ಇದ್ದು ಬಿಡು ಕಾಮಾಕ್ಷಿ," ಎಂದು ಅವಳನ್ನು ಸಂತೈಸಲು ಯತ್ನಿಸಿದೆ.

"ಊಹೂಂ, ಅದು ಶಕ್ಯವೇ ಇಲ್ಲ....ಶಕ್ಯವೇ ಇಲ್ಲ ...ನಾನೂ ಉಳಿಯುವದಿಲ್ಲ. ನೀವೂ ಉಳಿಯುವದಿಲ್ಲ. ನನ್ನ ಪಾಡಿಗೆ ನಾನು ಎಲ್ಲಾದರೂ ಇರುತೀನಿ. ನನ್ನಿಂದಾಗಿ ನೀವೂ ಸಂಕಟಕ್ಕೆ ಸಿಲುಕಿಕೊಳ್ಳಬೇಡಿರಿ," ಎಂದಳು ಕಾಮಾಕ್ಷಿ.

"ನನ್ನ ಜೀವ ಹೋದರೂ ಚಿಂತೆಯಿಲ್ಲ ಕಾಮಾಕ್ಷಿ. ನಿನ್ನ ಕೂದಲು ಕೊಂಕದಂತೆ ನೋಡಿಕೊಳ್ತೀನಿ. ಈಗ ನೀ ಇರೋದೆಲ್ಲಿ ಅನ್ನೋದನ್ನ ಮೊದಲು ಹೇಳು, " ಎಂದು ಒತ್ತಾಯಪಡಿಸಿದೆ.

ಕಿಟಕಿಯಿಂದ ಹೊರಗೆ ದೃಷ್ಟಿಸುತ್ತ ಅವಳು ಎಷ್ಟೋ ಹೊತ್ತು ಮೌನವಾಗಿ ಕುಳಿತುಕೊಂಡಿದ್ದಳು. ನಾನೆಷ್ಟು ಬಲವಂತ ಮಾಡಿದರೂ ತಾನಿರುವ ಸ್ಥಳದ ಬಗೆಗೆ ಅವಳು ಬಾಯಿ ಬಿಡಲಿಲ್ಲ. ನಾನೂ ಮನಸ್ಸಿನಲ್ಲಿಯೆ ಒಂದು

ನಿರ್ಧಾರಕ್ಕೆ ಬಂದೆ. ಈ ರೈಲು ಹೋಗುವುದು ಮಿರಜದವರೆಗೆ. ನಡುವೆ ಯಾವುದೊಂದು ನಿಲ್ದಾಣಕ್ಕೆ ಈಕೆ ಇಳಿದೇ ಇಳಿಯಬೇಕಾಗುತ್ತದೆ. ಅಲ್ಲಿಯು ವರೆಗೂ ಅವಳ ಜೊತೆಗೇ ಕುಳಿತಿದ್ದು, ಅವಳಿರುವ ತಾಣವನ್ನು ಪತ್ತೆ ಮಾಡಿಯೇ ತೀರುವುದೆಂದು ನಿಶ್ಚಯಿಸಿ, ನನ್ನ ಸಾಮಾನು ಇದ್ದ ಡಬ್ಬಿಗೆ ಹೋಗಿ, ಸ್ನೇಹಿತ ರೊಬ್ಬರ ಜೊತೆಗೆ ಮಾತನಾಡುತ ಬರುವುದಾಗಿ ರಮೆಗೆ ಹೇಳಿ, ಸಾಮಾನು ತೆಗೆದುಕೊಂಡು ಕಾಮಾಕ್ಷಿಯಿದ್ದಲ್ಲಿಗೆ ಬಂದೆ.

ಲೋಂಡಾ ನಿಲ್ದಾಣದಲ್ಲಿ ನಮ್ಮ ಡಬ್ಬಿಯಲ್ಲಿದ್ದ ಇತರ ಪ್ರಯಾಣಿಕರೆಲ್ಲ ಇಳಿದು ಹೋದರು. ಅಲ್ಲಿ ಬೇರೆಯವರೂ ಏರಿ ಬರಲಿಲ್ಲವಾದುದರಿಂದ ನಮಗೆ ಸಂಪೂರ್ಣ ಏಕಾಂತ ಲಭಿಸಿದಂತಾಯಿತು. ಚಹದಂಗಡಿಯ ಹುಡುಗನನ್ನು ಕೂಗಿ ಚಹಾ ತರಿಸಿದೆ. ಬೇಡಬೇಡವೆನ್ನುತ್ತಲೇ ಚಹಾ ಕುಡಿದಳು ಕಾಮಾಕ್ಷಿ. ಅಷ್ಟರಲ್ಲಿ ಅವಳ ಭಯ ಅರ್ಧಕ್ಕರ್ಧ ಕಡಿಮೆಯಾದ ಹಾಗೆ ತೋರುತ್ತಿತ್ತು

ಲೋಂಡಾ ನಿಲ್ದಾಣವನ್ನು ಹಿಂದೆ ಬಿಟ್ಟು ರೈಲು ದಟ್ಟವಾದ ಅರಣ್ಯದ ಮಧ್ಯೆ ಧಾವಿಸುತ್ತಿದ್ದಂತೆ ನಾನು ಮೆಲ್ಲನೆ ಎದ್ದು ಕಾಮಾಕ್ಷಿಯ ಮಗ್ಗುಲಲ್ಲಿ ಕುಳಿತು ಅವಳ ಬೆನ್ನು ನೇವರಿಸುತ್ತ ಹೇಳಿದೆ :

" ಆ ದಿವಸ ನೀನು ಒಮ್ಮೆಂದೊಮ್ಮೆ ಮಾಯವಾದದ್ದರಿಂದ ನನಗೆಷ್ಟು ದುಃಖವಾಯ್ತು ಅಂತೀಯಾ ಕಾಮಾಕ್ಷಿ? ದೇವರ ಕೃಪೆಯಿಂದ ಈಗ ಮತ್ತೆ ಭೆಟ್ಟಿಯಾಗಿದ್ದೀಯ. ನಿನ್ನ ನಾನು ಹೀಗೇ ಬಿಡೂದಿಲ್ಲ..."

ನನ್ನ ಹಸ್ತ ಅವಳ ಮೈ ಮೇಲೆ ಆಟವಾಡಿದಂತೆ ಅವಳ ಮುಖ ನಿಧಾನ ವಾಗಿ ಅರಳತೊಡಗಿತು. ಅವಳು ನನ್ನ ಭುಜಕ್ಕೊರಗಿ, ಕಣ್ಣು ಮುಚ್ಚಿಕೊಂಡಳು.

" ನಿಜ ಹೇಳ್ತಿರಾ ? ನನ್ನ ಕಂಡರೆ ನಿಮಗಷ್ಟು ಆನಂದವೇ ? "

" ಕೊರಳಾಣೆಯಾಗಿ ನಿಜ ಹೇಳ್ತೀನಿ ಕಾಮಾಕ್ಷಿ. ನೀನು ಒಪ್ಪಿದರೆ ನಿನ್ನ ಮದುವೆಯಾಗಲೂ ತಯಾರಿದೀನಿ, " ಎನ್ನುತ್ತಾ ಅವಳನ್ನು ಬರಸೆಳೆದು ಚುಂಬಿಸಿದೆ.

ಕಾಮಾಕ್ಷಿ ನಿರಾಸೆಯ ನಿಟ್ಟುಸಿರು ಬಿಟ್ಟಳು.

" ಅದೆಲ್ಲಿ ಶಕ್ಯ ? ಸೆಟ್ಟರು ನನ್ನ ಬಿಡಬೇಕಲ್ಲ ? "

" ಬಿಟ್ಟಂತೇ ಆಗಿಲ್ಲವೇ ಕಾಮಾಕ್ಷಿ ? "

" ಊಹೂಂ. ಕಾಯುದೆಯಂತೆ ಈಗಲೂ ನಾ ಅವರ ಹೆಂಡತಿಯೇ. "

" ಎಲ್ಲಿಯು ಕಾಯದೆ? ಏನು ಕತೆ ? ಮುಂಬಯಿಗೋ ಮದರಾಸಿಗೋ ಹೋಗಿ ಏನಾದರೊಂದು ಕೆಲಸ ಮಾಡುತ್ತ ಸುಖವಾಗಿ ಇದ್ದು ಬಿಡೋಣ ಕಾಮಾಕ್ಷಿ. ಏನಂತೀ ಹೇಳು. "

" ನಾನೇನು ಹೇಳಲಿ ? ಏನು ಹೇಳಲೂ ಶಕ್ಯವಿಲ್ಲ. ಸೆಟ್ಟರ ಹಿಡಿತ ದಿಂದ ನಾನು ಪಾರಾಗೂದೇ ಶಕ್ಯ ಇಲ್ಲ, " ಎಂದು ಹೇಳುತ್ತ ಬಿಕ್ಕಿ ಬಿಕ್ಕಿ ಅತ್ತಳು ಕಾಮಾಕ್ಷಿ.

ಕೈ ವಸ್ತ್ರದಿಂದ ಆವಳ ಕಂಬನಿಗಳನ್ನೊರೆಸಿ, ಅವಳನ್ನು ಸಮಾಧಾನ ಗೊಳಿಸಲು ಯತ್ನಿಸುತ್ತ ನಾನೆಂದೆ :

" ಸೆಟ್ಟಿಗೂ ನನಗೂ ಒಮ್ಮೆ ಆಗಬೇಕಾದ್ದು ಆಗಿ ಹೋಗಲಿ ಕಾಮಾಕ್ಷಿ. ಇವತ್ತು ಮಾದಾಪುರದಲ್ಲೇ ವಸತಿ ಮಾಡೋಣ. "

" ಮಾದಾಪುರದಲ್ಲಿ ? " ಬೆಚ್ಚಿಬಿದ್ದು ಕೇಳಿದಳಾಕೆ.

" ಹೌದು. ಮಾದಾಪುರದಲ್ಲಿ. ಯಾವುದಾದರೊಂದು ಹೋಟಲಲ್ಲಿ ರೂಮು ತೆಗೆದುಕೊಳ್ಳೋಣ. ನಿನ್ನ ಮನಸಿಗೆ ಬಂದಷ್ಟು ದಿವಸ ಇದ್ದು ಬಿಡು."

" ಶಕ್ಯವೇ ಇಲ್ಲ. ಮಾದಾಪುರದ ತುಂಬೆಲ್ಲಾ ಸೆಟ್ಟರ ಸಿ. ಐ. ಡಿ. ಗಳಿ ದ್ದಾರೆ. "

" ಇರಲಿರಲಿ, ಅವರೇನು ಮಾಡ್ತಾರೋ ನೋಡಿಬಿಡೋಣ ಒಮ್ಮೆ," ಎಂದು ಹೇಳಿ ಮತ್ತೆ ಆವಳ ಮೈ ಸವರಿದೆ, ಕೆನ್ನೆಗಳನ್ನು ಚುಂಬಿಸಿದೆ. ನನ್ನ ಪ್ರೇಮಪ್ರಯೋಗ ನಿಧಾನವಾಗಿ ಯಶಸ್ವಿಯಾಗತೊಡಗಿತು. ನಾನು ಚುಂಬನ ಗಳ ಮಳೆಗರೆದ ಹಾಗೆಲ್ಲ ಕಾಮಾಕ್ಷಿ ಉದ್ರಿಕ್ತಳಾಗುತ್ತ ಬಂದಳು. ಮಾದಾ ಪುರ ನಿಲ್ದಾಣ ಬರುತ್ತಲೂ ಅವಳನ್ನು ಅಲ್ಲಿ ಇಳಿಸುವುದು ಅಷ್ಟೇನು ಪ್ರಯಾ ಸದ ವಿಷಯವಾಗಲಿಲ್ಲ.

ನಿಲ್ದಾಣದ ಸಮೀಪದಲ್ಲಿಯೇ ಇದ್ದ ಒಂದು ಹೋಟೆಲಿನಲ್ಲಿ ಕೊಟಡಿ ಹಿಡಿದು ಒಂದು ರಾತ್ರಿಯನ್ನು ಸುಖವಾಗಿ ಕಳೆದುದಾಯಿತು. ಊಟ–ತಿಂಡಿ ಎಲ್ಲವನ್ನೂ ಕೊಟಡಿಗೇ ತರಿಸಿಕೊಂಡೆವು. ಯಾವುದಕ್ಕೂ ಹೊರಗೆ ಹೋಗ ಲಿಲ್ಲ. ಇನ್ನೆರಡು ದಿನವಾದರೂ ಅವಳೊಡನೆ ಇದ್ದು, ಅವಳನ್ನು ಸಂಪೂರ್ಣ ವಾಗಿ ವಶಪಡಿಸಿಕೊಂಡು, ಬಸೆಟ್ಟಿಯ ರಹಸ್ಯಗಳೆಲ್ಲವನ್ನು ಕೇಳಿ ತಿಳಿದುಕೊಳ್ಳು

ವುದಲ್ಲದೆ, ಪ್ರದೇಶ ಕಾಂಗ್ರೆಸ್ ಅಧ್ಯಕ್ಷರೆದುರು ಆ ವಿಷಯವನ್ನೆಲ್ಲ ತಿಳಿಸಲು ಅವಳನ್ನು ಸಿದ್ಧಗೊಳಿಸುವುದು ನನ್ನ ಉದ್ದೇಶವಾಗಿತ್ತು.

ಆದರೆ. ನಾನೆಷ್ಟು ಒತ್ತಾಯ ಪಡಿಸಿದರೂ ಮಾರನೆಯ ದಿನ ಅಲ್ಲಿ ಉಳಿಯಲು ಕಾಮಾಕ್ಷಿ ಒಪ್ಪಿಕೊಳ್ಳಲಿಲ್ಲ.

" ಮತ್ತೊಮ್ಮೆ ಎಂದಾದರೊಮ್ಮೆ ಹೀಗೇ ಭೆಟ್ಟಿಯಾಗೋಣ. ಈಗ ಮಾತ್ರ ನನ್ನ ತಡೆಯಬೇಡಿರಿ. ನಾ ಹೋಗಲೇಬೇಕು, " ಎಂದು ಅವಳು ನಿಶ್ಚಯದ ಧ್ವನಿಯಲ್ಲಿ ಹೇಳಿದಳು.

" ನೀನಿರುವ ಸ್ಥಳವನ್ನಾದರೂ ತಿಳಿಸಿಹೋಗು ಕಾಮಾಕ್ಷಿ. "

ಅವಳು ಅದನ್ನೂ ತಿಳಿಸಲಿಲ್ಲ. ಮಧ್ಯಾಹ್ನ ಊಟವಾಗುತ್ತಲೂ ಅವಳು ಹೊರಟು ನಿಂತಳು.

" ಒಂದು ಟಾಂಗಾ ತರಿಸಿ ಬಿಡಿರಿ. ನಾ ಹೋಗುತೀನಿ. "

" ಕಳಿಸಲಿಕ್ಕೆ ನಾನೂ ಬರ್ತೀನಲ್ಲ ಕಾಮಾಕ್ಷಿ ? "

" ಬೇಡ. ನಾನೊಬ್ಬಳೇ ಹೋಗ್ತೀನಿ. "

ಅವಳ ಇಚ್ಛೆಗೆ ವಿರುದ್ಧವಾಗಿ ಅವಳನ್ನು ಹಿಂಬಾಲಿಸಿಕೊಂಡು ಹೋಗುವುದು ಸರಿಯಲ್ಲವೆಂದುಕೊಂಡು ನಾನು ಸುಮ್ಮನಾದೆ. ಟಾಂಗಾ ಏರಿ ಅವಳು ಹೊರಟು ಹೋದಳು. ಹೋಟಲಿನ ಬಿಲ್ ತೆತ್ತು ನಾನು ಮನೆಯತ್ತ ಹೊರಟಿದ್ದಂತೆ, ಬಸ್ಸಿಗಾಗಿ ಕಾಯುತ್ತ ನಿಂತಿದ್ದ ಲೀಲಾವತಿ ಕಾಣಿಸಿಕೊಂಡಳು.

" ಓಹ್ಹೊ ! ಏನು ಅಪರೂಪದ ಭೆಟ್ಟಿ ! ಯಾರ್ರೀ ಅವರು ಇದೇ ಈಗ ಟಾಂಗಾ ಹತ್ತಿ ಹೋದವರು ? " ತುಂಟತನದ ನಗು ಬೀರುತ್ತ ಅವಳು ಕೇಳಿದಳು.

" ಅವರೇ ? ನನ್ನ ಚಿಕ್ಕಮ್ಮ !" ಎಂದು ನಾನೂ ನಗುತ್ತಲೇ ಹೇಳಿದೆ.

" ಚಿಕ್ಕಮ್ಮನೋ ? ಚಿಕ್ಕ ಹೆಂಡತಿಯೊ ? ನನ್ನ ಮುಂದೆ ಏನಾದರೊಂದು ಹೇಳಬೇಡಿರಿ. ನಾ ಬಲ್ಲೆ ನಿಮ್ಮದೆಲ್ಲಾ !" ಎಂದಳು ಲೀಲಾವತಿ, ಕೊರಳು ಕೊಂಕಿಸುತ್ತ.

" ದೊಡ್ಡ ಹೆಂಡತಿಯೇ ಇಲ್ಲವಂತೆ ! ಇನ್ನು ಚಿಕ್ಕ ಹೆಂಡತಿ ! ನೀವೂ ವಿಚಿತ್ರವೇ ಇದೀರಿ ! "

"ನಾ ವಿಚಿತ್ರವೊ ? ನೀವು ವಿಚಿತ್ರವೊ ? ಅವಳ್ಯಾರು ಅನ್ನೋದು ನನಗೇನು ಗೊತ್ತಿಲ್ಲ ಅಂತೀರಾ ? " ಎಂದಳು ಲೀಲಾವತಿ.

"ಗೊತ್ತಿದ್ದರೆ ಆಯಿತಲ್ಲ ? ಮತ್ತೆ ನನ್ನ ಯಾಕೆ ಕೇಳುತೀರಿ ?"

"ನೀವು ಬೆಂಕಿಯ ಸಂಗಡ ಆಟ ನಡಿಸಿದ್ದೀರಿ ಸದಾಶಿವ ! ಇದರಿಂದೇನು ಒಳ್ಳೆಯದಾಗುವದಿಲ್ಲ. " ಎಂದು ಅವಳು ಕಳವಳದ ಧ್ವನಿಯಲ್ಲಿ ಹೇಳಿದಳು.

"ಅದು ಬೆಂಕಿಯಲ್ಲ ಲೀಲಾ. ಬೂದಿ....ಆರಿದ ಬೂದಿ ! ", ಎಂದಿಷ್ಟು ಹೇಳಿ, "ಬೈ ಬೈ " ಎಂದು ನುಡಿದು ಅವಳನ್ನು ಬೀಳ್ಕೊಂಡೆ. ಅವಳು ಕಾಮಾಕ್ಷಿಯನ್ನು ನನ್ನ ಜೊತೆಯಲ್ಲಿ ನೋಡಿದುದು ಒಳ್ಳೆಯದಾಗಲಿಲ್ಲವೆಂದೇ ಅನ್ನಿಸತೊಡಗಿತು. ಲೀಲಾವತಿ ನನಗೆ ಬೇಕಾದವಳು. ಸಭ್ಯಸ್ಥೆ. ಅದೆಲ್ಲಾ ನಿಜವೆ. ಆದರೂ, ಅವಳೂ ಒಬ್ಬ ಹೆಂಗುಸು ಎಂಬುದನ್ನು ಮರೆಯುವಂತಿಲ್ಲ. ಹೆಂಗುಸರ ಬಾಯಲ್ಲಿ ಗುಟ್ಟಿನ ಮಾತು ಉಳಿಯುವುದು ಕಷ್ಟ. ಇನ್ನೊಬ್ಬ ಹೆಂಗುಸಿಗೆ ಸಂಬಂಧಪಟ್ಟ ವಿಷಯವಿದ್ದರಂತೂ ಮುಗಿದೇ ಹೋಯಿತು. ಆ ಗುಟ್ಟನ್ನು ರಟ್ಟು ಮಾಡುವವರೆಗೂ ಹೆಣ್ಣಿಗೆ ಸಮಾಧಾನವೇ ಇರುವುದಿಲ್ಲ.

# ೧೩

ನಾಲ್ಕು ದಿನಗಳ ನಂತರ ಬರುವುದಾಗಿ ಹೇಳಿದ್ದ ರುದ್ರಗೌಡ ಮಾದಾಪುರಕ್ಕೆ ಬರಬೇಕಾದರೆ ಒಂದು ವಾರವೇ ಕಳೆದು ಹೋಯಿತು ಭೆಟ್ಟಿಯಾಗುತ್ತಲೂ ಆತ ಹೇಳಿದ :

" ಬೆಂಗಳೂರಿನಲ್ಲಿ ಎಲ್ಲರನ್ನೂ ನೋಡಿ ಕೆಲಸ ಗಟ್ಟಿಮಾಡಿ ಬಂದೀನಿ. ಇನ್ನಮ್ಯಾಲ ಒಂದೆರಡು ವಾರ ತಾಲೂಕಿನಲ್ಲೆಲ್ಲ ತಿರುಗಾಡಬೇಕು. "

" ಈಗಲೇ ಯಾಕೆ ತಿರುಗಾಡೋದು ? ಚುನಾವಣೆ ಇನ್ನೂ ದೂರವಿದೆಯಲ್ಲ ? "

" ಇನ್ನೆರಡು ವಾರಗಳಿಗೆ ನಿರೀಕ್ಷಕರು ಬರ್ತಾರಲ್ಲ ? ಅಷ್ಟರೊಳಗಾಗಿ ನಾವು ತಾಲೂಕಿನಲ್ಲೆಲ್ಲಾ ಸುತ್ತಿ ಮಂಡಲ ಕಾಂಗ್ರೆಸ್ ಸದಸ್ಯರನ್ನ ಒಲಿಸಿಕೋಬೇಕು. "

" ನಿರೀಕ್ಷಕರು ? "

" ಹುರಿಯಾಳುಗಳಿಗೆ ಮಂಡಲ ಕಾಂಗ್ರೆಸ್ ಸದಸ್ಯರ ಬೆಂಬಲ ಎಷ್ಟು ಅದ, ಏನು ಅಂಬೂದು ತಿಳುಕೊಂಡು ಎಂ. ಪಿ. ಸಿ. ಸಿ. ಗೆ ರಿಪೋರ್ಟ ಮಾಡೂದಕ್ಕ ನಿರೀಕ್ಷಕರನ್ನ ನೇಮಿಸಿದ್ದಾರ. ಒಂದು ಜಿಲ್ಲಾಕ್ಕ ಒಬ್ಬೊಬ್ಬರು. "

" ನಮ್ಮ ಜಿಲ್ಲಾಕ್ಕ ಯಾರು ಬರ್ತಾರ ? "

" ಗುರುಪಾದಪ್ಪನವರಂತ... ಮೈಸೂರಿನ ಕಡೆಯವರು. ನನಗೂ ಗುರುತಿಲ್ಲ."

" ಗುರುತು ಪರಿಚಯವಿಲ್ಲದಿರುವವರೇ ಬರೋದು ಚಲೋದು. ಅಂದರೆ ಪಕ್ಷಪಾತ ಮಾಡಲಿಕ್ಕಿಲ್ಲ."

" ಹುವ್, ಅವರು ಬರೂದರೊಳಗಾಗಿ, ಮಂಡಲ ಕಾಂಗ್ರೆಸ್ ಮಂದಿ

ಯನ್ನ ಹಿಡುಕೋಬೇಕಲ್ಲ? ನಾಳೆಯಿಂದ ಪ್ರವಾಸ ಹೊರಡೂಣು. ನೀವೂ ಬರಬೇಕು," ಎಂದ ರುದ್ರಗೌಡ.

ಎಂಟು ದಿನಗಳಿಗೆಂದು ಒಂದು ಬಾಡಿಗೆಯ ಕಾರು ತೆಗೆದುಕೊಂಡು, ರುದ್ರ ಗೌಡ, ನಾನು, ಶಿವಲಿಂಗ, ಇನ್ನಿಬ್ಬರು ಕಾರ್ಯಕರ್ತರು ಪ್ರವಾಸ ಹೊರಟೆವು. ನಮ್ಮ ತಾಲೂಕಿನಲ್ಲಿ ಒಟ್ಟು ಆರು ಮಂಡಲಗಳಿದ್ದುವು. ಆ ಆರೂ ಮಂಡಲ ಗಳ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಇನ್ನಿತರ ಸದಸ್ಯರು ಎಲ್ಲ ರನ್ನೂ ಭೆಟ್ಟಿಯಾಗಿ, ನಿರೀಕ್ಷಕರೆದುರು ರುದ್ರಗೌಡರ ಪರವಾಗಿಯೇ ಮತ ಹಾಕುವಂತೆ ಅವರ ಮನಸ್ಸು ಒಲಿಸುವುದು ಸುಲಭ ಸಾಧ್ಯವಾದ ಕಾರ್ಯವೇನೂ ಆಗಿರಲಿಲ್ಲ.

ಮೊತ್ತ ಮೊದಲನೆಯದಾಗಿ ನಾವು ತಾಲೂಕು ಕಾಂಗ್ರೆಸ್ ಅಧ್ಯಕ್ಷನನ್ನೇ ಕಂಡೆವು. ಹಳ್ಳಿಯೊಂದರಲ್ಲಿ ಏನೋ ಉದ್ಯೋಗ ಮಾಡಿಕೊಂಡಿದ್ದ ಆ ಅಧ್ಯಕ್ಷ ನಮ್ಮನ್ನು ನೋಡುತ್ತಲೂ ಚಹಾ ತರಿಸಿಕೊಟ್ಟ. ರುದ್ರಗೌಡರಿಗೆ ಬೆಂಬಲ ಕೊಡಬೇಕೆಂಬ ಮಾತನ್ನು ನಾವು ಪ್ರಸ್ತಾಪಿಸುತ್ತಲೂ ಆತನೆಂದ :

"ನೋಡೋಣು ... ನೋಡೂಣು...ನೀವಂತೂ ನಮ್ಮವರೇ ಇದೀರಿ."

"ಅದೆಲ್ಲಾ ಖರೆ. ಆದರೆ ನೀವು ಇಷ್ಟೇ ಹೇಳಿದರೆ ಆಗದು. ನಮಗೇ ಬೆಂಬಲ ಕೊಡ್ತೀವಂತ ವಚನ ಕೊಡಲಿಕ್ಕೆ ಬೇಕು"

"ವಚನ? ಅದು ಮಾತ್ರ ಆಗೂದಿಲ್ಲ ನೋಡಿರಿ. ಯಾಕಂದರೆ ವಚನ ಕೊಟ್ಟಮ್ಯಾಲ ಅದರಂತೆ ನಡೆದುಕೊಳ್ಳ ಬೇಕಾಗತೈತಿ....ಹೌದೋ ಅಲ್ಲೋ ನೀವೇ ಹೇಳಿರಿ. ನಾವಂತೂ ಹೇಳಿ ಕೇಳಿ ಹಳ್ಳಿಯ ಮಂದಿ. ಇದುವರೆಗೆ ಮೂರುನಾಕು ಮಂದಿ ಎಂ. ಎಲ್. ಎ. ಗಳು ಆಗಿ ಹೋದರು. ಎಲೇಶನ್‌ಕ್ಕ ಮೊದಲು ಎಲ್ಲರೂ ಬಂದು, ನಿಮ್ಮ ಹಳ್ಳಿಗೆ ಅದು ಮಾಡತೀವಿ, ಇದು ಮಾಡ ತೀವಿ, ಸಾಲೀ ಕಟ್ಟಿಸಿಕೊಡತೀವಿ, ರಸ್ತೇ ಮಾಡಿಸಿಕೊಡತೀವಿ ಅಂತ ಹೇಳೇ ಹೇಳತಾರ, ಎಲೇಶನ್ ಮುಗಿದಮ್ಯಾಲ ಒಬ್ಬರಾದರೂ ಇತ್ತ ಸುಳಿದರ ಹೇಳಿರಿ. ತಮ್ಮತಮ್ಮ ಊರಿಗೆ ಮಾತ್ರ ಏನು ಬೇಕೋ ಒಲ್ಲಾ ಮಾಡಸಿಕೊಂಡರು ದವಾಖಾನೆ, ಸಾಲೆ, ಸಮಾಜಮಂದಿರ, ಬಸ್ಸು ಎಲ್ಲಾ ಎಲ್ಲಾ ಆತು. ನಮಗ ಮಾತ್ರ ಏನೇನೂ ಇಲ್ಲ...."

"ನಾನು ಎಂ. ಎಲ್. ಎ. ಆದ ಮ್ಯಾಲ ನಿಮ್ಮ ಹಳ್ಳಿಯನ್ನ ಮರಿಯೂದಿಲ್ಲರಿ. ಎಲ್ಲಕ್ಕೂ ಮೊದಲು ನಿಮ್ಮ ಊರಿಗೆ ಏನು ಬೇಕೋ ಎಲ್ಲಾ ಮಾಡಿಸಿ ಕೊಡ್ತೀನಿ," ಎಂದ ರುದ್ರಗೌಡ.

ಬೀಡಿ ಸೇದುತ್ತ ಕೊಂಚ ಹೊತ್ತು ಸುಮ್ಮನೆ ಕುಳಿತಿದ್ದ ಅಧ್ಯಕ್ಷ ಮಹಾಶಯ ಮೆಲ್ಲನೆ ತಲೆಯೆತ್ತಿ ನಮ್ಮೆಲ್ಲರನ್ನು ತೀಕ್ಷ್ಣ ದೃಷ್ಟಿಯಿಂದ ನೋಡುತ್ತ ಹೇಳಿದ :

"ಬಂದವರೆಲ್ಲಾ ಹಿಂಗs ಹೇಳುತಾ ಇದಾರ. ಮೊನ್ನೆ ಒಬ್ಬರು ಬಂದಿದ್ದರು. ನಿನ್ನೆ ಎರಡುಮೂರು ಮಂದಿ ಬಂದಿದ್ದರು...."

"ಸೆಟ್ಟರೂ ಬಂದಿರಬೇಕಲ್ಲ ? " ಎಂದ ಶಿವಲಿಂಗ.

"ನೀವು ಬರೂದಕ್ಕ ಮೊದಲು ಒಂದು ತಾಸಿನ ಹಿಂದೇ ಅವರು ಬಂದು ಹೋದರು. ಎಂ. ಪಿ. ಸಿ. ಸಿ. ಅಧ್ಯಕ್ಷರಿಗೂ ಸೆಟ್ಟರಿಗೂ ಏನೋ ಸಂಬಂಧ ಐತಂತಲ್ಲರಿ ? ಮುಖ್ಯ ಮಂತ್ರಿ, ಮತ್ತೂ ಮೂರುನಾಕು ಮಂತ್ರಿಗಳು ತಮ್ಮ ಕಿಸೇದಾಗs ಅದಾರಂತ ಸೆಟ್ಟರು ಹೇಳತಿದ್ದರು. ಹಳ್ಳಿಯ ಕೆಲಸ ಆಗಬೇಕಾದರ ಮಂತ್ರಿಗಳ ಮ್ಯಾಲ ಪ್ರಭಾವ ಇರಬೇಕಾಗತೈತಿ, ನಿಮ್ಮ ಕೆಲಸ ಎಲ್ಲಾ ನಾ ಸುಲಭವಾಗಿ ಮಾಡಿಕೊಡ್ತೀನಂತ ಹೇಳುತಿದ್ದರು. ಎಲೆಕ್ಶನ್ ಮುಗಿದ ಕೂಡಲೆ ಮುಖ್ಯಮಂತ್ರಿಯನ್ನೇ ಕರಕೊಂಡು ಬರ್ತಾರಂತ ನಮ್ಮ ಊರಿಗೆ.. ಸಾಲೀ ಕಟ್ಟಡಾನೂ ಮಾಡಿಸಿಕೊಡ್ತೀವಂತ ಹೇಳಿದಾರ...."

"ಹೇಳೂದಕ್ಕೇನು ಬಿಡಿರಿ. ನಾವೂ ನೂರಾರು ಹೇಳೇವು. ಆದರs ಸುಮ್ಮಸುಮ್ಮನ ಬಡಾಯಿ ಹೊಡೀಬಾರದು," ಎಂದ ರುದ್ರಗೌಡ.

ಈ ತಮಾಷೆ ನೋಡಲು ನೆರೆದಿದ್ದ, ಅಧ್ಯಕ್ಷನ ಅನುಯಾಯಿಗಳಲ್ಲೊಬ್ಬ ಹೇಳಿದ :

"ಎಲ್ಲಾರೂ ಹೊಡಿಯೂದು ಬಡಾಯಿನs ಅಂಬೂದು ನಮಗ ಗೊತ್ತಾಗೈತಿ ಬಿಡರೀ, ಅದಕ್ಕs ನಾವು ನಿಶ್ಚಯ ಮಾಡೀವಿ. ನಮ್ಮ ಸಾಲೀ ಕಟ್ಟಡಕ್ಕ ಯಾರು ಎಲ್ಲರಿಗಿಂತ ಹೆಚ್ಚು ರೂಪಾಯಿ ಕೊಡುತಾರೋ ಅವರಿಗೇ ಬೆಂಬಲ ಕೊಡಬೇಕಂತ ಮಾಡೀವಿ. "

"ನನ್ನಿಂದ ಆದಷ್ಟು ಕೊಡೂದಕ್ಕ ನಾ ತಯಾರೇ ಆದೀನಿ," ಎಂದ ರುದ್ರಗೌಡ.

"ಅದಕ್ಕೇನ್ರಿ ? ಎಲ್ಲಾರೂ ತಯಾರೇ ಅದಾರ. ಇದೇ ಈಗ ಸೆಟ್ಟರು ಹೇಳುತ್ತಿದ್ದರು—ಕಟ್ಟಡಕ್ಕ ತಾವು ಸ್ವತಾ ಐದುಸಾವಿರ ಕೊಡತಾರಂತ !"

"ನಿಮ್ಮಂಥಾ ಹಳ್ಳಿಯ ಜನರನ್ನ ಮೋಸಮಾಡಿ ಲಕ್ಷಾಂತರ ಗಳಿಸಿದಾನ ಆ ಸೆಟ್ಟಿ. ಅವ ಐದುಸಾವಿರ ಕೊಡೂದೇನು ದೊಡ್ಡದಲ್ಲ. ಅಂಥವರ ಕೈಯಿಂದ ನಿಮ್ಮನ್ನ ಉಳಿಸೂದಕ್ಕಂತ್ಲೆ ನಾನೂ ಅರ್ಜಿ ಕೊಟ್ಟೇನಿ. ರೈತರ ನಿಜವಾದ ರಾಜ್ಯ ಬೇಕಾಗಿದ್ದರ ನನಗ ಬೆಂಬಲ ಕೊಡಿರಿ. ರೈತರ ವೈರಿಗಳ ರಾಜ್ಯ ಉಳಿಯಬೇಕಾದರ ಸೆಟ್ಟರಿಗೇ ಕೊಡಿರಿ," ಎಂದ ರುದ್ರಗೌಡ.

ಅವನ ಮಾತಿನಿಂದ ಹಳ್ಳಿಯ ಜನರ ಮೇಲೆ ಯಾವ ಪರಿಣಾಮವೂ ಉಂಟಾಗಲಿಲ್ಲ. ಕೆಲವರಂತೂ ತುಟಿಗಳಲ್ಲಿಯೆ ನಕ್ಕರು. ಅಧ್ಯಕ್ಷನೂ ನಗು ನಗುತ್ತಲೇ ಹೇಳಿದ :

"ಯಾರ ರಾಜ್ಯಾ ಬಂದರೂ ನಮಗ ರಾಗೀ ಬೀಸೂದು ತಪ್ಪೂದಿಲ್ಲ ನ್ನೂದು ನಮಗ ಗೊತ್ತೇ ಐತಿ ಅದಕ್ಕೇ ಇಂಥಾ ಪ್ರಸಂಗದಾಗ ಅದರೂ ಸಿಕ್ಕಷ್ಟು ಸಿಗಲಿ ಅಂತ ವಿಚಾರ ಮಾಡೇವಿ. ನಮ್ಮ ಗುಂಪನ್ನ ಕೇಳದೆ ನಾನೊಬ್ಬನೇ ಏನು ಮಾಡಲಿಕ್ಕೂ ಬರೂದಿಲ್ಲ. ನಮ್ಮ ಕಟ್ಟಡಕ್ಕ ನೀವು ಹತ್ತು ಸಾವಿರ ರೂಪಾಯಿ ಕೊಡೂದಾದರ ನಿಮಗ ಬೆಂಬಲ ಕೊಡುತೀವಿ."

ಶಿವಲಿಂಗನಿಗೆ ಬಲು ಸಿಟ್ಟು ಬಂದಿತು. ಆತ ಧಟ್ಟನೆದ್ದು ಹೇಳಿದ :

"ಏಳಿರೀ ಗೌಡರೆ, ಇಲ್ಲಿ ಸುಮ್ಮಸುಮ್ಮನ್ಲೆ ನಮ್ಮ ಟೈಂ ಹಾಳು. ಹತ್ತು ಸಾವಿರ ರೂಪಾಯಿ ತಗೊಂಡು ಸೆಟ್ಟಿಯ ಕೈಯಿಂದ ಕುತ್ತಿಗೆ ಕೊಯ್ಸಿಕೊಳ್ಳು ದಕ್ಕೂ ತಯಾರಾಗಿದಾರ ಈ ಮಂದಿ. ನಡೀರಿ, ನಡೀರಿ."

ಕಾರು ಮುಂದಿನ ಊರಿಗೆ ಹೊರಟಿತು. ಅಷ್ಟರಲ್ಲಿ ಮಧ್ಯಾಹ್ನವಾಗಿ ಎಲ್ಲರಿಗೂ ಹಸಿವೆಯಾಗಿತ್ತು. ರಸ್ತೆಯ ಮೇಲಿನ ಚಹದಂಗಡಿಯೊಂದರೆದುರು ಕಾರು ನಿಲ್ಲಿಸಿ ಅಂಗಡಿಯಲ್ಲಿದ್ದುದೆಲ್ಲವನ್ನೂ ತಿಂದು ಮುಗಿಸಿದೆವು. ಆದರೂ ಹಸಿವು ತಣಿಯಲಿಲ್ಲ. ಮತ್ತೆ ದಾರಿಯಲ್ಲಿ ಸಿಕ್ಕಿದ ಇನ್ನೊಂದು ಅಂಗಡಿಯ ಹತ್ತಿರವೂ ನಿಂತು ಅಲ್ಲಿದ್ದ ಐವತ್ತು ಬಾಳೆಯಹಣ್ಣು ನುಂಗಿದೆವು. ಯಾವಾಗಲೂ ಹನಿಡ್ಯೂ ಸಿಗರೇಟು ಸೇದುವ ಶಿವಲಿಂಗ ಇಂದು ಗೋಲ್ಡ್‌ಫ್ಲೇಕ್ ಎಳೆಯುತ್ತಿದ್ದ. ರುದ್ರಗೌಡನ ಕೆಲಸ, ರುದ್ರಗೌಡನ ಹಣ. ಚುನಾವಣೆ ಮುಗಿಯುವ

ವರೆಗೆ ಸಾಕಷ್ಟು ಚೈನಿ ಹೊಡೆಯುವುದೆಂದು ಶಿವಲಿಂಗ ನಿರ್ಧರಿಸಿದ್ದ. ಗೌಡನ ಜೊತೆಗಿದ್ದ ಇನ್ನಿಬ್ಬರು ಕಾರ್ಯಕರ್ತರೂ ಅದೇ ಮಾದರಿಯವರೇ ಆಗಿದ್ದರು.

ಇನ್ನೊಂದು ಮಂಡಲ ಕಾಂಗ್ರೆಸ್ಸಿನ ಅಧ್ಯಕ್ಷನಿದ್ದ ಊರಿಗೆ ಬಂದೆವು. ತಾಲೂಕು ಕಾಂಗ್ರೆಸ್ ಅಧ್ಯಕ್ಷನ ಊರಿನಲ್ಲಿ ದೊರೆತಂಥ ಅನುಭವವೇ ಅಲ್ಲಿಯೂ ಕಾದಿದೆಯೆಂದು ನನಗನ್ನಿಸುತ್ತಿತ್ತು. ಆದರೆ ರುದ್ರಗೌಡ ಮಾತ್ರ ಈ ಬಾರಿ ಬಹಳ ಆಶಾವಾದಿಯಾಗಿದ್ದ.

" ಗಿರಿಯಪ್ಪ ಏನು ಬ್ಯಾರೆಯವನಲ್ಲ ನನಗ. ಸಮೀಪದ ಸಂಬಂಧಿಕ. ಅಲ್ಲದೆ ಇನ್ನೂ ತರುಣ. ಬಹಳ ನಿಷ್ಠುರ ಮನುಷ್ಯ. ಒಮ್ಮೆ ಒಬ್ಬರಿಗೆ ಒಂದು ವಚನ ಕೊಟ್ಟರ ಅದನ್ನ ಎಂದೂ ಮುರಿಯುವವನಲ್ಲ. ಈ ಮಂಡಲದ ಇಪ್ಪತ್ತು ಮತಗಳೂ ನನಗೇ ಸಿಗೋದು ಖಾತ್ರಿ "

" ಹೌದೌದು. ಬೀಗರನ್ನ ಬಿಟ್ಟು ಬ್ಯಾರೆಯವರಿಗೆ ಸಹಾಯ ಹೆಂಗ ಮಾಡುತಾನ ಗಿರಿಯಪ್ಪ ? " ಎಂದ ಶಿವಲಿಂಗ.

ಕಾರು ಹಳ್ಳಿಯಲ್ಲಿ ಪ್ರವೇಶಿಸಿ ಪಂಚಾಯತಿ ಕಚೇರಿಯೆದುರು ನಿಂತು ಕೊಂಡಿತು. ಹುಡುಗನೊಬ್ಬ ಹೋಗಿ, ಇಸ್ಪೀಟು ಆಡುತ್ತ ಕುಳಿತಿದ್ದ ಗಿರಿ ಯಪ್ಪನನ್ನು ಕರೆದುಕೊಂಡು ಬಂದ ಹಳ್ಳಿಯಲ್ಲಿ ಸಾಮಾನ್ಯವಾಗಿ ಕಾಣ ಸಿಗುವ ಅಶಿಕ್ಷಿತ ಕಾಂಗ್ರೆಸ್ ಕಾರ್ಯಕರ್ತರಂತೆ ಗಿರಿಯಪ್ಪನೂ ಒಂದು ಕೊಳಕು ಅಂಗಿ ಧರಿಸಿ, ಹೊಲಸು ದೋತರ ಉಟ್ಟುಕೊಂಡಿದ್ದ. ತಿಂಗಳೆರಡು ತಿಂಗಳ ಹಿಂದೆ ತೊಳೆದಂತಿದ್ದ ಮಲಿನವಾದ ಟೋಪಿ ತಲೆಯ ಮೇಲಿತ್ತು. ಇಸ್ಪೀಟಾಟ ವನ್ನು ನಡುವೆಯೆ ಬಿಟ್ಟು ಬರಬೇಕಾಗಿ ಬಂದಿದ್ದುದರಿಂದಲೊ ಏನೊ ಸಿಟ್ಟಿನಿಂದ ಅವನ ಮುಖ ಉಗ್ರವಾಗಿತ್ತು. ಅವನು ಹತ್ತಿರ ಬಂದು, " ಯಾವಾಗ ಬಂದಿರೀ ಗೌಡರೇ ? " ಎಂದಾಗ ಬಾಯಿಯಿಂದ ಸರಾಯಿಯ ವಾಸನೆಯೂ ತೂರಿ ಬಂದಿತು. ನನಗೆ ಒಳಗೊಳಗೇ ನಗು. ಮಂಡಲ ಕಾಂಗ್ರೆಸ್ ಅಧ್ಯಕ್ಷ....ಮದಿರಾ ಭಕ್ತ ! ಇಸ್ಪೀಟುಪ್ರೇಮಿ. ಇನ್ನೂ ಎಂಥೆಂಥ ವ್ಯಸನಗಳಿವೆಯೊ ಯಾರು ಬಲ್ಲರು ! ಎಂದುಕೊಳ್ಳುತ್ತ ಕುತೂಹಲದಿಂದ ಅವನನ್ನು ದಿಟ್ಟಿಸುತ್ತಿದ್ದೆ.

ಬೀಗನಾದ ರುದ್ರಗೌಡನನ್ನು ತನ್ನ ಮನೆಗೆ ಕರೆಯುವ ಸೌಜನ್ಯವನ್ನೂ ತೋರಿಸಲಿಲ್ಲ ಗಿರಿಯಪ್ಪ. ಪಂಚಾಯತಿಯ ಕಚೇರಿಯಲ್ಲಿ ಹಾಸಿದ ಹೊಲಸು ಗುಡಾರವೊಂದರ ಮೇಲೆ ನಾವು ಅಪರಿಚಿತರಂತೆ ಕುಳಿತಿರಬೇಕಾಯಿತು.

ಪಂಚಾಯತಿಯ ಸಿಪಾಯಿಯನ್ನು ಕೂಗಿ ಚಹಾ ತರಲು ತಿಳಿಸಿ, ರುದ್ರ ಗೌಡನತ್ತ ತಿರುಗಿ ಗಿರಿಯಪ್ಪನೆಂದ :

" ಮತ್ತೇನು ಗೌಡರೆ ? ಮನ್ಯಾಗ ಎಲ್ಲಾ ಆರಾಮ ಅದಾರಲ್ಲ ? "

" ಅದಾರಪಾ, ಅದಾರ, ನಿಮ್ಮಲ್ಲಿ ಎಲ್ಲಾ ಹೆಂಗ ? "

" ಅದಾರ ಹಂಗೇ. ಈಗ ಮಾತ್ರ ಮನ್ಯಾಗ ಯಾರೂ ಇಲ್ಲ. ನಮ್ಮ ಸೋದರಮಾವಗ ಜಡ್ಡಾಗ್ಯೆತಿ. ಅವನ್ನ ನೋಡಿಕೊಂಡು ಬರೂದಕ್ಕ ಹೋಗ್ಯಾರ."

ನಾಲ್ಕು ನಿಮಿಷ ಕಳೆದ ಬಳಿಕ ಹೊಲಸು ನಾರುವ ಕಪ್ಪುಬಸಿಗಳಲ್ಲಿ ಮುಸುರೆ ನೀರಿನಂತೆ ಕಾಣುವ ಚಹಾ ತುಂಬಿಕೊಂಡು ಹುಡುಗನೊಬ್ಬ ಬಂದ. ಅದನ್ನು ಕುಡಿಯುತ್ತಿರಬೇಕಾದರೆ ಹೊಟ್ಟೆ ತೊಳಸಿದಂತಾಗಿ ವಾಂತಿಯಾಗು ವಂತಾಯಿತು.

ನಿರೀಕ್ಷಕರೆದುರು ಬೆಂಬಲ ಕೊಡುವ ಮಾತು ಹೊರಡುತ್ತಲೂ ಗಿರಿಯಪ್ಪ ಮೀಸೆ ಹುರಿಮಾಡಿ, ನೆಲದಮೇಲೆ ಮುಷ್ಟಿ ಅಪ್ಪಳಿಸುತ್ತ ವಿಚಿತ್ರವಾದ ವೀರಾ ವೇಶ ಪ್ರದರ್ಶಿಸುತ್ತ ಹೇಳಿದ :

" ಇಷ್ಟು ಹೇಳೂದಕ್ಕಾಗಿ ನೀವ್ಯಾತಕ್ಕ ಇಷ್ಟುದೂರ ಬರಬೇಕಾಗಿತ್ತು ಗೌಡರೇ ? ನನ್ನ ಮ್ಯಾಲ ಅಷ್ಟು ವಿಶ್ವಾಸ ಇಲ್ಲಾ ? ಒಂದ ಪತ್ರಾ ಬರದಿದ್ದರ ಸಾಕಾಗತಿತ್ತಲ್ಲ ? ನಮ್ಮವರಾವ ನೀವು ಅರ್ಜಿ ಹಾಕಿರುವಾಗ ನಿಮ್ಮನ್ನ ಬಿಟ್ಟು ಎರಡನೇದವರಿಗೆ ಬೆಂಬಲ ಕೊಟ್ಟೇವೇನು ನಾವು ? "

" ಅದಂತೂ ಗೊತ್ತೇ ಐತಿ. ಆದರೂ ಒಂದು ಮಾತು ಹೇಳಿಹೋಗೂ ಣಂತ ಬಂದಿವಿ. ನಿಮ್ಮ ಮಂಡಲದ್ದು ಇಪ್ಪತ್ತು ವೋಟು ಇರಬೇಕಲ್ಲ ? "

"ಇಪ್ಪತ್ತು ವೋಟು ನಿಮ್ಮವೇ ಅಂತ ತಿಳಕೊಳ್ರಿ. ನಿರೀಕ್ಷಕರು ಬಂದಾಗ ನಾನೇ ಎಲ್ಲಾರನೂ ಕರಕೊಂಡು ಬಂದು ಸ್ವತಾ ನಿಂತು ವೋಟು ಹಾಕಿಸ್ತೀನಿ. "

" ಬ್ಯಾರೆ ಯಾರರೆ ಬಂದಿದ್ದರೇನ್ರಿ ಬೆಂಬಲ ಕೇಳಲಿಕ್ಕ ? "

" ಬಂದಿದ್ದರಲ್ಲ? ಒಂದು ವಾರದಿಂದ ನಮಗ ನಿದ್ದೀಮಾಡಲಿಕ್ಕೆ ಕೂಡಾ ಸವುಡಿಲ್ಲ ನೋಡ್ರಿ. ಒಬ್ಬರೇ ಇಬ್ಬರೇ ? ಒಂದು ಜಾಗಾಕ್ಕ ಎಂಟು ಮಂದಿ ಅರ್ಜಿ ಹಾಕಿದಾರ. ಆ ಎಂಟೂ ಮಂದಿ ಬರುವವರೇ. ಅವರ ಸಂಗಡ ಮತ್ತ ಎಂಟೆಂಟು ಮಂದಿ. ಒಬ್ಬರ ಹಿಂದ ಒಬ್ಬರು. ಒಮ್ಮೆ ಬಂದು ಹೋದರ

ಸಮಾಧಾನ ಇಲ್ಲ ಅವರಿಗೆ. ದಿನ ಬಿಟ್ಟು ದಿನಾ ಬಂದು ಹಾಜರಾಗತಾರ. ಸೆಟ್ಟರಂತೂ ನಾಕು ಸಲ ಬಂದು ಹೋದರು ನೋಡಿರಿ. ಮತ್ತ ಆ ಮುದಿಯ ಆದಾನಲ್ಲ.... "

" ಅವನೇ.... ಆ ದಮ್ಮಿನ ರೋಗಿ... "

" ದಮ್ಮು ಹತ್ತಿ ಹಾಸಿಗೀ ಬಿಟ್ಟು ಏಳೂದಕ್ಕಾಗದ ಖೊಖ್ಖೊ ಅಂತ ಕೆಮ್ಮುತಾ ಬಿದ್ದಿದ್ದ ಆ ಮುದಿಯುನಿಗೂ ಅಸೆಂಬ್ಲಿಯ ಆಸೆ ಬಿಟ್ಟಿಲ್ಲ! ಉಶ್ಶ್ ಉಶ್ಶ್ ಅಂತ ಗೋಳಾಡುತ್ತಲೇ ಕಾರಿನಾಗ ಬಂದು, ಕೆಮ್ಮಿಕೋತ ಕುಂತು ನಮ್ಮನ್ನ ಕಾಡುತಾನ. ಇಂದೋ ನಾಳೆಯೋ ಸಾಯುವ ಈ ರೋಗಿ ಅಸೆಂಬ್ಲಿ ಮೆಂಬರ್ ಆಗಿ ಏನ ಮಾಡುತಾನೋ ದೇವರೇ ಬಲ್ಲ! ನೆಟ್ಟಗ ಮಾತಾಡಲಾಕ ಸುದ್ದಾ ಬರೂದಿಲ್ಲ. ಉಸಿರೆತ್ತಿದರ ಧಾಪ ಹತ್ತುತ್ತೈತಿ. ಇಂಧಾವನೂ ಒಬ್ಬ ಉಮೇದವಾರ! "

" ಮತ್ತೆ ಆ ವ್ಯಾಪಾರಿ ? "

" ಬ್ಲಾಕ್ ಮಾರ್ಕೆಟ್ ಮಾಡಿ ಹಣ ಗಳಿಸಿದ್ದೊಂದು ಬಿಟ್ಟರ ಅವಗ ಬ್ಯಾರೆ ಏನು ಬರತ್ತೈತಿ ? ಕನ್ನಡದಾಗ ನೆಟ್ಟಗ ಬರೀಲಿಕ್ಕೆ ಸುದ್ದಾ ಬರೂದಿಲ್ಲ. ಸಭಾದಾಗ ಎದ್ದು ನಿಂತು ಎಂದೂ ಮಾತಾಡಿದವನೂ ಅಲ್ಲ. ಇವನ ಗಂಟು ಹಾಳು ಮಾಡುವ ಯುಕ್ತೀ ಹಾಕಿ ನಾಕು ಮಂದಿ ಲಫಂಗರು ಇವನ್ನೂ ಹುರುಪು ಮಾಡಿ ಅರ್ಜೀ ಕೊಡಿಸಿದಾರ. ಈಗಾಗಲೇ ಐದಾರು ಸಾವಿರ ಹಾಳುಮಾಡಿದ್ದಾರಂತ ಕೇಳೀನಿ. ಇಪ್ಪತ್ತು ವೋಟು ಅವಗ ಕೊಟ್ಟರ ನಾಕು ಸಾವಿರರೂಪಾಯಿ ಕೊಡುತೀವಂತ ಹೇಳುತಾ ಬಂದಿದ್ರು ನನ್ನ ಹತ್ತರ...."

" ಹಾ ? ನೀವೇನು ಹೇಳಿದಿರಿ ? "

" ಹೋಗೋಗ್ರಿ. ನಮ್ಮ ರುದ್ರಗೌಡರೇ ಇರುವಾಗ ನಿಮಗ್ಯಾಕ ನಾವು ವೋಟು ಕೊಡೂಣು ? ಅಂತ ಬಯ್ದು ಕಳಿಸಿದಿನಿ. "

" ಸೆಟ್ಟಿಯೂ ಹಣ ಕೊಡೂದಕ್ಕ ತಯಾರಾಗಿರಬೇಕಲ್ಲ! "

" ಇಪ್ಪತ್ತು ವೋಟು ಖಾತ್ರಿಯಾಗಿ ಹಾಕಿದರೆ ಐದು ಸಾವಿರ ಕೊಡ್ತೀವಂತ ಅವನೂ ಹೇಳಿದ. "

ನನಗೆ ಪುನಃ ನಗುವುಕ್ಕಿ ಬಂದಿತು.

"ನೀವು ಸಿಟ್ಟಾಗದಿದ್ದರ ಒಂದ್ಮಾತು ಹೇಳ್ತೀನಿ ಗಿರಿಯಪ್ಪ. ನಿಜವಾಗಿ ಇದೊಂದು ರೊಕ್ಕದ ಸುಗ್ಗಿ. ಪ್ರತಿಯೊಬ್ಬ ಉಮೇದುವಾರನಿಂದಲೂ ಎಷ್ಟೆಷ್ಟು ಬರ್ತದೋ ಅಷ್ಟು ತಗೊಂಡು ಬಿಟ್ಟು ವೋಟು ಮಾತ್ರ ನಮ್ಮ ಗೌಡರಿಗೇ ಹಾಕಿದರಾಯಿತಲ್ಲ ? "

"ಹೌದೌದು. ಹಂಗೇ ಮಾಡಿರಿ. ನಿಮಗ ರೊಕ್ಕ ಹೆಚ್ಚಾದರ ನಮಗೂ ಅಷ್ಟು ಕೊಡ್ರಿ," ಎಂದ ಶಿವಲಿಂಗ, ಹಲ್ಲು ಕಿರಿಯುತ್ತ.

ಕುಡಿತದ ಅಮಲಿನಲ್ಲಿದ್ದ ಗಿರಿಯಪ್ಪನಿಗೆ ನಾವು ಅವನನ್ನು ಹಾಸ್ಯ ಮಾಡುತ್ತಿರುವೆವೆಂದು ಅನ್ನಿಸಿರಬೇಕು. ಆತ ಕಣ್ಣು ಕೆಂಪಗೆ ಮಾಡಿ. ಮತ್ತೊಮ್ಮೆ ಗುಡಾರದ ಮೇಲೆ ಗುದ್ದಿ, ಹೇಳಿದ :

"ಅಂಥಾದ್ದು ಯಾವದೂ ನನ್ನ ಹತ್ತರ ನಡಿಯೂದಿಲ್ಲರೀ. ತಿಳು ಕೊಂಡು ಬಿಡ್ರಿ. ನಂದು ಯಾವಾಗಲೂ ಒಂದೇ ಮಾತು ನಮ್ಮ ಗೌಡರು ಎಂ. ಎಲ್. ಎ. ಆದರ ನಾನ್ಯ ಆದಂಗ. ಅವರನ್ನ ಬಿಟ್ಟು ರೊಕ್ಕದ ಆಸೇಕ್ಕ ಬೀಳುವಂಥಾ ಚಿಲ್ಲರ ಮನುಷ್ಯಾ ನಾನಲ್ಲ ! "

"ಆತಲ್ಲ ಗಿರಿಯಣ್ಣಾ. ನಾವಿನ್ನೂ ಬ್ಯಾರೆ ಊರಿಗೆ ಹೋಗೂದೈತಿ ಹೊರಡುತೀವಿ," ಎಂದ ರುದ್ರಗೌಡ.

"ನೀವು ನಮ್ಮ ವೋಟಿನ ಕಾಳಜೀನೇ ಬಿಟ್ಟು ಬ್ಯಾರೆ ಮಂಡಲಗಳ ಬೆಂಬಲಕ್ಕ ಪ್ರಯತ್ನ ಮಾಡಿರಿ. ಮತ್ತೆ ಇಲ್ಲಿಗೆ ಬರೂದು ಕೂಡಾ ಅಗತ್ಯ ಇಲ್ಲ. ನಿರೀಕ್ಷಕರು ಬರುವ ದಿವಸ ನಾನೇ ಎಲ್ಲಾರನ್ನೂ ಕರಕೊಂಡು ಬಂದು ವೋಟು ಹಾಕಸ್ತೀನಿ. "

"ನಿಮಗ ಗೊತ್ತಾಗದಂಗ ನಿಮ್ಮ ಮಂಡಲದವರ್ಯಾರಾದರೂ ಬ್ಯಾರೆ ಯವರಿಗೆ ವೋಟು ಹಾಕಿದರ ? " ಎಂದ ಶಿವಲಿಂಗ.

"ಅದೆಂದೂ ಶಕ್ಯ ಇಲ್ಲ. ನನ್ನ ಮಾತು ಮೀರಿ ಮೋಸಮಾಡುವ ತಾಕತ್ತು ಯಾರಿಗೂ ಇಲ್ಲ ನಮ್ಮ ಮಂಡಲದಾಗ ! " ಎನ್ನುತ್ತ ಮೀಸೆ ತಿರು ವಿದ ಗಿರಿಯಪ್ಪ.

ಅವನನ್ನು ಬೀಳ್ಕೊಂಡು ನಾವು ಮುಂದಿನ ಊರಿಗೆ ಪಯಣ ಬೆಳಸು ತ್ತಿದ್ದಂತೆ ಎದುರಿನಿಂದ ಸೈಕಲ್ ಮೇಲೆ ಬರುತ್ತಿದ್ದ ಕಾರ್ಯಕರ್ತನೊಬ್ಬ ಸಿಕ್ಕಿದ.

ಗಿರಿಯಪ್ಪನ ಮಂಡಲ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿದ್ದ ಅವನನ್ನೂ ನಮ್ಮ ಪಕ್ಷಕ್ಕೆ ಸೇರಿಸಿಕೊಂಡು ಹೋಗುವುದು ಅಗತ್ಯವೆಂದು ಬಗೆದು ಕಾರು ನಿಲ್ಲಿಸಿ ಅವನನ್ನು ಮಾತನಾಡಿಸಿದೆವು.

" ಯಾವ ಕಡೆ ಹೋಗಿದ್ದಿರೀ ರಾಮಣ್ಣನವರೆ ? ನಾವು ನಿಮ್ಮೂರಿಗೆ ಹೋಗಿಬಂದೆವಲ್ಲ ! " ಎಂದು ರುದ್ರಗೌಡ ಆರಂಭಿಸುತ್ತಲೂ ರಾಮಣ್ಣ ಬಿಂಕ ದಿಂದ ಹೇಳಿದ :

" ಒಂದೆರಡು ವಾರದಿಂದ ಒಂದೀಟೂ ಸವುಡಿಲ್ಲ ನೋಡಿರಿ. ಬರೀ ಎಲೇಶನ್ನಿನ ಗದ್ದಲ. "

" ನೀವೆಲ್ಲಾ ನನಗೇ ಬೆಂಬಲ ಕೊಡಬೇಕ್ರೀ. ನಿಮ್ಮ ಅಧ್ಯಕ್ಷರಿಗೂ ಹೇಳಿ ಬಂದೀವಿ. ಇಪ್ಪತ್ತು ವೋಟೂ ಹಾಕಿಸ್ತೀನಂತ ವಚನ ಕೊಟ್ಟಿದಾರ. "

" ಹಿಂಗೇನು ? ಹಂಗಾದರ ನನ್ನ ಯಾಕ ಕೇಳುತೀರಿ ? ಅಧ್ಯಕ್ಷರದಾರ, ನೀವದೀರಿ. ಹಾಕಿಸಿಕೊಳ್ಳಿರಲ್ಲ ವೋಟು ! "

" ಛೆ ! ಛೆ ! ಹಿಂಗಂದರ ಹೆಂಗ ರಾಮಣ್ಣ ? ಕಾರ್ಯದರ್ಶಿಯನ್ನ ಬಿಟ್ಟು ಅಧ್ಯಕ್ಷರೊಬ್ಬರೇ ಏನು ಮಾಡಿಯಾರು ? ನಿಮ್ಮದೂ ಬೆಂಬಲ ಬೇಕಾಗ್ತದ. ನೋಡಿರಪ್ಪ, ನಾನೂ ನಿಮ್ಮವನೇ, ರೈತರ ಪ್ರತಿನಿಧಿ . "

" ನೋಡೂಣು. ಕಾರ್ಯಕರ್ತರೆಲ್ಲಾ ಕೂಡಿ ವಿಚಾರ ಮಾಡಬೇಕಾಗತೈತಿ. ಇದು ಒಬ್ಬೊಬ್ಬರೇ ನಿಶ್ಚಯಿಸುವಂಥಾ ಮಾತಲ್ಲ. ಗಿರಿಯಪ್ಪ ಯಾವಾಗಲೂ ಸರ್ವಾಧಿಕಾರ ಮಾಡಾಕ ಹೋಗುತಾನ. ಅವನ ಮಾತು ಯಾರೂ ಕೇಳೂದಿಲ್ಲ. ಅದು ಬ್ಯಾರೇ."

ಇಪ್ಪತ್ತು ಮತಗಳೆಲ್ಲ ತನ್ನವೇ ಎಂಬ ವಿಶ್ವಾಸದಿಂದ ಸಂತುಷ್ಟನಾಗಿದ್ದ ರುದ್ರಗೌಡ, ರಾಮಣ್ಣನ ಈ ಮಾತಿನಿಂದ ಧೈರ್ಯ ಕಳೆದುಕೊಂಡ. ಗಿರಿಯಪ್ಪನ ಮಂಡಲ ಕಾಂಗ್ರೆಸ್ ಸಮಿತಿಯಲ್ಲಿ ಒಕ್ಕಟ್ಟು ಇರಬಹುದು, ಅಧ್ಯಕ್ಷನ ಮಾತನ್ನು ಎಲ್ಲ ಸದಸ್ಯರೂ ಕೇಳುತ್ತಿರಬಹುದು—ಎಂದೆಲ್ಲ ಭಾವಿಸಿಕೊಂಡಿದ್ದ ರುದ್ರಗೌಡನಿಗೆ ನಿರಾಸೆಯಾಗದಿರಲಿಲ್ಲ.

" ಅವರೂ ನೀವು ಎಲ್ಲಾರೂ ಕೂಡಿ ನನಗ ಸಹಾಯ ಮಾಡಲಿಕ್ಕೇ ಬೇಕು ರಾಮಣ್ಣ, ನಿಮ್ಮ ಖರ್ಚಿಗೆ ಹಣ ಬೇಕಾದರ ಕೊಡುತೀನಿ."

" ಕೊಡಿರಲ್ಲ ? ಯಾರು ಬ್ಯಾಡಂತಾರ ? ಎಷ್ಟು ಕೊಡುತೀರಿ ? "

"ನೀವು ಮತ್ತು ಗಿರಿಯಪ್ಪ ಹೇಳಿದಷ್ಟು."

"ಗಿರಿಯಪ್ಪ ನಿಮ್ಮ ಬೀಗರು. ನಿಮ್ಮಿಂದ ಹಣ ಕೇಳೂದು ಶಕ್ಯ ಇಲ್ಲ. ನೀವು ಕೊಡೂದಾದರ ನನಗೇ ಕೊಡಬೇಕು. ಉಳಿದದ್ದು ನಾ ನೋಡಿ ಕೊಂತೀನಿ."

"ಹಂಗೇ ಮಾಡೂಣು. ಎರಡು ದಿನ ಬಿಟ್ಟು ನಾ ಮತ್ತ ಬರ್ತೀನಿ ನಿಮ್ಮ ಊರಿಗೆ," ಎಂದ ರುದ್ರಗೌಡ. ಅವನ ಮುಖದ ಮೇಲಿನ ಕಳೆಯೆಲ್ಲವೂ ಜರ್ರನೆ ಜರಿದುಹೋಗಿತ್ತು.

ಮತ್ತೆ ಬೇರೆ ಊರಿಗೆ ಹೋಗುವುದನ್ನು ರದ್ದುಗೊಳಿಸಿ ನಾವು ಕ್ಯಾತ ನೂರಿಗೆ ಬಂದೆವು. ಅರ್ಜಿ ಕೊಡುವ ಮೊದಲು ರುದ್ರಗೌಡನಲ್ಲಿದ್ದ ಉತ್ಸಾಹ ಈಗ ಕೊಂಚವೂ ಉಳಿದಿರಲಿಲ್ಲ.

"ಎಲ್ಲಿ ಹೋದಲ್ಲೆಲ್ಲಾ ಬರೀ ರೊಕ್ಕ ರೊಕ್ಕ ಅಂತಾರಲ್ಲ ಸದಾಶಿವ ? ಇಪ್ಪತ್ತು ಹೋಟಿಗೇ ಐದು ಸಾವಿರ ಅಂತೆ ! ಈ ಲೆಕ್ಕದಿಂದ ನೋಡಿದರ ನಾವು ಟಿಕೀಟು ದೊರಕಿಸಿಕೊಳ್ಳೂದಕ್ಕೇ ಇಪ್ಪತ್ತು ಮೂವತ್ತು ಸಾವಿರ ರುಪಾಯಿ ಬೇಕಾಗತೈತ್ಯೋ ಏನೊ," ಎಂದ ರುದ್ರಗೌಡ.

"ಎಲೇಶನ್ ಆದಮ್ಯಾಲ ಖರ್ಚು ಬರೂದೇ ಅಲ್ಲರೀ ಗೌಡರೆ ? ಇದಕ್ಯಾಕ ಚಿಂತೀ ಮಾಡುತೀರಿ ? ಅರ್ಜಿ ಅಂತೂ ಹಾಕಿದೀವಿ ಅಂದಮ್ಯಾಲ ಈಗ ಯಾತಕ್ಕೂ ಅನುಮಾನ ಮಾಡುವ ಹಂಗಿಲ್ಲ," ಎಂದ ಶಿವಲಿಂಗ.

"ಇಪ್ಪತ್ತುಸಾವಿರ ಬರೀ ಟಿಕೀಟಿಗೇ ಖರ್ಚು ಮಾಡೂದಕ್ಕ ನಾನೇನು ಜಮೀನ್ದಾರನೇ ? ಇನಾಂದಾರನೇ ? ಎಲ್ಲಿಂದ ತರೂದು ಇಪ್ಪತ್ತುಸಾವಿರ ?" ಎಂದ ರುದ್ರಗೌಡ.

"ಇಂಥಾ ಅಳುಬುರುಕ ಮಾತೆಲ್ಲಾ ನನಗ ಸರಿಬರೂದಿಲ್ಲ ಗೌಡರೇ. ಬೇಕಾದರ ಒಂದು ಹೊಲಾ ಮಾರಿ ಬಿಡಿರಿ. ಟಿಕೀಟು ತಗೊಂಡೇ ತಗೋತೀವಿ ಅಂತ ಒಳ್ಳೇ ಡೌಲಿನಿಂದ ಬೆಂಗಳೂರಿಗೆ ಹೋಗಿ ಬಂದೀವಿ. ಈಗ ರೂಪಾಯಿ ಇಲ್ಲಂತ ಕುಂತರ ಮಾನ ಉಳಿದೀತೇನು ?" ಎಂದು ವಾದಿಸಿದ ಶಿವಲಿಂಗ.

ರುದ್ರಗೌಡ ನಿರುತ್ತರನಾಗಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದು ಅನಂತರ ನಿಧಾನವಾಗಿ ತಲೆಯೆತ್ತಿ ಹೇಳಿದ:

"ಆ ರಾಮಣ್ಣನೇನು ನನಗ ವೋಟು ಹಾಕಿಸುವಂಗ ಕಾಣೂದಿಲ್ಲ."

"ರೂಪಾಯಿ ಸುರಿದರ ರಾಮಣ್ಣ ಯಾಕ, ಕಾಮಣ್ಣನೂ ಹಾಕುತಾನ ವೋಟು."

"ಊಂಹೂಂ. ನನಗೇನು ನಂಬಿಕೆಯಿಲ್ಲ. ರಾಮಣ್ಣ ಲಿಂಗಾಯತನಂತೂ ಅಲ್ಲವಲ್ಲ ? ಆವನ ಜಾತಿಯವನೂ ಒಬ್ಬ ಅರ್ಜಿ ಹಾಕಿದಾನಲ್ಲ ? ತಮ್ಮ ಜಾತಿಯವನ್ನ ಬಿಟ್ಟು ರಾಮಣ್ಣ ನನಗ ಬೆಂಬಲ ಕೊಟ್ಟಾನೇನು ?"

"ರೊಕ್ಕ ಒಂದಿದ್ದರಾಯ್ತು. ಜಾತಿ ಪಾತಿ ಯಾರೂ ನೋಡೂದಿಲ್ಲ." ಎಂದ ಶಿವಲಿಂಗ.

"ಅವನು ರೊಕ್ಕ ಕೊಡೂದಕ್ಕೂ ಗಟ್ಟಿ ಅದಾನಲ್ಲ? ದೊಡ್ಡ ಸಾವುಕಾರ. ಅವಗೇನು ಕಡಿಮಿ ?" ಎಂದ ರುದ್ರಗೌಡ.

ಎರಡುಮೂರು ದಿನಗಳ ವರೆಗೆ ಉದಾಸೀನವಾಗಿಯೇ ಇದ್ದ ರುದ್ರಗೌಡ ಶಿವಲಿಂಗ ಮಾತ್ರ ಯಾವಾಗಲೂ ಅವನಿಗೆ ಅಂಟಿಕೊಂಡೇ ಇದ್ದು ಗೌಡನನ್ನು ಹುರಿದುಂಬಿಸಲು ಯತ್ನಿಸುತ್ತಿದ್ದ. ಹಿಡಿದ ಕೆಲಸವನ್ನು ಅರ್ಧಕ್ಕೇ ಬಿಡಬಾರ ದೆಂದುಕೊಂಡು ರುದ್ರಗೌಡ ತನ್ನದೊಂದು ಹೊಲವನ್ನು ಯಾರಿಗೋ ಒತ್ತೆ ಯಿಟ್ಟು ಹತ್ತುಸಾವಿರ ರೂಪಾಯಿ ಶೇಖರಿಸಿದ.

ಮತ್ತೆ ನಮ್ಮ ಕಾರು ಹಳ್ಳಿ ಹಳ್ಳಿ ಸುತ್ತತೊಡಗಿತು.

# ೧೪

ನಾವೆಲ್ಲರೂ ನಿರೀಕ್ಷಿಸುತ್ತಿದ್ದ, ಚುನಾವಣಾ ಸಮಿತಿಯ ನಿರೀಕ್ಷಕರು ಬರುವ ದಿನ ಕೊನೆಗೊಮ್ಮೆ ಬಂದಿತು.

ಅಂದು ನಮ್ಮ ತಾಲೂಕಿನ ಸ್ಥಳದಲ್ಲಿ ಗದ್ದಲವೋ ಗದ್ದಲ. ಆ ಚಿಕ್ಕ ಊರಿನಲ್ಲಿ ಎಲ್ಲಿ ನೋಡಿದರೂ ಬಿಳಿಯ ಟೋಪಿಗಳೇ ಕಾಣಿಸುತ್ತಿದ್ದುವು. ನಾವೂ ಎಂಟುಹತ್ತು ಜನರು ಕೂಡಿ ಬೆಳಗಿನ ಬಸ್ಸಿಗೇ ಅಲ್ಲಿಗೆ ಹೋಗಿ ಮಿತ್ರ ರೊಬ್ಬರ ಮನೆಯಲ್ಲಿ ಬಿಡಾರ ಹೂಡಿದೆವು. ಬೆಳಿಗ್ಗೆ ಹತ್ತುಗಂಟೆಗಾಗಲೇ ತಾಲೂಕಿನ ಸ್ಥಳದಲ್ಲಿರುವುದಾಗಿ ತಿಳಿಸಿದ್ದ ಗಿರಿಯಪ್ಪ ಹನ್ನೆರಡು ಕಳೆದರೂ ಕಾಣಿಸಿಕೊಳ್ಳದಿದ್ದುದರಿಂದ ರುದ್ರಗೌಡನಿಗೆ ಚಿಂತೆಗಿಟ್ಟುಕೊಂಡಿತು. ಮತ್ತೆ ಒಂದು ಬಾಡಿಗೆಯ ಟ್ಯಾಕ್ಸಿ ತೆಗೆದುಕೊಂಡು ಆತ ಗಿರಿಯಪ್ಪನ ಊರಿಗೆ ಹೋಗಿ ಅಲ್ಲಿಯೂ ಅವನನ್ನು ಕಾಣದೆ ನಿರಾಶನಾಗಿ ಸಂಜೆಯ ನಾಲ್ಕು ಗಂಟೆಯ ಸಮಯಕ್ಕೆ ಹಿಂದಿರುಗಿ ಬಂದ.

" ಗಿರಿಯಪ್ಪ ಸಿಗಲಿಲ್ಲೇನ್ರಿ ಗೌಡರೆ ? "

" ಇಲ್ಲಪ್ಪ. ನಿನ್ನೆ ಸಾಯಂಕಾಲವೇ ಅವ ಊರು ಬಿಟ್ಟನಂತ ಮನೆಯಲ್ಲಿ ಹೇಳಿದರು. ಇಲ್ಲೇ ಎಲ್ಲಾದರೂ ಇದ್ದಾನು ಅಂತ ಅವರಂದರು."

" ಇದೇ ಈಗ ಚಹಾದಂಗಡಿಯೊಳಗ ರಾಮಣ್ಣ ಭೆಟ್ಟಿಯಾಗಿದ್ದ," ಎಂದು ಶಿವಲಿಂಗ ಹೇಳಿದ.

" ಗಿರಿಯಪ್ಪನನ್ನ ಅವನೇನಾದರೂ ನೋಡಿದ್ದನಂತೇನು ? "

" ಇಲ್ಲಂತೆ. ಅವಗೂ ನಿನ್ನೆಯಿಂದ ಭೆಟ್ಟಿಯಾಗಿಲ್ಲಂತೆ."

" ಕಳ್ಳರು ! ಎಲ್ಲಾ ಕಳ್ಳರು ! ನನಗ ಮೋಸ ಮಾಡಬೇಕಂತಲೇ ಎಲ್ಲೋ ಅಡಗಿಕೊಂಡು ಕುಂತಿರಬೇಕು ! " ಎಂದ ರುದ್ರಗೌಡ.

"ಅವತ್ತು ನೀವು ಅಂದಂತೇ ಆಯಿತ್ತು ಗೌಡರೇ. ರಾಮಣ್ಣನೂ ಅವನ ಗುಂಪಿನವರೂ ಆ ಇನ್ನೊಬ್ಬ ಉಮೇದುವಾರನ ಸಂಗಡ ಚಹಾ ಕುಡಕೊಂತ ತಿರುಗತಿದ್ದಾರ. ಚಹಾ ಅಂದರ ಬರೀ ಚಹಾ ಅಂತ ತಿಳಿದೀರಿ! ಉಂಡಿ. ಮೈಸೂರಪಾಕು, ಪುರಿಪಲ್ಯ, ಅದೂ ಇದೂ ಎಲ್ಲಾ!" ಎಂದು, ನಾಲಗೆ ಚಪ್ಪರಿಸುತ್ತ ಹೇಳಿದ ಶಿವಲಿಂಗ.

ಸಾಯಂಕಾಲ ಐದು ಗಂಟೆಗೆ ನಿರೀಕ್ಷಕರಾದ ಗುರುಪಾದಪ್ಪನವರು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷನೊಡನೆ ಬರುವುದಾಗಿ ಗೊತ್ತಾಗಿತ್ತು. ತಾಲೂಕು ಕಾಂಗ್ರೆಸ್ ಕಚೇರಿಯಲ್ಲಿ ಆಗ ಕಾಲಿಡಲೂ ಸ್ಥಳವಿರಲಿಲ್ಲ. ಕಚೇರಿಯ ಅಕ್ಕಪಕ್ಕದಲ್ಲಿನ ಓಣಿಗಳೂ ಕಾಂಗ್ರೆಸ್ ಕಾರ್ಯಕರ್ತರಿಂದ ತುಂಬಿಹೋಗಿದ್ದುವು. ಸಂದಿಗೊಂದಿಗಳಲ್ಲಿ ಉಮೇದುವಾರರ ಹಸ್ತಕರು ನೆರೆದು ಮಂಡಲ ಕಾಂಗ್ರೆಸ್ ಸದಸ್ಯರಿಗೆ ಬಹಿರಂಗವಾಗಿಯೆ ಬೇಡಿಕೊಳ್ಳುತ್ತಿದ್ದರು.

ನಾಲ್ಕಾರು ಗಲ್ಲಿಗಳಲ್ಲಿ ತಿರುಗಿಬಂದ ಶಿವಲಿಂಗ ರುದ್ರಗೌಡನನ್ನು ಒಂದು ಪಕ್ಕಕ್ಕೆ ಕರೆದೊಯ್ದ.

"ಒಂದು ವೋಟಿಗಾಗಿ ನೂರುನೂರರ ನೋಟು ಹಾರಿಸ್ತಿದಾರ ಗೌಡರೆ. ನಾವೂ ಏನಾರ ಪ್ರಯತ್ನ ಮಾಡಬೇಕು. ಸುಮ್ಮನೆ ಕುಳಿತರ ಘಾತ ಆಗತೈತಿ."

"ಗಿರಿಯಪ್ಪ ಕಾಣೂದಿಲ್ಲಲ್ಲ ?"

"ಅವನ್ನ ನಂಬಿಕೊಂಡು ಕುಂತರ ಉಪಯೋಗ ಇಲ್ಲ. ನಾವೇ ನಮಗ ತಿಳಿದದ್ದು ಮಾಡಬೇಕು. ಆ ಮೂಲಿಯೊಳಗ ರಾಮಣ್ಣ ಕುಂತಾನ. ಅವಗ ಏನಾರ ಕೊಟ್ಟು ಬಿಡೂಣೇನು ?"

"ಇತ್ತ ಕರದಾದರೂ ಕರಿ. ಏನಂತಾನೋ ನೋಡೂಣು."

ಶಿವಲಿಂಗ ಪುನಃ ಹೋಗಿ ಒಬ್ಬನೇ ಮರಳಿ ಬಂದ.

"ಅವಗ ಪುರಸತ್ತು ಇಲ್ಲಂತ್ರೀ ಗೌಡರೇ. ಸೆಟ್ಟರು ಆರುಸಾವಿರ ಕೊಡೂದಕ್ಕ ತಯಾರಾಗಿದಾರಂತ. ಸೆಟ್ಟರ ಏಜಂಟರು ಅವನ್ನ ಹಿಡುಕೊಂಡು ಕುಂತಾರ."

"ಕುಂತರ ಕುಂಡ್ರಲಿ, ಹಾಳಾಗಿ ಹೋಗಲಿ. ಸೆಟ್ಟರಿಗೇ ಹಾಕಿಕೊಳ್ಳಲಿ ವೋಟು. ನನ್ನಮ್ಯಾಲ ಪ್ರೀತಿಯಿದ್ದವರು ಒಬ್ಬಿಬ್ಬರು ಹಾಕಿದರ ಸಾಕು," ಎಂದು, ಬೇಸರದಿಂದ ಹೇಳಿದ ರುದ್ರಗೌಡ.

" ಛೆ, ಛೆ, ಹಿಂಗ ಬೇಸರ ಮಾಡಿಕೊಂಡರ ಹೆಂಗರಿ ಗೌಡರೆ? ಒಂದ್ಯಾಡ್ನು ಸಾವಿರ ಆದ್ರೂ ಕೊಡ್ರಿ ನನ್ನ ಕೈಯಾಗ. ನಾನೇ ಪ್ರಯತ್ನ ಮಾಡಿ ನೋಡು ಕೀನಿ," ಎಂದ ಶಿವಲಿಂಗ.

ರುದ್ರಗೌಡ ಮತ್ತೊಂದು ಮಾತನಾಡದೆ ಎರಡುಸಾವಿರ ರೂಪಾಯಿ ತೆಗೆದುಕೊಟ್ಟ. ಜಾಕೀಟಿನ ಒಳಕಿಸೆಯಲ್ಲಿ ನೋಟು ತುಂಬಿಕೊಂಡು, ಗೆದ್ದ ಕುದುರೆಯಂತೆ ರೀವಿಯಿಂದ ಹೆಜ್ಜೆಯಿಡುತ್ತ ಶಿವಲಿಂಗ ಯಾವುದೋ ಗಲ್ಲಿಗೆ ನುಗ್ಗಿದ.

ಐದೂವರೆಯಾಗುತ್ತಿದ್ದ ಹಾಗೆ ನಿರೀಕ್ಷಕರ ಕಾರು ಬಂದಿತು. ಮೈಸೂರಿನ ಸೌಜನ್ಯ, ಗಾಂಭೀರ್ಯಗಳ ಮೂರ್ತಿಮಂತ ಪ್ರತೀಕದಂತಿದ್ದ ಗುರುಪಾದಪ್ಪ ನವರು ನಿಧಾನವಾಗಿ ಕಾರಿನಿಂದಿಳಿದು, ನೆರೆದಿದ್ದ ಕಾಂಗ್ರೆಸ್ಸಿಗರಿಗೆಲ್ಲ ನಮಸ್ಕಾರ ಸಲ್ಲಿಸಿ, ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷನ ಜೊತೆಯಲ್ಲಿ ಕಚೇರಿಯಲ್ಲಿ ಪ್ರವೇಶಿಸಿದರು. ಒಳಗೆ ಕಾದು ನಿಂತಿದ್ದ ಬಸೆಟ್ಟಿ ದೊಡ್ಡದೊಂದು ಹೂ ಹಾರ ಹಾಕಿ ನಿರೀಕ್ಷಕರನ್ನು ಸ್ವಾಗತಿಸಿದ!

" ಓಹ್ಹೊ ! ತಾವೂ ಇಲ್ಲಿದೀರಲ್ಲ ? " ಎಂದರು ಗುರುಪಾದಪ್ಪ.

" ಇರಲಿಕ್ಕೇ ಬೇಕಲ್ರಿ ? ನಾನೂ ಒಬ್ಬ ಉಮೇದುವಾರ ! ನೆನಪಿರಲಿ ! " ಎಂದ ಬಸೆಟ್ಟಿ.

" ಸೆಟ್ಟರು ನಮ್ಮ ಜಿಲ್ಲೆಯಲ್ಲೇ ಅತ್ಯುತ್ತಮ ಕಾರ್ಯಕರ್ತರು ! " ಎಂದ ಮಲ್ಲಿಕಾರ್ಜುನಪ್ಪ.

" I Know ! I Know ! ಸೆಟ್ಟರು ನಮಗೆ ದೂರದಿಂದ ಆಪ್ತರೂ ಆಗಬೇಕಲ್ಲ ಸ್ವಾಮಿ ! " ಎಂದರು ಗುರುಪಾದಪ್ಪ.

ಮೂಲೆಯಲ್ಲಿ ನಿಂತುಕೊಂಡಿದ್ದ ಬಸೆಟ್ಟಿಯ ಪತ್ನಿ ಪ್ರಭಾವತಿ ಮುಂದೆ ಬಂದು ನಮಸ್ಕರಿಸಿದಳು.

"ನಮಸ್ಕಾರ....ನಮಸ್ಕಾರ...ಅಮ್ಮಾವರೂ ಬಂದಿದಾರಲ್ಲ! ಸಂತೋಷ! ಸಂತೋಷ ! ಸಂತೋಷ " ಎಂದರು ಗುರುಪಾದಪ್ಪ.

" ಅವರೂ ಅರ್ಜಿ ಹಾಕಿಕೊಂಡಾರ್ರೀ " ಎಂದ ಮಲ್ಲಿಕಾರ್ಜುನಪ್ಪ.

" Very good ! Very good ! ನಮ್ಮ ಮಹಿಳೆಯರೂ ಮುಂದೆ ಬಂದು ಕೆಲಸ ಮಾಡಬೇಕು. ಸಂತೋಷ....ಸಂತೋಷ...." ಎಂದರು ಗುರು ಪಾದಪ್ಪ.

ಆ ಸಂಭಾಷಣೆಯನ್ನಾಲಿಸುತ್ತ ಹೊರಗೆ ನಿಂತಿದ್ದ ಜನರಲ್ಲಿ ಕೆಲವರು ನಕ್ಕರು. ಒಡನೆಯೇ. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷ ಅತ್ತ ತಿರುಗಿ. " ನಿರೀಕ್ಷಕರ ಎದುರು ಗದ್ದಲ ಮಾಡಬಾರದು. ನಡೀರಿ ಎಲ್ಲಾರೂ. ಒಂದೊಂದೇ ಮಂಡಲ ದವರನ್ನ ಕರೀತೀವಿ ಒಳಗೆ. ಶಿಸ್ತಿನಿಂದ ಬಂದು ನಿಮ್ಮ ನಿಮ್ಮ ಅಭಿಪ್ರಾಯ ಕೊಡಿರಿ, " ಎಂದು ಹೇಳಿದ. ಕಾಂಗ್ರೆಸ್ ಸ್ವಯಂಸೇವಕರು ಬಂದು ರಸ್ತೆಯ ಮೇಲೆ ನೆರೆದಿದ್ದ ಜನರನ್ನೆಲ್ಲ ದೂರ ಸಾಗಿಸಿದರು.

ಕಚೇರಿಯೆದುರಿಗಿದ್ದ ಅಂಗಡಿಯೊಂದರಲ್ಲಿ ಕುಳಿತುಕೊಂಡು ನಾವು ಆ ನಾಟಕ ನೋಡತೊಡಗಿದೆವು. ಅದುವರೆಗೆ ಎಲ್ಲಿಯೋ ಮಾಯವಾಗಿದ್ದ ಮಂಡಲ ಕಾಂಗ್ರೆಸ್ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು. ಸದಸ್ಯರು ಗುಂಪು ಗುಂಪಾಗಿ ಬಂದು ಮತ ಹಾಕಲು ಹೋಗತೊಡಗಿದರು. ಎಂಟು ಹತ್ತು ಜನರೊಡನೆ ಕಚೇರಿಯೆದುರು ಕಾಣಿಸಿಕೊಂಡ ಗಿರಿಯಪ್ಪ ನಮ್ಮ ಕಡೆಗೆ ಹೊರ ಳಿಯೂ ನೋಡದೆ ನೇರವಾಗಿ ಕಚೇರಿಗೆ ಪ್ರವೇಶಿಸಿ, ಹತ್ತು ನಿಮಿಷಗಳ ತರು ವಾಯ ಹಿಂದಿರುಗಿ ಬಂದು, ರುದ್ರುಗೌಡನ ಕೈಗೆ ಸಿಕ್ಕದಂತೆ ನುಸುಳಿಕೊಂಡು ಹೋಗಲುಪ್ರಯತ್ನಿಸುತ್ತಿದ್ದಂತೆ, ಗೌಡ ಎದ್ದು ಹೋಗಿ ಅವನನ್ನು ಕರೆದು ಕೊಂಡು ಬಂದ.

" ಯಾಕ ಗಿರಿಯಣ್ಣಾ ? ಹಿಂಗ ಮಾಡಿದಿರಿ ? ಮುಂಜಾನೆಯಿಂದ ಪತ್ತೆಯೇ ಇಲ್ಲ ? "

" ಸವುಡೇ ಸಿಗಲಿಲ್ರಿ ಗೌಡರೇ. ನಮ್ಮ ಸದಸ್ಯರನ್ನೆಲ್ಲಾ ಕೂಡಿಸಲಿಕ್ಕಂತ ನಿನ್ನೆ ರಾತ್ರಿಯಿಂದ ಅಲೀತಾ ಇದೀನಿ ಒಂದೇ ಸಮನೆ. ಊಟ ಕೂಡಾ ಮಾಡಿಲ್ಲ ಇನ್ನೂ ! " ಎಂದ ಗಿರಿಯಪ್ಪ.

" ರಾಮಣ್ಣ ಬ್ಯಾರೆಯವರಿಗೆ ಹಾಕಿದಾಂಗ ಕಾಣತೈತಿ ? "

" ಅವ ಏನು ಮಾಡಿದನೋ ಏನೊ. ನಾವು ಮಾತ್ರ ಎಂಟು ಮಂದಿ ನಿಮಗೇ ವೋಟು ಹಾಕೀವಿ. "

ಆ ಮಾತನ್ನು ರುದ್ರಗೌಡ ನಂಬಿದನೋ ಇಲ್ಲವೊ, ನಾನಂತೂ ನಂಬ ಲಿಲ್ಲ. ರಾಮಣ್ಣ, ಗಿರಿಯಪ್ಪ ಇಬ್ಬರೂ ಒಂದೇ ಮಾದರಿಯ ವ್ಯಕ್ತಿಗಳೆಂದು ನನಗೆ ಖಚಿತವಾಗಿ ಹೋಗಿತ್ತು. ನಾಲ್ಕೈದು ಜನ ಅರ್ಜಿದಾರರಿಂದಲೂ ಅವರು ಅಷ್ಟಿಷ್ಟು ಹಣ ಸೆಳೆದುಕೊಂಡಿರಲು ಸಾಕು.

ಮತದಾನದ ನಾಟಕ ಮುಗಿಯಬೇಕಾದರೆ ಒಂಭತ್ತು ಗಂಟೆಯಾಯಿತು. ಕೈಯೆತ್ತಿ ನಮಸ್ಕಾರ ಮಾಡುತ್ತ ಹೊರಗೆ ಬಂದ ನಿರೀಕ್ಷಕ ಮಹಾಶಯರು. ಬಸೆಟ್ಟಿ, ಪ್ರಭಾವತಿ, ಮಲ್ಲಿಕಾರ್ಜುನಪ್ಪನವರ ಜೊತೆಯಲ್ಲಿ ಬಸೆಟ್ಟಿಯ ಕಾರಿ ನಲ್ಲಿಯೆ ಕುಳಿತು ಹೊರಟು ಹೋದರು.

ಕಚೇರಿಯೆದುರು ನೆರೆದಿದ್ದ ಜನರು ಮತ್ತೆ ನಕ್ಕರು.

"ಸೆಟ್ಟರಿಗೆ ಟಿಕೀಟು ಸಿಕ್ಕೇ ಸಿಗತ್ತೈತಿ ನೋಡಿರ್‍ರ್ಯೋ !" ಎಂದನೊಬ್ಬ.

"ಸೆಟ್ಟರಿಗೆ ಸಿಗದಿದ್ದರೂ ಅವರ ಹೆಂಡತಿಗಂತೂ ಸಿಕ್ಕೇ ಸಿಗತ್ತೈತಿ !" ಎಂದನಿನ್ನೊಬ್ಬ. ಮತ್ತೆ ಜನರು ಗೊಳ್ಳನೆ ನಕ್ಕರು.

ಆ ರಾತ್ರೆ ಶಿವಲಿಂಗ ನಮಗೆ ಭೆಟ್ಟಿಯಾಗಲೇ ಇಲ್ಲ. ಮಾರನೆಯ ದಿನ ಬೆಳಗ್ಗೆ ಬಿಡಾರಕ್ಕೆ ಬಂದು ಆತ ಹೇಳಿದ :

"ನಿಮಗ ನಲವತ್ತು ವೋಟು ಬಿದ್ದಾವಂತ್ರೀ ಗೌಡರೆ. ರಾಮಣ್ಣನ ಗುಂಪೆಲ್ಲಾ ನಿಮಗೇ ಬೆಂಬಲ ಕೊಟ್ಟೈತಿ."

ಆ ಮಾತಿಗೆ ಪ್ರತಿಯಾಗಿ ರುದ್ರಗೌಡ ಏನನ್ನೂ ಹೇಳಲಿಲ್ಲ. ಗೌಡನಿಂದ ತೆಗೆದುಕೊಂಡ ಎರಡು ಸಾವಿರ ರೂಪಾಯಿಗಳನ್ನು ರಾಮಣ್ಣನಿಗೂ ಕೊಡದೆ ಶಿವಲಿಂಗ ತನ್ನ ಕಿಸೆಗೇ ಸೇರಿಸಿದ್ದುದು ಸ್ಪಷ್ಟವಿತ್ತು.

ಮತ್ತೊಂದು ವಾರ ಕಳೆದ ತರುವಾಯ ಅರ್ಜಿದಾರರಿಗೆ ಲಭಿಸಿದ ಮತ ಗಳ ವಿವರ ಬಹಿರಂಗಕ್ಕೆ ಬಂದಾಗ ನಮಗಾರಿಗೂ ಅಚ್ಚರಿಯೆನಿಸಲಿಲ್ಲ. ಬಸೆಟ್ಟಿ ಎಲ್ಲರಿಗಿಂತ ಹೆಚ್ಚು ಮತ ದೊರಕಿಸಿ ಮೊದಲನೆಯ ನಂಬರು ಪಡೆದಿದ್ದ. ರುದ್ರಗೌಡನಿಗೆ ಮಾತ್ರ ನಾಲ್ಕೇ ನಾಲ್ಕು ಮತ ಬಿದ್ದಿದ್ದುವು.

ಅರ್ಜಿದಾರರ ಬಗೆಗೆ ಎಂ. ಪಿ. ಸಿ. ಸಿ. ಗೆ ಶಿಫಾರಸು ಮಾಡಲು ಜಿಲ್ಲಾ ಕಾಂಗ್ರೆಸ್ ಸಭೆ ಸೇರಿದಂದು ಗಿರಿಯಪ್ಪ ಮಾದಾಪುರಕ್ಕೆ ಬಂದಿದ್ದನಾದರೂ ರುದ್ರಗೌಡನ ಕೈಗೆ ಸಿಗದೆ ತಪ್ಪಿಸಿಕೊಂಡು ತಿರುಗಿದ. ಅಂದು ಶಿವಲಿಂಗನೂ ಮಾದಾಪುರಕ್ಕೆ ಬಂದಿರಲಿಲ್ಲ.

" ಶಿವಲಿಂಗ ಯಾಕೆ ಬಂದಿಲ್ಲ ಗೌಡರೇ ? " ಎಂದು ನಾನು ಕೇಳಿದಾಗ ಗೌಡ ಕರಕರನೆ ಹಲ್ಲು ಕಡಿಯುತ್ತ ಉತ್ತರವಿತ್ತ.

" ನನ್ನದು ಮುಳುಗುವ ದೋಣಿ ಅಂತ ಗೊತ್ತಾತಲ್ಲ ಅವಗ ? ಇನ್ಯಾಕ ಬಂದಾನು ಅವ ನನ್ನ ಹತ್ತರ ? ಆ ಎರಡು ಸಾವಿರ ನುಂಗಿದ್ದು ಸಾಕಾಗಲಿಲ್ಲ. ಮತ್ತ ಹದಿನೈದು ನೂರು ರೂಪಾಯಿ ಬೇಕಂತ ಕೇಳಿದ. ನಾ ಇಲ್ಲ ಅನ್ನುತ್ತಲೂ ನನ್ನ ಬಿಟ್ಟು ಈಗ ಬಸೆಟ್ಟಿಯ ಪಾರ್ಟಿ ಹಿಡಿದು ತಿರುಗಹತ್ತಿದಾನ. ಇಂಥವರನ್ನ ನಂಬಿದ ನಾನೇ ಮೂರ್ಖ !"

ಜಿಲ್ಲಾ ಕಾಂಗ್ರೆಸ್ ಸಮಿತಿಯೂ ಬಸೆಟ್ಟಿಯ ಹೆಸರನ್ನೇ ಶಿಫಾರಸು ಮಾಡಿತೆಂದು ಹೇಳಬೇಕಾದುದೇ ಇಲ್ಲವಲ್ಲ ? ಮಲ್ಲಿಕಾರ್ಜುನಪ್ಪ, ಪ್ರಭಾವತಿ, ಮಾಲಾ, ಕಲ್ಲಪ್ಪ ಮತ್ತು ಆ ಗುಂಪಿನ ಇನ್ನಿತರ ಅರ್ಜಿದಾರರಿಗೆಲ್ಲ ಟಿಕೀಟು ಕೊಡಬೇಕೆಂದು ಶಿಫಾರಸು ಮಾಡಲಾಯಿತು.

ರಾತ್ರಿ ಹತ್ತು ಗಂಟೆಯ ಸಮಯಕ್ಕೆ ನಾವು ಊಟ ಮುಗಿಸಿಕೊಂಡು ರುದ್ರಗೌಡನ ಬಿಡಾರದತ್ತ ಹೊರಟಿದ್ದಂತೆ ಸಿನಿಮಾ ಥಿಯೆಟರಿನ ಬಳಿ ಕಾಗವಾಡ ಸಿಕ್ಕಿದ.

" ಏನಾಯ್ತು ಗೌಡರೇ ? ನೆಚ್ಚಿದ ಎಮ್ಮೆ ಕೋಣನನ್ನೇ ಈಯಿತು. ಅಲ್ಲಾ ? "

" ಇಲ್ಲ. ಕೋಣವೇ ಎಮ್ಮೆಯನ್ನ ಈಯಿತು ! " ಎಂದ ರುದ್ರಗೌಡ, ಕಟುವ್ಯಂಗ್ಯದಿಂದ.

" ನಿರಾಶರಾಗಬಾರದು ಗೌಡರೆ. ಇನ್ನೂ ಎಂ. ಪಿ. ಸಿ. ಸಿ. ಇದೆಯಲ್ಲ? ಕಡೆಯವರೆಗೂ ಹೊಡೆದಾಡಬೇಕು. "

ರುದ್ರಗೌಡ " ಹುಮ್ " ಎಂದನಷ್ಟೆ. ಅವನ ಧ್ವನಿಯಲ್ಲಿ ಕೊಂಚವೂ ಉತ್ಸಾಹವಿರಲಿಲ್ಲ.

# ೧೫

ಮತ್ತೊಂದು ತಿಂಗಳಿನ ತರುವಾಯ ಪ್ರದೇಶ ಕಾಂಗ್ರೆಸ್ ಚುನಾವಣಾ ಸಮಿತಿಯ ಸಭೆ ಬೆಂಗಳೂರಿನಲ್ಲಿ ನಡೆಯಿತು. ಈ ಬಾರಿ ರುದ್ರಗೌಡನೊಬ್ಬನೇ ಬೆಂಗಳೂರಿಗೆ ಹೋಗಿ ಬಂದ. ಅವನ ಹತ್ತಿರ ಇದ್ದ ಹಣವೆಲ್ಲವೂ ಕರಗಿ ಹೋಗಿದ್ದಿತೊ, ಅಥವಾ ಇನ್ನಾವ ಕಾರಣವಿದ್ದಿತೊ, ಅಂತೂ ಅವನೂ ನನ್ನನ್ನು ಬೆಂಗಳೂರಿಗೆ ಕರೆಯಲಿಲ್ಲ. ನನಗೂ ಅಲ್ಲಿಗೆ ಹೋಗಲು ಇಚ್ಛೆಯಿರಲಿಲ್ಲ.

ಒಂದು ವಾರದ ಅನಂತರ ಮಾದಾಪುರಕ್ಕೆ ಹಿಂದಿರುಗಿ ಬಂದು ಆತ ಹೇಳಿದ :

" ಚುನಾವಣಾ ಸಮಿತಿಯವರಾದರೂ ಪಕ್ಷಪಾತ ಮಾಡಲಿಕ್ಕಿಲ್ಲಂತ ನನಗೆ ಆಶಾ ಇತ್ತು. ಅವರೆ ಅಲ್ಲೂ ಅದೇ ಹೊಲಸು. ಮಂಡಲ ಕಾಂಗ್ರೆಸ್ ಮಾಯಾಬಜಾರದ ಹಂಗ ಚುನಾವಣಾಸಮಿತಿಯದೂ ಒಂದು ಚಮತ್ಕಾರ ನಡದೈತಿ. "

" ಕಡೆಗೆ ಆದದ್ದಾದರೂ ಏನು ? "

" ಇನ್ನೂ ಏನೂ ಆಗಿಲ್ಲಪ್ಪ. ಬೆಂಗಳೂರಿನ ತುಂಬೆಲ್ಲಾ ಬರೀ ಅರ್ಜಿದಾರರು, ಅವರ ಬೆಂಬಲಿಗರು. ಒಂದು ಹೋಟಲಿನಾಗೂ ಇಳುಕೊಳ್ಳಾಕ ಜಾಗಾ ಸಿಕ್ಕರೆ ಹೇಳಿರಿ ! ಎಂ. ಪಿ. ಸಿ. ಸಿ. ಆಫೀಸಿನ ಮುಂದ ದಿನಾಲು ದೊಡ್ಡ ಜಾತ್ರಿ. ಚುನಾವಣಾಸಮಿತಿಯ ಮೆಂಬರುಗಳು ಆಫೀಸಿನೊಳಗ ಹೋಗೂದೂ ಕಷ್ಟ, ಬರೂದೂ ಕಷ್ಟ ಆಗೈತಿ. ಇಂಥಾ ಭಯಂಕರ ಕ್ಯಾನ್‌ವಾಸಿಂಗ್ ನಾ ಎಲ್ಲೆಲ್ಲೂ ನೋಡಿರಾಕಿಲ್ಲ. ಇದೆಲ್ಲಾ ಬರೀ ಒಂದು ಟಿಕೀಟಿಗಾಗಿ ! ಇನ್ನು ಎಲೇಶನಕ್ಕ ಎಷ್ಟು ಖರ್ಚು ಮಾಡ್ತಾರೋ ದೇವರೇ ಬಲ್ಲ ! "

" ಅಲ್ಲಿಯಾದರೂ ನಿಮಗ ಏನಾರ ಅನುಕೂಲ ಆತೇನ್ರಿ, ಗೌಡರೆ ? "

" ಎಲ್ಲೀ ಅನುಕೂಲ ಮಾರಾಯಾ ? ನಮ್ಮಂಥವರನ್ನ ಮಾತಾಡಿಸು ವವರೇ ಇಲ್ಲ ಬೆಂಗಳೂರಾಗ. ಎಲ್ಲಾ ರೊಕ್ಕದ ಮಂದಿಯುದೇ ದರಬಾರು. ಮಂಡಲ ಕಾಂಗ್ರೆಸ್ ಸದಸ್ಯರು ಲಂಚ ತಿಂದು ವೋಟು ಹಾಕಿದರಲ್ಲ ? ಪ್ರದೇಶ ಕಾಂಗ್ರೆಸ್ ಚುನಾವಣಾಸಮಿತಿಯವರಾದರೂ ಅಂಥಾ ಹೇಸಿತನಾ ಮಾಡಲಿ ಕ್ಕಿಲ್ಲಂತ ನಾ ತಿಳುಕೊಂಡಿದ್ದಿನಿ. ಆದರೆ ಅದರಾಗೂ ಒಬ್ಬಿಬ್ಬರು ಗಂಟು ತಿನ್ನುವವರು ಇದ್ದೇ ಇದಾರಂತ. ಅಂಥವರಿಗೆ ಹತ್ತಿಪ್ಪತ್ತು ಸಾವಿರ ರೂಪಾಯಿ ಕೊಟ್ಟು ತನ್ನ ಟಿಕೀಟು ಗಟ್ಟಿ ಮಾಡಿಕೊಂಡಾನಂತ ಸೆಟ್ಟಿ. "

ನಾವೆಲ್ಲ ನಿರೀಕ್ಷಿಕೊಂಡ ಹಾಗೆಯೇ ಆಯಿತು. ತಿಂಗಳೊಪ್ಪತ್ತು ಕಳೆದ ಮೇಲೆ ಚುನಾವಣಾಸಮಿತಿಯ ಶಿಫಾರಸುಗಳ ಯಾದಿ ಪ್ರಕಟವಾದಾಗ ಮಾದಾ ಪುರ ಜಿಲ್ಲೆಯಲ್ಲಿ ಮಲ್ಲಿಕಪ್ಪ, ಮಾಲಾದೇವಿ, ಬಸೆಟ್ಟಿ ಮೊದಲಾದವರೆಲ್ಲರಿಗೂ ಟಿಕೀಟು ಲಭಿಸಿದ್ದುದು ತಿಳಿದು ಬಂದಿತು.

ಅಂದು ರಾತ್ರಿಯಿಡೀ ನನಗೆ ನಿದ್ರೆ ಬರಲಿಲ್ಲ. ರುದ್ರಗೌಡನೂ ನಾನೂ ರೋಷದಿಂದ ತಳಮಳಿಸುತ್ತ ಇರುಳು ಕಳೆದೆವು. ಎಂ. ಪಿ. ಸಿ. ಸಿ. ಯ ಶಿಫಾರಸಿನ ವಿರುದ್ಧವಾಗಿ ಎ. ಐ. ಸಿ. ಸಿ. ಗೆ ಅರಿಕೆ ಮಾಡಿಕೊಳ್ಳುವುದೆಂದು ನಿಶ್ಚಯಿಸಿ, ಬೆಳಗಾಗುತ್ತಲೂ ಒಂದು ಅರ್ಜಿ ಟೈಪು ಮಾಡಿಸಿದೆವು. ಅದನ್ನು ತೆಗೆದುಕೊಂಡು ನಾವಿಬ್ಬರೂ ದಿಲ್ಲಿಗೆ ಹೊರಡುವುದೆಂದು ಗೊತ್ತಾಗಿತ್ತು. ಆದರೆ ಅದೇ ದಿನ ಆಕಸ್ಮಾತ್ತಾಗಿ ನಾನೊಂದು ಆಕಸ್ಮಿಕದಲ್ಲಿ ಸಿಲುಕಿಕೊಂಡು ಮಾದಾಪುರದಲ್ಲಿಯೆ ಉಳಿಯಬೇಕಾಯಿತು. ಎಂತಲೇ ರುದ್ರಗೌಡನೊಬ್ಬನೇ ಮೇಲು ಗಾಡಿ ಹಿಡಿದು ದಿಲ್ಲಿಗೆ ಹೊರಟು ಹೋದ.

ಅಂದು ಸಂಜೆ. ನಾನು ವಾಶಿಂಗ್‌ಕಂಪನಿಯಿಂದ ಬಟ್ಟೆ ತೆಗೆದುಕೊಂಡು ಬರುತ್ತಿದ್ದಂತೆ ಕುದುರೆ ಗಾಡಿಯಲ್ಲಿ ಕುಳಿತು ಹೊರಟಿದ್ದ ಕಾಮಾಕ್ಷಿಯನ್ನು ಕಂಡೆ. ಈ ಸಮಯದಲ್ಲಿ ದೇವರೇ ಅವಳ ಭೆಟ್ಟಿ ಮಾಡಿಸಿದ ! ಎಂದು ಹರ್ಷಿಸುತ್ತ ನಾನೂ ಅವಳನ್ನು ಹಿಂಬಾಲಿಸಿಕೊಂಡು ನಡೆದೆ. ನಾನು ಒಂದೆರಡು ಬಾರಿ ಕೂಗುತ್ತಲೂ ಅವಳು ಕುದುರೆ ಗಾಡಿಯನ್ನು ನಿಲ್ಲಿಸಬೇಕಾಯಿತು.

" ಯಾವಾಗ ಬಂದೆ ಕಾಮಾಕ್ಷಿ ? ಎತ್ತ ಹೊರಟೆ ? "

" ಮೈಯಲ್ಲಿ ನೆಟ್ಟಗಿಲ್ಲ. ಡಾಕ್ಟರಿಗೆ ತೋರಿಸೂದದ. "

"ನಮ್ಮ ಗೆಳೆಯರೊಬ್ಬರಿದಾರ. ಪ್ರಸಿದ್ಧ ಡಾಕ್ಟರು. ಅವರಿಗೆ ತೋರಿಸೂಣಂತೆ ನಿಲ್ಲು," ಎಂದು ಹೇಳಿದವನೆ, ಅವಳು ಕರೆಯುವುದನ್ನೂ ಕಾಯದೆ ಗಾಡಿ ಏರಿ ಕುಳಿತೆ.

ಕಾಮಾಕ್ಷಿ ತಬ್ಬಿಬ್ಬಾದಳು. ತುಂಬಿದ ಬೀದಿಯಲ್ಲಿ ನನ್ನೊಡನೆ ಅವಳು ಜಗಳಾಡುವಂತೆಯೂ ಇರಲಿಲ್ಲವಲ್ಲ ?

"ಕಹಾಂ ಜಾನಾ ಬಾಯಿಸಾಹೇಬ್ ? " ಎಂದ ಗಾಡಿಯವ.

"ಹೋಟೆಲ್‌ಕೊ ಚಲೊ," ಎಂದು ನಾನೇ ಅವನಿಗೆ ಆದೇಶವಿತ್ತು, ಕಾಮಾಕ್ಷಿಯತ್ತ ತಿರುಗಿ ಹೇಳಿದೆ :

"ಪ್ರವಾಸದಿಂದ ಆಯಾಸವಾಗಿರಬೇಕಲ್ಲ ? ಸ್ವಲ್ಪ ಹೊತ್ತು ಆರಾಮು ತಗೊಂಡು ಸಂಜೀಕಡೆ ಡಾಕ್ಟರರನ್ನ ನೋಡಿದರಾಯ್ತು."

ಅವಳು ಉತ್ತರವೀಯಲಿಲ್ಲ. ತುಟಿಗಳಲ್ಲಿಯೆ ನಕ್ಕು ಸುಮ್ಮನಿದ್ದಳು.

ಕೆಲವು ತಿಂಗಳುಗಳ ಹಿಂದೆ ನಾವು ಇಳಿದುಕೊಂಡಿದ್ದ ಹೋಟಲಿನಲ್ಲಿಯೆ ಈಗಲೂ ಬಿಡಾರ ಹೂಡಿದೆವು. ಕಾಮಾಕ್ಷಿ ಮುಖತೊಳೆದು, ಸೀರೆ ಬದಲಿಸಿ, ಹಣೆಗೆ ಕುಂಕುಮವಿಟ್ಟುಕೊಂಡು ಅಲಂಕೃತಳಾದಳು.

"ನಿನ್ನ ನೋಡಿದರ ಏನೂ ರೋಗ ಇದ್ದಂಗ ಕಾಣೂದಿಲ್ಲಲ್ಲ ಕಾಮಾಕ್ಷಿ ?" ಎಂದು ನಾನು ಹೇಳುತ್ತಲೂ ಅವಳು ಕಿಲಕಿಲನೆ ನಕ್ಕು,

"ರೋಗ ಇಲ್ಲ. ಏನಿಲ್ಲ. ಬಹಳ ಬೇಸರ ಆಗಿತ್ತು ಒಂದೆರಡು ದಿನ ಇಲ್ಲಿದ್ದು ಹೋಗೂಣಂತ ಬಂದಿನಿ," ಎಂದಳು.

" ಇಲ್ಲಿ ನಾ ಸಿಕ್ಕೇ ಸಿಗ್ತೀನಿ ಅಂತ ಗೊತ್ತೇ ಇದ್ದಿರಬೇಕು ? "

" ಸಿಕ್ಕರೂ ಸಿಗಬಹುದಂತ ಅನ್ನಿಸಿದ್ದು ನಿಜ."

" ಒಳ್ಳೆಯದೇ ಆಯ್ತು ಕಾಮಾಕ್ಷಿ. ನಿನಗೂ ಬೇಸರು. ನನಗೂ ಬೇಸರು. ಮುಂಬಯಿ, ದಿಲ್ಲಿ ನೋಡಿಕೊಂಡು ಬರೂಣು. ಬರ್ತೀಯಾ ? "

" ಅಷ್ಟು ದೂರ ಯಾಕ್ರೀ ಮಾರಾಯರೇ ? "

"ನಿಜ ಹೇಳೂದಾದರ ನಾನೂ ಇವತ್ತು ದಿಲ್ಲಿಗೆ ಹೊರಟಿದ್ದೆ—ಒಬ್ಬ ಮಿತ್ರರ ಸಂಗಡ: ಈಗ ನೀ ಭೆಟ್ಟಿಯಾದದ್ದರಿಂದ ನಮ್ಮ ಕಾರ್ಯಕ್ರಮ ಸ್ವಲ್ಪ ಬದಲಾಯಿತು. ಇವತ್ತು ಅವರೊಬ್ಬರೇ ಹೊರಡುತಾರ. ನಾಳೆ ನಾವಿಬ್ಬರೂ ಹೊರಡೋಣವಂತೆ. ಏನಂತೀ ? "

"ನಿಮ್ಮಂತೆ ನಾನೇನು ಸ್ವತಂತ್ರಳೇ ? ನೀವು ದಿಲ್ಲಿಗೂ ಹೋಗಬಲ್ಲಿರಿ, ಮದರಾಸಿಗೂ ಹೋಗಬಲ್ಲಿರಿ. ನಾನು ನಾಕು ದಿವಸ ಊರಲ್ಲಿರದಿದ್ದರೆ ಹಾಹಾಕಾರ ಆಗುತ್ತೈತಿ ..."

"ಆಗೂದೆಲ್ಲಾ ಆಗಲಿ. ಈ ಸಲ ಹೋಗೇ ಬಿಡೂಣು ಕಾಮಾಕ್ಷೀ. ಸೆಟ್ಟಿಯಂತೂ ನಿನ್ನ ಕರಕೊಂಡು ಹೋಗಲಿಲ್ಲ. ನನ್ನ ಸಂಗಡ ಆದರೂ ನಡಿಯಲ್ಲ !"

"ದಿಲ್ಲಿ ಅಂದರ ಹುಡುಗಾಟವೇನ್ರಿ ? ನಾಕೈದುನೂರು ರೂಪಾಯಿ ಬೇಕಾಗತಾವಲ್ಲ ?"

"ರೂಪಾಯಿಯ ಚಿಂತೆ ಯಾಕ ? ಏನಾದರೂ ಮಾಡಿದರಾಯ್ತು."

"ನನ್ನ ಹತ್ತರನೂ ಒಂದಿಷ್ಟು ಹಣ ಅದ. ಅದರದೇನು ಚಿಂತಿಲ್ಲ. ಆದರ್ರ ..."

"ಆದರ ಗೀದರ ಏನೂ ಇಲ್ಲ ಕಾಮಾಕ್ಷಿ. ಸೆಟ್ಟಿಗೆ ಅಂಜೂದು ಇನ್ನು ಸಾಕು. ಅವಗ ಅಂಜಿ ಅಂಜಿ ನಿನ್ನ ಬಾಳೇ ಹಾಳು ಮಾಡಿಕೊಳ್ಳುತೀಯೇನು ?" ಎಂದು ಹೇಳುತ್ತ ಅವಳನ್ನು ಬರಸೆಳೆದು ತಬ್ಬಿಕೊಂಡೆ.

ರಾತ್ರಿ ಕೊಟಡಿಗೇ ಊಟ ತರಿಸಿದೆವು. ಊಟದ ತಟ್ಟೆ ತಂದಿರಿಸಿದ ಮಾಣಿ ನಮ್ಮನ್ನು ವಿಚಿತ್ರವಾಗಿ ದಿಟ್ಟಿಸುತ್ತ ಹೊರಟುಹೋದ. ನಾನು ಅತ್ತ ಗಮನವನ್ನೇ ಕೊಡದೆ ಕಾಮಾಕ್ಷಿಯನ್ನು ಪ್ರಸನ್ನಗೊಳಿಸಲು ಪ್ರಯತ್ನಿಸ ತೊಡಗಿದೆ. ಅವಳನ್ನು ಸಂಪೂರ್ಣವಾಗಿ ಗೆದ್ದು, ದಿಲ್ಲಿಗೆ ಕರೆದೊಯ್ದು, ಕಾಂಗ್ರೆಸ್ ಅಧ್ಯಕ್ಷರೆದುರು ನಿಲ್ಲಿಸಿ, ಬಸೆಟ್ಟಿಯ ಇತಿಹಾಸವನ್ನೆಲ್ಲ ಅವಳ ಬಾಯಿಂದಲೇ ಹೇಳಿಸಿ, ಅವನಿಗೆ ದೊರೆತ ಟಿಕೀಟಿನ ಮೇಲೆ ಕಲ್ಲು ಹಾಕಬೇಕೆಂದು ನಾನು ನಿಶ್ಚಯಿಸಿಕೊಂಡಿದ್ದೆ.

ಆದರೆ, ಅದೆಲ್ಲವೂ ಶೇಖಮಹಮ್ಮದನ ಸ್ವಪ್ನವಾಯಿತು. ನನ್ನೊಡನೆ ದಿಲ್ಲಿಗೆ ಬರುವುದರ ಬದಲು, ಆ ರಾತ್ರಿ ಈ ಲೋಕವನ್ನೆ ತ್ಯಜಿಸಿ ಹೋದಳು ಕಾಮಾಕ್ಷಿ.

ಆ ಭೀಕರ ಘಟನೆ ನಡೆದದ್ದು ಹೀಗೆ :

ಮಧ್ಯರಾತ್ರಿಯಲ್ಲಿ ಬಾತ್‌ರೂಮಿಗೆ ಹೋಗಿ ಬರುವುದಾಗಿ ಹೇಳಿ ಕಾಮಾಕ್ಷಿ ಹೊರಗೆ ಹೋದಳು. ನಮ್ಮ ಕೊಟಡಿಯಿಂದ ಹತ್ತು ಹೆಜ್ಜೆಗಳ

ಅಂತರದಲ್ಲಿಯೆ ಬಾತ್‌ರೂಂ ಇದ್ದುದರಿಂದ ಭೀತಿಗೇನೂ ಕಾರಣವಿಲ್ಲವೆಂದು ಕೊಂಡು ನಾನು ಹಾಸುಗೆಯ ಮೇಲೆಯೇ ಬಿದ್ದುಕೊಂಡಿದ್ದೆ. ನಾನು ಅಷ್ಟು ನಿಶ್ಚಿಂತೆಯಿಂದ ಮಲಗಿದ್ದುದೇ ತಪ್ಪಾಯಿತು. ಬಾತ್‌ರೂಮಿಗೆಂದು ಹೋದ ಕಾಮಾಕ್ಷಿ ಹತ್ತುನಿಮಿಷ ಕಳೆದಮೇಲೂ ಹಿಂದಿರುಗಿ ಬರಲಿಲ್ಲ. ಆಗ ಮಾತ್ರ ಏನೋ ಅನುಮಾನ ಬಂದು ನಾನು ಕೊಟಡಿಯಿಂದ ಧಾವಿಸಿ ಹೋದೆ. ಉದ್ದಕ್ಕೂ ಹೋಟಲು ರೂಮುಗಳ ಸಾಲು. ಓಣಿಯಲ್ಲಿ ಕತ್ತಲೋ ಕತ್ತಲು. ಗುಂಡಿಯೊತ್ತಿ ವಿದ್ಯುದ್ದೀಪ ಬೆಳಗಿಸಿದಾಗ, ಬಾತ್‌ರೂಮಿನ ಬಾಗಿಲ ಬಳಿ ಕಾಮಾಕ್ಷಿ ನಿಶ್ಚೇಷ್ಟಿತಳಾಗಿ ಬಿದ್ದುಕೊಂಡಿದ್ದುದು ಕಾಣಿಸಿತು. ಗಾಬರಿಗೊಂಡು ಅವಳ ನಾಡಿ ಹಿಡಿದು ನೋಡಿದರೆ, ಅಗರ ಚಲನವಲನ ಪೂರ್ತಿಯಾಗಿ ನಿಂತು ಹೋಗಿದ್ದುದು ಗೊತ್ತಾಯಿತು. ಶ್ವಾಸೋಚ್ಛ್ವಾಸವೂ ನಿಂತು ಹೋಗಿತ್ತು. ಕತ್ತಲಲ್ಲಿ ಹೊಂಚಿ ಕುಳಿತ ಕೊಲೆಗಡುಕರು, ಅವಳು ಕೂಗಿಕೊಳ್ಳುವುದಕ್ಕೂ ಆಸ್ಪದವೀಯದೆ, ಕತ್ತು ಹಿಸುಕಿ ಕೊಂದುಹಾಕಿರಬೇಕೆಂದು ತೋರಿತು.

ಕೆಳಗಿಳಿದು ಹೋಗಿ ಹೋಟಲು ಮ್ಯಾನೇಜರನ್ನು ಎಬ್ಬಿಸಿದೆ. ಐದು ಹತ್ತು ನಿಮಿಷಗಳಲ್ಲಿಯೆ ಹೋಟಲಿನಲ್ಲಿ ಬಿಡಾರ ಮಾಡಿದ್ದ ಪ್ರವಾಸಿಕರೆಲ್ಲ ಎದ್ದು ಕಾಮಾಕ್ಷಿಯ ಶವದ ಸುತ್ತ ನೆರೆದರು. ಮ್ಯಾನೇಜರು ಫೋನು ಮಾಡಿದೊಡನೆಯೇ ಸೋಮಯ್ಯನೂ ಬಂದು ಉಪಸ್ಥಿತನಾದ.

"ಒಂದಿಲ್ಲೊಂದು ದಿವಸ ನೀನು ಇಂಥಾದ್ದೇನಾದರೂ ಮಾಡೇ ಮಾಡತೀ ಅಂತ ನನಗೆ ಗೊತ್ತೇ ಇತ್ತು. ಸೆಟ್ಟರ ಹೆಂಡತಿಯನ್ನ ಕೊಂದು ನಿನ್ನ ಸೇಡು ತೀರಿಸಿಕೊಂಡೇ ಬಿಟ್ಟೆಯಲ್ಲ!" ಎಂದ ಸೋಮಯ್ಯ.

"ಕೊಲೆಗೂ ನನಗೂ ಏನೂ ಸಂಬಂಧವಿಲ್ಲ ಸೋಮಯ್ಯ. ನಾನು ರೂಮಿನಲ್ಲೇ ಮಲಗಿದ್ದೆ. ಕಾಮಾಕ್ಷಿ ಬಾತ್‌ರೂಮಿಗೆ ಹೋಗಿದ್ದಾಗ ಯಾರೋ ದುಷ್ಟರು ಕೊಂದುಬಿಟ್ಟಾರ!"

"ಇಂಥಾ ಮಾತು ನಂಬಲಿಕ್ಕೆ ನಾನೇನು ಮೂರ್ಖನೇನೋ ಸದ್ಯಾ? ರೂಮಿನಲ್ಲೇ ಅವಳ ಕುತ್ತಿಗೆ ಹಿಸುಕಿ ಕೊಲೆ ಮಾಡಿ ಇಲ್ಲಿ ತಂದು ಚೆಲ್ಲಿದ್ದೀಯಾ. ಅಷ್ಟೂ ತಿಳಿಯೂದಿಲ್ಲೇನು ನನಗ?" ಎಂದ ಸೋಮಯ್ಯ. ಅನಂತರ, ನೆರೆದಿದ್ದ ಜನರ ಕಡೆ ತಿರುಗಿ ಆತನೆಂದ: "ನೋಡಿರಪ್ಪಾ, ಇವನೊಬ್ಬ ಈ ಊರಿನ ಬದ್ಮಾಷ. ಈಕೆ ಇವನ ಹೆಂಡತಿಯಲ್ಲ, ಈತ ಇವಳ ಗಂಡನಲ್ಲ.

ಪ್ರಸಿದ್ಧ ಕಾಂಗ್ರೆಸ್ ಲೀಡರ್ ಬಸೆಟ್ಟಿಯುವರ ಪ್ರಥಮ ಪತ್ನಿ ಈಕೆ. ಸೆಟ್ಟರಿಗೂ ಇವಗೂ ನೆಟ್ಟಗಿಲ್ಲ. ಅದಕ್ಕ ಅವರ ಮ್ಯಾಲಿನ ದ್ವೇಷ ತೀರಿಸಿಕೊಳ್ಳಲಿಕ್ಕಂತ ಈಕೆಯನ್ನ ಮರುಳು ಮಾಡಿ ಹೋಟಲಿಗೆ ಕರೆತಂದು ಖೂನೀ ಮಾಡಿದಾನ."

ನೆರೆದವರೆಲ್ಲರೂ ಸೋಮಯ್ಯನ ಮಾತನ್ನೇ ನಂಬಿದ ಹಾಗೆ ಕಾಣಿಸಿತು. ನನ್ನ ನಿರಪರಾಧಿತ್ವವನ್ನು ನಾನು ಅವರಿಗೆ ಮನವರಿಕೆ ಮಾಡಿಕೊಡುವಂತೆಯೂ ಇರಲಿಲ್ಲವಲ್ಲ ? ಪರಸ್ತ್ರೀಯ ಜೊತೆಯಲ್ಲಿ ಹೋಟಲಿನಲ್ಲಿ ಬಿಡಾರ ಹೂಡಿದ್ದುದೇ ನನ್ನ ಪ್ರಥಮ ಅಪರಾಧವಾಗಿತ್ತು. ಅಂಥ ಅಪರಾಧಕ್ಕೆ ಎಂಥ ಶಿಕ್ಷ ಲಭಿಸಿತ್ತು !

## ೧೬

ಒಂದು ವರ್ಷವುರುಳಿದೆ, ಕಾಮಾಕ್ಷಿಯ ಕೊಲೆ ನಡೆದು.

ಈ ಅವಧಿಯಲ್ಲಿ ಅನೇಕ ಘಟನೆಗಳು ನಡೆದುಹೋಗಿವೆ. ರುದ್ರಗೌಡ ದಿಲ್ಲಿಗೆ ಹೋಗಿ ಕುಳಿತು ಪ್ರಯತ್ನಪಟ್ಟರೂ ಅದರಿಂದೇನೂ ಪ್ರಯೋಜನವಾಗಲಿಲ್ಲ. ಕಡೆಗೂ ಬಸೆಟ್ಟಿಯೇ ಕಾಂಗ್ರೆಸ್ ಟಿಕೀಟು ಗೆದ್ದುಕೊಂಡ. ಈ ಅನ್ಯಾಯವನ್ನು ಪ್ರತಿಭಟಿಸದೆ ಸುಮ್ಮನಿರಬಾರದೆಂದು ಬಗೆದು ರುದ್ರಗೌಡ ಕಾಂಗ್ರೆಸ್ಸಿಗೆ ರಾಜಿನಾಮೆಯಿತ್ತು ಸ್ವತಂತ್ರವಾಗಿ ಸ್ಪರ್ಧಿಸಿದ. ಅವರಿಬ್ಬರಲ್ಲಿಯೇ ಸ್ಪರ್ಧೆ ನಡೆದಿದ್ದ ಪಕ್ಷಕ್ಕೆ ರುದ್ರಗೌಡ ಆರಿಸಿಬರಬಹುದಾಗಿದ್ದಿತೊ ಏನೊ. ಆಗರೆ, ಪ್ರಜಾಸಮಾಜವಾದಿ ಪಕ್ಷದವರೂ ತಮ್ಮ ಹುರಿಯಾಳುವನ್ನು ನಿಲ್ಲಿಸಿದರು. ಎಂತಲೇ, ಬಸೆಟ್ಟಿ-ರುದ್ರಗೌಡ ಇಬ್ಬರೂ ಸೋತು ಹೋಗಿ ಪ್ರಜಾಸಮಾಜವಾದಿ ಹುರಿಯಾಳು ಆಯ್ಕೆ ಹೊಂದಿದ.

ಮಲಿಕಪ್ಪ-ಮಾಲಾದೇವಿಯರೂ ಚುನಾವಣೆಯಲ್ಲಿ ಸೋತುಹೋದರು.

ಸೆಶನ್ಸ್ ಕೋರ್ಟಿನಲ್ಲಿ ನನ್ನ ವಿಚಾರಣೆ ನಡೆದು, ಕೊಲೆಯ ಅಪರಾಧ ಸಿದ್ಧವಾಗಿ, ನನಗೆ ಹತ್ತುವರ್ಷಗಳ ಸಶ್ರಮಶಿಕ್ಷೆ ಲಭಿಸಿತು ಒಬ್ಬ ವಕೀಲರನ್ನಿಟ್ಟು ರುದ್ರಗೌಡ ನನ್ನನ್ನುಳಿಸಿಕೊಳ್ಳಲು ಪ್ರಯತ್ನಪಟ್ಟನಾದರೂ ಅದ-ರಿಂದೇನೂ ಉಪಯೋಗವಾಗಲಿಲ್ಲ.

ಈಗ ಪುನಃ ರುದ್ರಗೌಡನ ಸಹಾಯದಿಂದಲೇ ಹೈಕೋರ್ಟಿಗೆ ಅಪೀಲು ಮಾಡಿದುದಾಗಿದೆ. ಅಲ್ಲಿಯೂ ನನ್ನ ಶಿಕ್ಷೆ ರದ್ದಾಗಿ ನನ್ನ ಬಿಡುಗಡೆಯಾಗಬಹುದೆಂಬ ಆಸೆಯೇನೂ ಉಳಿದಿಲ್ಲ. ಹತ್ತುವರ್ಷಗಳ ಸೆರೆಮನೆವಾಸ ನನ್ನ ಹಣೆಯಲ್ಲಿಯೆ ಬರೆದಿದೆಯೆಂದು ಕಾಣುತ್ತದೆ.

ಈ ನಡುವೆ ಒಮ್ಮೆ ಲೀಲಾವತಿ ನನ್ನನ್ನು ಭೆಟ್ಟಿಯಾಗಲು ಬಂದಿದ್ದಳು. ಆದರೆ ಅವಳ ಬಗೆಗೆ ನನ್ನಲ್ಲಿ ಮೊದಲಿನ ವಿಶ್ವಾಸವುಳಿದಿಲ್ಲ. ಬಸೆಟ್ಟಿಯ ಅನೇಕ ಹಸ್ತಕರಲ್ಲಿ ಅವಳೂ ಒಬ್ಬಳೆಂಬುದು ಖಚಿತವಾಗಿದೆ. ಕಾಮಾಕ್ಷಿಯೂ ನಾನೂ ಮಾದಾಪುರದ ಹೋಟಲಲ್ಲಿ ಮೊದಲಬಾರಿ ಇಳಿದುಕೊಂಡಿದ್ದ ವಿಷಯವನ್ನು ಅವಳು ಬಸೆಟ್ಟಿಗೆ ವರದಿ ಮಾಡಿದ್ದುದು ಖಂಡಿತವೆಂದೇ ತೋರುತ್ತದೆ. ಹೆಣ್ಣಿಗೆ ಸಹಜವಾದ ಮತ್ಸರ ಬುದ್ಧಿಯೂ ಹಣದಾಸೆಯೂ ಅದಕ್ಕೆ ಕಾರಣವೆಂಬುದು ಸ್ಪಷ್ಟವಿದೆ

ರಾಧೆ ?

ನಾನು ಪೋಲೀಸರ ಕೈಗೆ ಸಿಕ್ಕಿಬಿದ್ದು ಸೆರೆಮನೆಗೆ ಬಂದಂದಿನಿಂದಲೂ ಅವಳ ಸಮಾಚಾರವೇ ಇಲ್ಲ. ಅವಳು ಮಾದಾಪುರದಲ್ಲಿ ಇರಲಿಕ್ಕಿಲ್ಲವೆಂದೇ ನನ್ನ ಭಾವನೆ. ನನ್ನನ್ನು ಬಂಧಿಸಿದ ತರುವಾಯ ಸೋಮಯ್ಯ ರಾಧೆಯನ್ನೂ ಹಿಂಸಿಸಿ ಅವಳು ಮಾದಾಪುರವನ್ನೇ ತ್ಯಜಿಸಿ ಹೋಗುವಂತೆ ಮಾಡಿರಬೇಕೆಂದು ತೋರುತ್ತದೆ. ರಾಧೆಯನ್ನು ಜ್ಞಾಪಿಸಿಕೊಂಡಾಗಲೆಲ್ಲ ನನ್ನ ಕರುಳು ಮಿಡಿಯುತ್ತದೆ. ಆದರೆ, ಬಂದಿಯಾಗಿ ಬಿದ್ದಿರುವ ನಾನು ಮಾಡುವುದಾದರೂ ಏನು ?

...ಊಟದ ಗಂಟೆ ಬಾರಿಸುತ್ತಿದೆ. ಬರಾಕಿನಲ್ಲಿನ ಇತರ ಸೆರೆಯಾಳುಗಳು ತಮ್ಮ ತಮ್ಮ 'ಥಾಲೀಪಾಟು' ತೆಗೆದುಕೊಂಡು, ಊಟ ನೀಡಿಸಿಕೊಳ್ಳಲು ಸಾಲಾಗಿ ಕುಳಿತಿದ್ದಾರೆ. ನಾನು ಮಾತ್ರ ನನ್ನ ಸ್ಥಳ ಬಿಟ್ಟು ಕದಲದೆ, ಕಿಟಕಿಯಿಂದಾಚೆ ಕಾಣುತ್ತಿರುವ ಮೇಘಾಚ್ಛಾದಿತ ಆಕಾಶವನ್ನು ಶೂನ್ಯ ದೃಷ್ಟಿಯಿಂದ ನಿರುಕಿಸುತ್ತ ಕುಳಿತಿದ್ದೇನೆ. ಹಸಿವು ? ನನಗೆಲ್ಲಿಯ ಹಸಿವು ? ಈ ಸಮಯದಲ್ಲಿ ನನಗಾವುದೂ ಬೇಡವಾಗಿದೆ.

"ಏಯ್ ಕೈದೀ ! ರೊಟ್ಟಿ ಬೇಕೋ ಬ್ಯಾಡೋ ?" ವಾರ್ಡರನ ಕರ್ಕಶ ಸ್ವರ ಕೇಳಬರುತ್ತದೆ.

ಆಗ ಮಾತ್ರ ನಾನು ಕುತಲ್ಲಿಂದ ಎದ್ದು ಯಾಂತ್ರಿಕವಾಗಿ ಮುಂದೆ ನಡೆಯುತ್ತೇನೆ.



# ತಪ್ಪು-ಒಪ್ಪು

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೧೯ | ವಿರಡು | ಎರಡು |
| ೧೫ | ೬ | ಅದ: ವರೆಗೂ | ಆದುವರೆಗೂ |
| ೩೪ | ೮ | ಕಾಂಗ್ರೆಸ್ಸಿಗರು | ಅನೇಕ ಕಾಂಗ್ರೆಸ್ಸಿಗರು |
| ೩೪ | ೧೨ | ಕಾಜ್ಯದಲ್ಲಿ | ರಾಜ್ಯದಲ್ಲಿ |
| ೩೫ | ೮ | ನಿಧಾನವಾತ | ನಿಧಾನವಾಗಿ |
| ೩೫ | ೧೭ | ಸೀರೆಯಿಟ್ಟು | ಸೀರೆಯುಟ್ಟು |
| ೪೦ | ೭ | ಮಧ್ಯಾಹ್ನದ | ಮಧ್ಯಾಹ್ನದ |
| ೪೭ | ೧೧ | ಪರೀಕ್ಷಿ | ಪರೀಕ್ಷೆ |
| ೪೭ | ೧೬ | ಎಂದವಳು | ಎಂದಳವಳು |
| ೧೦೮ | ೩ | ಹೊಂಟೆ | ಹೊರಟೆ |
| ೧೧೦ | ೨೦ | ಬೈರಿಗೆ | ಬೈರಿಗೆ |
| ೧೪೧ | ೪ | ಕೆವಲರು | ಕೆಲವರು |

